# ಕರ್ನಾಟಕದಲ್ಲಿ ಮೈಲಾರ ಪರಂಪರೆ: ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

896-900

ಸಂಶೋಧಕರು
ನವೀನಕುಮಾರ್ ಪಿ.

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ
ಪ್ರಾಧ್ಯಾಪಕರು



ಸಮಾಜ-ವಿಜ್ಞಾನ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಕರ್ನಾಟಕದಲ್ಲಿ ಮೈಲಾರ ಪರಂಪರೆ: ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ.ಹಂಪಿ

ಸಂಶೋಧಕರು
**ನವೀನಕುಮಾರ್ ಪಿ.**

ಮಾರ್ಗದರ್ಶಕರು
**ಡಾ. ವಾಸುದೇವ ಬಡಿಗೇರ**
ಪ್ರಾಧ್ಯಾಪಕರು



**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ–೫೮೩ ೨೭೬
೨೦೧೮

# ಸಂಶೋಧಕರ ಘೋಷಣಾ ಪತ್ರ

**"ಕರ್ನಾಟಕದಲ್ಲಿ ಮೈಲಾರ ಪರಂಪರೆ: ಚಾರಿತ್ರಿಕ ಅಧ್ಯಯನ"** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ವಾಸುದೇವ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.


ಸಂಶೋಧಕರು

ನವೀನ್‌ಕುಮಾರ್ P.

**ನವೀನಕುಮಾರ್ ಪಿ.**

ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ

ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬


ಸ್ಥಳ : ವಿದ್ಯಾರಣ್ಯ

ದಿನಾಂಕ : 05-12-2018.

# ಮಾರ್ಗದರ್ಶಕರ ದೃಢೀಕರಣ ಪತ್ರ

**ನವೀನಕುಮಾರ್** ಪಿ. ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಕರ್ನಾಟಕದಲ್ಲಿ ಮೈಲಾರ ಪರಂಪರೆ: ಚಾರಿತ್ರಿಕ ಅಧ್ಯಯನ"** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

5/2/18

**ಡಾ. ವಾಸುದೇವ ಬಡಿಗೇರ**
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 05/02/2018.

# ಪರಿವಿಡಿ

# ಅಧ್ಯಾಯ : ಒಂದು

## ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಸಮೀಕ್ಷೆ

೧.೪. ಅಧ್ಯಯನದ ವಿಧಾನ

೧.೫. ಅಧ್ಯಯನದ ಸ್ವರೂಪ

## ಅಧ್ಯಾಯ: ಒಂದು

# ಪ್ರಸ್ತಾವನೆ

ಮಾನವನು ಹಲವಾರು ಶಿಲಾಯುಗಗಳನ್ನು ದಾಟಿ ತನ್ನದೆ ಆದ ಸಮುದಾಯಗಳಲ್ಲಿ ಗುಂಪು ಜೀವನ ಬುಡಕಟ್ಟು ಹಾಗೂ ನಾಗರೀಕತೆಯ ಮೂಲಕ ಸಾಮಾಜಿಕವಾದ ಸಂಸ್ಕೃತಿಯನ್ನು ರೂಪಿಸಿಕೊಂಡಿದ್ದಾನೆ. ಎಲ್ಲಾ ಸಂದರ್ಭಗಳಲ್ಲೂ ತಾನು ಜೀವಿಸಿದ ಸ್ಥಳಗಳಲ್ಲಿ ಚಾರಿತ್ರಿಕ ಅಂಶಗಳನ್ನು ಅದಕ್ಕೆ ಅನುಗುಣವಾದ ಆಕರಗಳನ್ನು ಬಿಟ್ಟು ಮುಂದಿನ ಪೀಳಿಗೆಯ ಜೀವನ ವಿಧಾನಕ್ಕೆ ಉಪಯುಕ್ತವಾದ ಮಾಹಿತಿಯನ್ನು ನೀಡುತ್ತಾ ಮುಂದುವರೆದಿರುವುದನ್ನು ಕಾಣಬಹುದು.

ವಿಶಾಲ ಅರ್ಥದಲ್ಲಿ ಚರಿತ್ರೆಯು ಅಖಂಡವಾದದ್ದು, ಇದು ಇಡಿ ಮಾನವ ಜನಾಂಗದ ಕಥೆ. ಮಾನವನು ಭೂಮಿಯ ಮೇಲೆ ಕಾಣಿಸಿಕೊಂಡ ಬಳಿಕ ವಿವಿಧ ಶಿಲಾಯುಗಗಳನ್ನು ದಾಟಿ ಸಮುದಾಯ, ಗುಂಪು ಜೀವನ ವಿಧಾನ ಮತ್ತು ಸಂಸ್ಕೃತಿಯನ್ನು ರೂಪಿಸಿಕೊಂಡಿದ್ದಾನೆ. ಹೀಗೆ ಆತನ ಬದುಕಿನುದ್ದಕ್ಕೂ ಉಳಿದು ಬಂದ ಪ್ರಾಚ್ಯಾವಶೇಷಗಳು ಅವನ ಕಾಲದ ಚರಿತ್ರೆ ಹಾಗೂ ಸಂಸ್ಕೃತಿಯನ್ನು ಕಟ್ಟುವ ಬಹುಮುಖ್ಯ ಆಕರ ಸಂಪತ್ತಾಗಿರುತ್ತದೆ. ಈ ಎಲ್ಲಾ ಸಂದರ್ಭಗಳಲ್ಲಿ ತನ್ನ ಚಟುವಟಿಕೆಯನ್ನು ಮುಂದುವರೆಸಿಕೊಂಡು ಬಂದಿದ್ದಾನೆ.

ಕರ್ನಾಟಕದ ಸಂದರ್ಭಕ್ಕೆ ಬಂದಾಗ ದೈವಾರಾಧನೆಯು ಒಂದಾಗಿದೆ. ಜಗತ್ತಿನ ಅತ್ಯಂತ ಪ್ರಾಚೀನ ಆರಾಧನಾ ಪದ್ಧತಿಗಳಲ್ಲಿ ಒಂದು ಜಗತ್ತಿನ ದೈವದ ಕಲ್ಪನೆ, ಹುಟ್ಟಿ ಬೆಳವಣಿಗೆಯು ಮಾನವ ನಡೆ ಪ್ರಾಚೀನವಾದುದು. ಹೀಗಾಗಿ ದೇವರು ಮನುಷ್ಯರನ್ನು ಪ್ರತ್ಯೇಕಿಸಿ ನೋಡುವುದು. ಅಸಾಧ್ಯವಾದ ಮಾತು, ಮಾನವ ಒಂದು ಕಡೆ ನೆಲೆ ನಿಂತು ತನ್ನ ದೈನಂದಿನ ಆಗುಹೋಗುಗಳಿಗೆ ಮತ್ತು ತನ್ನ ಬದುಕಿನಲ್ಲಿ ಅಗತ್ಯವಾದ ವಸ್ತುಗಳನ್ನು ಪ್ರಕೃತಿ ಕೊಡುತ್ತದೆ ಎಂದು ನಂಬಿದ್ದ. ಜೊತೆಗೆ ತನ್ನ ಸುತ್ತಲಿನ ಪ್ರಕೃತಿಯಲ್ಲಿ ದಿವ್ಯವಾದ ಶಕ್ತಿಯನ್ನು ಕಂಡುಕೊಂಡನು. ಇಂತಹ ಪ್ರಾಕೃತಿಕ ಅಗೋಚರ ಶಕ್ತಿಗಳ ಭಯದಿಂದ ಪಾರಾಗಲು ತನಗೆ ಆಧಾರವಾದ ಈ ನಿಸರ್ಗವನ್ನು ಅದರ ಬಹುಮುಖಗಳಲ್ಲಿ ಆರಾಧಿಸುತ್ತಾ

ಬಂದು, ವಿಶಿಷ್ಟವಾದ ಜೀವನ ಪದ್ಧತಿಯನ್ನು ರೂಢಿಸಿಕೊಂಡನು. ಅಂತಹ ಪ್ರಕೃತಿಯ ಕೋಪದಿಂದ ಮುನಿಸಿಕೊಂಡಾಗ ಅದನ್ನು ಸಂತೈಷಿಸಲು ಹಲವು ನಂಬಿಕೆಗಳನ್ನು ಸೃಷ್ಟಿಸಿಕೊಂಡನು. ಹೀಗಾಗಿ ಅವುಗಳಿಗೆ ಸಂಬಂಧಿಸಿದಂತೆ. ಹಲವಾರು ಆಚರಣೆ, ಸಂಪ್ರದಾಯಗಳು ಹುಟ್ಟಿ ಬೆಳೆದು ಬಂದಿರುವುದು ಕಾಣುತ್ತದೆ. ಮಾನವನು ತಾನು ಜಯಿಸಬೇಕಾಗಿದೆ ಎಂದುಕೊಂಡು ನಿಸರ್ಗದ ಶಕ್ತಿಗಳನ್ನು ಬಳಸಿಕೊಳ್ಳಲು ಹಾಗೂ ಆರಂಭದ ಹಂತದಲ್ಲಿ ಮಾಡಿದ ತರ್ಕ ಏನೇನು ದಾರಿಗಳನ್ನು ಸೂಚಿಸಿತೂ ಅವೆಲ್ಲವೂ ಆಚರಣೆಗಳಾಗಿ ರೂಪಗೊಂಡವು. ಇಂತಹ ಆಚರಣೆ ಮತ್ತು ನಂಬಿಕೆಯ ಮೂಲಕವೇ ದೈವಗಳ ಬಗೆಗಳ ಪರಿಕಲ್ಪನೆ ಬೆಳೆದು ಬಂದಿತು. ಪ್ರಕೃತಿಯಲ್ಲಿ ನಡೆಯುವ ಎಲ್ಲಾ ಘಟನೆಗಳ ಯಾವುದೋ ಒಂದು ಶಕ್ತಿ ಕಾರಣವಾಗಿರಬೇಕೆಂದು ನಂಬಿದ್ದ ಮನುಷ್ಯ ಆ ಶಕ್ತಿಯನ್ನೇ ದೈವವೆಂದು ತಿಳಿದು ಪೂಜಿಸಿ ಆರಾಧಿಸಿ ಪ್ರತಿಮೆ ರೂಪ ನೀಡಿದನು. ಜೊತೆಗೆ ಅವುಗಳನ್ನು ಪೂಜಿಸುವ ವಿವಿಧ ವಿಧಾನಗಳನ್ನು ಅನುಭವದ ಆಧಾರದ ಮೇಲೆ ಸೃಷ್ಟಿಸಿಕೊಂಡನು. ಹಾಗೆ ವ್ಯಕ್ತಿಯಿಂದ ವ್ಯಕ್ತಿಗೆ ಸಮುದಾಯದಿಂದ ಸಮುದಾಯಕ್ಕೆ ದೈವಗಳ ಗ್ರಹಿಕೆಯಲ್ಲಿ ರೂಪ ತಾಳಲು ಕಾರಣವಾಗಿ ರೂಪಾಂತರಗಳನ್ನು ಪ್ರಸ್ತುತದಲ್ಲಿ ಕಾಣುತ್ತೇವೆ.

ಮಾನವನು ಕಲ್ಪಿಸಿಕೊಂಡ ದೈವದ ಆರಾಧನೆ ಅನೇಕ ಆಯಾಮಗಳಿವೆ. ಆರಾಧನೆಯು ಮಾನವನ ಪ್ರಮುಖವಾದ ಕ್ರಿಯಾವಿಧಾನವಾಗಿದೆ. ಈ ಎಲ್ಲಾ ಕಾರಣಗಳಿಂದ ಪ್ರಪಂಚದ ತುಂಬಾ ವಿವಿಧ ರೀತಿಯ ವೈವಿಧ್ಯಮಯವಾದ ದೈವಗಳ ಸೃಷ್ಠಿ ಮತ್ತು ಆರಾಧನೆಯನ್ನು ಕಾಣಬಹುದಾಗಿದೆ. ಪ್ರಮುಖವಾಗಿ ಕರ್ನಾಟಕ ದೇವತೆಗಳ ಆರಾಧನೆಯ ದೃಷ್ಟಿಯಲ್ಲಿ ಮೈಲಾರನ ಆರಾಧನೆಯು ಒಂದು ಈ ದೈವದ ಅಸ್ತಿತ್ವವನ್ನು ತಿಳಿಯಲು ಅನೇಕ ಆಕರ ಸಾಮಗ್ರಿಗಳಿವೆ. ಕಥೆ, ಪುರಾಣ, ಐತಿಹ್ಯ, ಕಾವ್ಯ, ಶಾಸನ, ದೇವಾಲಯಗಳು ಹಾಗೂ ನಂಬಿಕೆ ಆಚರಣೆಗಳಾಗಿವೆ. ಈ ಆಕರ ಸಾಮಗ್ರಿಗಳ ಮೂಲಕ ಈ ದೈವದ ಆಸ್ತಿತ್ವವನ್ನು ಪರಂಪರಾನುಗತವಾಗಿ ನಡೆದುಕೊಂಡು ಬಂದಿರುವುದು ಕಾಣಬಹುದಾಗಿದೆ.

ಕರ್ನಾಟಕವು ವಿಭಿನ್ನ ಸಂಸ್ಕೃತಿಯನ್ನು ಹೊಂದಿರುವ ಪ್ರದೇಶವಾಗಿದೆ. ಅನೇಕ ಸಮುದಾಯ, ಧರ್ಮಗಳಿದ್ದರೂ ಎಲ್ಲಾ ಒಟ್ಟಿಗೆ ಸೇರಿ ಸಾಂಸ್ಕೃತಿಕವಾದ ಜೀವಂತಿಕೆಯನ್ನು ಉಳಿಸಿಕೊಂಡಿದೆ. ಅನೇಕ ಸಾಂಸ್ಕೃತಿಕ ನಾಯಕರ ಪ್ರಭಾವ ಮತ್ತು ಪರಂಪರೆಯನ್ನು ನಾಡಿನ ಉದ್ದಗಲಕ್ಕೂ ಹಾಡಿ ಜನಸಾಮಾನ್ಯರ ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿದಿರುವುದನ್ನು ಕಾಣಬಹುದು. ಕರ್ನಾಟಕದಲ್ಲಿ ಆರಾಧ್ಯ ದೈವಗಳಾದ ಮಂಟೇಸ್ವಾಮಿ, ಮಲೆಮಾದೇಶ್ವರ, ರಂಗನಾಥ, ಕುಮಾರರಾಮ, ದೈವಗಳಂತೆ ಮೈಲಾರ ದೇವರ ಪರಂಪರೆ ನಾಡಿನ ಉದ್ದಗಲಕ್ಕೂ ಹಾಗೂ ಅಕ್ಕಪಕ್ಕ ರಾಜ್ಯಗಳಾದ ಆಂಧ್ರಪ್ರದೇಶ ಮಹಾರಾಷ್ಟ್ರ, ಗೋವಾ, ತಮಿಳುನಾಡಿಗೂ ಹರಡಿದೆ. ಮೈಲಾರ ಪರಂಪರೆಯೂ ಚಾರಿತ್ರಿಕವಾಗಿ ಅನೇಕ ಸಂಗತಿಗಳನ್ನು

ಮೈಗೂಡಿಸಿಕೊಂಡಿರುವುದನ್ನು ಗಮನಿಸಬಹುದು. ಮಂಟೇಸ್ವಾಮಿ, ಮಲೆಮಾದೇಶ್ವರ ಪರಂಪರೆಗಳು ಹೇಗೆ ತಮ್ಮ ಸಂಸ್ಕೃತಿಯನ್ನು ವ್ಯಾಪಾರವಾಗಿ ಬಿಂಬಿತವಾಗಿವೆಯೋ ಹಾಗೆಯೇ ಮೈಲಾರ ಪರಂಪರೆಯೂ ಕೂಡಾ ಕರ್ನಾಟಕದಾದ್ಯಂತ ಆಚರಣೆಗೆ ಒಳಪಟ್ಟಿದೆ. ಈ ಬಗೆಯ ಪರಂಪರೆಯನ್ನು ಕರ್ನಾಟಕದ ಸಂದರ್ಭದಲ್ಲಿ ಬಹುತೇಕವಾಗಿ ಜಾನಪದೀಯ ಹಿನ್ನೆಲೆಯಲ್ಲಿ ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ಅಲ್ಲದೆ ಚಾರಿತ್ರಿಕ ದೃಷ್ಟಿಯಿಂದಲೂ ಕೂಡ ಅಭ್ಯಸಿಸುವ ಪ್ರಯತ್ನ ಅಲ್ಲಲ್ಲಿ ನಡೆದಿರುವುದು ಗಮನಾರ್ಹ.

ಕರ್ನಾಟಕದ ತುಂಬಾ ವ್ಯಾಪಿಸಿರುವ ಈ ಪರಂಪರೆಯು ಆಂಧ್ರಪ್ರದೇಶ, ಮಹಾರಾಷ್ಟ್ರದಲ್ಲಿ ಈ ದೈವದ ಅಸ್ತಿತ್ವವನ್ನು ಕಾಣಬಹುದು. ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಯ ಹಿರೇ ಮೈಲಾರ ಪ್ರಮುಖವಾದ ಕ್ಷೇತ್ರ, ವರ್ಷದಲ್ಲಿ ಅಧಿಕ ಜನಸಂಖ್ಯೆಯೂ ಈ ಪ್ರದೇಶದಲ್ಲಿ ಸೇರುತ್ತದೆ. ಕರ್ನಾಟಕದಲ್ಲಿ ಮೈಲಾರನ ದೇವಾಲಯಗಳು ಶಾಸನಗಳು, ಮೂರ್ತಿಶಿಲ್ಪಗಳು, ಕಾವ್ಯಗಳು, ಐತಿಹ್ಯಗಳು ಹಾಗೂ ನಂಬಿಕೆ–ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯಿಂದ ಕೂಡಿದೆ. ಕರ್ನಾಟಕದಲ್ಲಿ ಮೈಲಾರನಿಗೆ ಸಂಬಂಧಿಸಿದ ಹಲವಾರು ದೇವಾಲಯಗಳನ್ನು ಕಾಣಬಹುದು ಈ ದೇವಾಲಯಗಳು ತನ್ನದೆ ಆದ ಚಾರಿತ್ರಿಕವಾದ ಮಹತ್ವವನ್ನು ಪಡೆದುಕೊಂಡಿವೆ.

ಕರ್ನಾಟಕದ ತುಂಬಾ ವ್ಯಾಪಿಸಿರುವ ಮೈಲಾರನು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯಿಂದ ಕೂಡಿದೆ ಅದರಲ್ಲಿ ನಂಬಿಕೆ–ಆಚರಣೆ, ಸಂಪ್ರದಾಯ, ಪೂಜಾ ವಿಧಾನಗಳಲ್ಲಿ ಭಿನ್ನತೆಯನ್ನು ಕಾಣಬಹುದು. ಹಾಗೆಯೇ ಮೈಲಾರನಿಗೆ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತದೆ. ಅವುಗಳೆಂದರೆ ಮೈಲಾರ, ಮೈಳಾರ, ಲಿಂಗಣ್ಣ, ನೀಲಣ್ಣ, ಮಲ್ಲಯ್ಯ, ಮಲ್ಲಖಾನ, ಮಲ್ಲಿಕಾರ್ಜುನ, ಮಲ್ಲೇಶ್ವರ, ಮೆಲುದೇವ, ಮಲ್ಲರ, ಅಜಮತಖಾನ, ಕರಿಯಲ, ಏಳುಕೋಟಿ, ಮಾರ್ತಂಡ ಭೈರವ, ಮಲ್ಲಾರಿ, ಹುಲ್ಲಪ್ಪ, ಚಂದಪ್ಪ, ಕನ್ನಡ ಜಂಗಮ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ.

ಮೈಲಾರ ಪರಂಪರೆಯು ಕ್ರಿ.ಶ. ೧೦ನೇ ಶತಮಾನದಿಂದ ಶಾಸನಗಳಲ್ಲಿ ಅನೇಕ ಮೈಲಾರನ ಉಲ್ಲೇಖಗಳು ಕಂಡು ಬರುತ್ತವೆ. ಶಾಸನಗಳಲ್ಲಿ ಮೈಲಾರ, ಮೆಯಿಲ, ಮಯಿಲಹಳ್ಳಿ, ಮೈಯಿಲಾರ, ಮಯ್ಲುರ, ಮೆಯಿಲ, ಮೆಯಿಲನಹಳ್ಳಿ, ಮೈಯಿಲಾರ, ಏಳುಕೋಟಿ, ಏಕ್ಕೋಟಿ, ಎಕ್ಕೋಟಿಚಕ್ರವರ್ತಿಮಠ, ಏಕ್ಕೋಟಿ ತಪೋಧನರು, ಮೈಲಾರ ಭಟ್ಟ, ಮಯಿಲಾರ, ಏಕ್ಕೋಟಿ ತೀರ್ಥ, ಏಳ್ಕೋಟಿ ಮಹಾದೇವ, ಏಕ್ಕೋಟಿ ಯುಕ್ತ ಮಯ್ಲುರಾದೇವ, ಮಯಿಲಾರ ಶಂಕರ, ಮೈಲಾರ ಉತ್ಸವ, ಎಕ್ಕೋಟಿ ಜಿನಾಲಯ, ಎಕ್ಕೋಟಿ ಪಂಡಿತ, ಮೈಳರಾದೇವಿ, ಎಕ್ಕೋಟಿ ದಣ್ಣಾಯಕ, ಏಕ್ಕೋಟಿ ಮುನಿಂದ್ರ, ಹಾಗೂ ಮೈಲಾರ ಚಟ್ಟೋಪಾಧ್ಯಾಯ

ಎಂಬ ಉಲ್ಲೇಖಗಳು ಕಂಡು ಬರುತ್ತವೆ. ಮೈಲಾರನಿಗೆ ಸಂಬಂಧಿಸಿದಂತೆ ಈ ಉಲ್ಲೇಖಗಳು ವ್ಯಕ್ತಿನಾಮಗಳನ್ನು ಸ್ಥಳನಾಮಗಳನ್ನು ಸೂಚಿಸುತ್ತವೆ.

ಮೈಲಾರನಿಗೆ ಸಂಬಂಧಿಸಿದಂತೆ ಕರ್ನಾಟಕದ ತುಂಬಾ ಇರುವ ಹಲವಾರು ದೇವಾಲಯಗಳಿವೆ. ಅವುಗಳಲ್ಲಿ ಹೂವಿನಹಡಗಲಿಯ ಮೈಲಾರ. ದೇವರಗುಡ್ಡದ ಮಾಲತೇಶ, ತೆಕ್ಕಲಕೋಟೆಯ ಮೈಲಾರ, ಗುಡೂರಿನ ಹುಲ್ಲಪ್ಪ, ಬೀದರನ ಮೈಲಾರಪುರ, ಧಾರವಾಡದ ಮೈಲಾರ, ಹನುಮಸಾಗರದ ಚಂದಲಿಂಗೇಶ್ವರ, ಸವದತ್ತಿಯ ಕಾರೀಮನೆ, ಸೊರಬದ ಕುಬಟೂರು, ವಿಜಯಪುರದ ದೇವರಹಿಪ್ಪರಗಿ, ಹಾವೇರಿಯ ದೇವಿಹೊಸೂರು, ಟಿ ನರಸೀಪುರದ ಮುಡುಕತೊರೆ, ನಾಗಮಂಗಲದ ಮೈಲಾರ ಪಟ್ಟಣ, ಯಾದಗಿರಿಯ ಮೈಲಾರ, ಚಿಕ್ಕನಾಯಕನ ಹಳ್ಳಿಯ ಮೈಲಾರ, ಮಂಗಸೂಳಿಯ ಮೈಲಾರ, ಹೊಸದುರ್ಗದ ಮೈಲಾರಪುರ, ಹರಿಹರದ ದೇವರಬೆಳಕೆರೆ ಹಾಗೂ ಶಿವಮೊಗ್ಗದ ಮೈಲಾರ ದೇವಾಲಯಗಳು ಪ್ರಮುಖವಾಗಿ ಕಂಡು ಬರುತ್ತವೆ. ಈ ದೇವಾಲಯಗಳು ವಿಶೇಷವಾಗಿ ಮೂರ್ತಿ ಶಿಲ್ಪಗಳು, ಶಾಸನಗಳ ಹಾಗೂ ನಂಬಿಕೆ ಆಚರಣೆಯನ್ನು ಹೊಂದಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿವೆ.

ಪ್ರಸ್ತುತ ಕರ್ನಾಟಕದಲ್ಲಿ ವಿವಿಧ ಚಾರಿತ್ರಿಕ ಕಾಲಘಟ್ಟಗಳ ಸಂದರ್ಭದಲ್ಲಿ ನಾಡಿನ ಉದ್ದಗಲಕ್ಕೂ ವ್ಯಾಪಿಸಿರುವುದನ್ನು ಕಾಣುತ್ತೇವೆ. ಈ ಸಂಪ್ರದಾಯಗಳು ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ ಸಮುದಾಯಕ್ಕೆ ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕ ಕಾರಣಗಳಿಂದ ಅವುಗಳಲ್ಲಿ ಭಿನ್ನತೆಯನ್ನು ಕಾಣಬಹುದು.

ಪ್ರಸ್ತುತ ಕರ್ನಾಟಕದಲ್ಲಿ ಮೈಲಾರ ಪರಂಪರೆಯೂ ಶಿಷ್ಟ ಮತ್ತು ಪರಿಶಿಷ್ಟ(ಜನಪದ) ನೆಲೆಯಲ್ಲಿ ಅಸ್ತಿತ್ವವನ್ನು ಪಡೆದು ನೆಲೆಗೊಂಡಿದ್ದು. ತನ್ನದೆ ಆದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿರುವುದು ಗಮನಾರ್ಹ. ಇಂಥ ಸಂಪ್ರದಾಯದ ಅಸ್ತಿತ್ವವನ್ನು ಕಟ್ಟಿಕೊಡುವುದೇ ಈ ಮಹಾಪ್ರಬಂಧದ ಆಶಯವಾಗಿದೆ. ವಿವಿಧ ಕಾಲಘಟ್ಟದಲ್ಲಿ ಮೈಲಾರ ಪರಂಪರೆಯೂ ಅಸ್ತಿತ್ವಕ್ಕೆ ಬಂದು, ಜನರ ಮನಸ್ಸಿನಲ್ಲಿ ಮುಂದುವರೆದಿದ್ದು, ಅನೇಕ ನಂಬಿಕೆ ಆಚರಣೆಗಳು ಜನಸಮುದಾಯದಲ್ಲಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಮೈಲಾರನ ಪ್ರಾಚೀನತೆ ಮೈಲಾರನಿಗೆ ಸಂಬಂಧಿಸಿದ ದೇವತೆಗಳು, ಮೈಲಾರನಿಗೆ ಸಂಬಂಧಿಸಿದ ದೇವಾಲಯಗಳು, ಶಾಸನಗಳನ್ನು ಹಾಗೂ ನಂಬಿಕೆ ಆಚರಣೆಗಳನ್ನು ಅಧ್ಯಯನ ಮಾಡುವುದು ಈ ಪ್ರಬಂಧದ ನಿಲುವಾಗಿದೆ.

## ೧.೧. ಅಧ್ಯಯನದ ಉದ್ದೇಶ

ಸಂಶೋಧನೆಯ ಉದ್ದೇಶ ಒಂದು ನಿರ್ದಿಷ್ಟ ಸಂಶೋಧನಾ ಯೋಜನೆಯಡಿಯಲ್ಲಿ ಬರುವ ಒಟ್ಟು ಕೆಲಸಗಳ ಸ್ಥೂಲ ಚಿತ್ರಣ. ಅಧ್ಯಯನ ಉದ್ದೇಶಗಳು ಸಂಶೋಧನಾ ಕಾರ್ಯಕ್ಕೆ ಒಂದು ಮಾರ್ಗಸೂಚಿ ಹೌದು. "ಕರ್ನಾಟಕದಲ್ಲಿ ಮೈಲಾರ ಪರಂಪರೆ: ಚಾರಿತ್ರಿಕ ಅಧ್ಯಯನ" ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟದಾದ್ಯಂತ ಮೈಲಾರ ಪರಂಪರೆಯೂ ವಿಸ್ತಾರವಾಗಿ ಹರಡಿಕೊಂಡಿದೆ. ಈ ಪರಂಪರೆಯನ್ನು ಕುರಿತಂತೆ ಇದುವರೆಗಿನ ಅಧ್ಯಯನಗಳು ಜಾನಪದ ಹಿನ್ನೆಲೆಯಲ್ಲಿ ಮಾಡಲಾಗಿದೆ. ಆದರೆ ಚಾರಿತ್ರಿಕವಾದ ದೃಷ್ಟಿಯಿಂದ ಅಧ್ಯಯನಗಳು ಅಷ್ಟಾಗಿ ನಡೆಯದಿರುವುದು ಕಂಡುಬರುತ್ತದೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಮೈಲಾರ ಪಡೆದಿರುವುದು ಗೋಚರಿಸುತ್ತದೆ. ಮೈಲಾರನ ಚಾರಿತ್ರಿಕ ಅಂಶಗಳಾದ ದೇವಾಲಯಗಳು, ಮೂರ್ತಿಶಿಲ್ಪಗಳು, ನಂಬಿಕೆ ಆಚರಣೆಗಳು, ಕರ್ನಾಟಕದ ತುಂಬಾ ಹರಡಿಕೊಂಡಿದ್ದು, ಶಾಸನ, ಸಾಹಿತ್ಯಾಧಾರಗಳನ್ನು ಇಟ್ಟುಕೊಂಡು ಮೈಲಾರನ ಕ್ಷೇತ್ರಗಳಿಗೆ ಭೇಟಿ ನೀಡಿ ಕ್ಷೇತ್ರಕಾರ್ಯವನ್ನು ಕೈಗೊಂಡು ಪೂರಕ ಮಾಹಿತಿಯನ್ನು ಸಂಗ್ರಹಿಸಿಕೊಂಡು ಸಾಂಸ್ಕೃತಿಕ ಮತ್ತು ಚಾರಿತ್ರಿಕವಾಗಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಮೈಲಾರನಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ದೊರೆಯುವ ದೇವಾಲಯ, ಶಾಸನಗಳು, ಮೂರ್ತಿಶಿಲ್ಪಗಳು ಹಾಗೂ ನಂಬಿಕೆ ಆಚರಣೆಗಳನ್ನು ಚಾರಿತ್ರಿಕವಾದ ದೃಷ್ಟಿಯಿಂದ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿ, ಇದುವರೆಗಿನ ಅಧ್ಯಯನಗಳು ಮೈಲಾರನಿಗೆ ಸಂಬಂಧಿಸಿದಂತೆ ಉತ್ತರಕರ್ನಾಟಕದ ಭಾಗಗಳಲ್ಲಿನ ದೇವಾಲಯಗಳನ್ನು ಜಾನಪದೀಯ ದೃಷ್ಟಿಯಿಂದ ಅಧ್ಯಯನಗಳು ನಡೆದಿರುವುದು ಕಂಡುಬಂದಿವೆ. ದಕ್ಷಿಣ ಕರ್ನಾಟಕದಲ್ಲಿ ಹಾಗೂ ವಿಶಾಲವಾದ ಕರ್ನಾಟಕದಲ್ಲಿ ಮೈಲಾರನಿಗೆ ದೊರೆಯುವ ಆಕರಗಳನ್ನು ಸಂಗ್ರಹಿಸಿ, ಛಾಯಾಚಿತ್ರಗಳ ಮೂಲಕ ಚಾರಿತ್ರಿಕವಾದ ಅಂಶಗಳನ್ನು ದಾಖಲಿಸಿ ಸಂಶೋಧನಾ ದೃಷ್ಟಿಯಿಂದ ವಿಶ್ಲೇಷಿಸಲಾಗಿದೆ.

ಕರ್ನಾಟಕದಲ್ಲಿ ಮಂಟೇಸ್ವಾಮಿ, ಮಲೆಮಾದೇಶ್ವರ, ಜುಂಜಪ್ಪ, ಬೀರಪ್ಪ ದೈವಗಳಂತೆ ಮೈಲಾರನು ವ್ಯಾಪಕವಾಗಿ ನಡೆದುಕೊಂಡು ಬಂದಿದ್ದು, ತನ್ನದೇ ಆದ ಅಸ್ತಿತ್ವವನ್ನು ಪಡೆದುಕೊಂಡಿದೆ. ಬೆಟ್ಟ-ಗುಡ್ಡ, ಮಣ್ಣಿನ ದಿಬ್ಬಗಳ ಮೇಲೆ, ಗವಿ, ಕಲ್ಲಸರೆ, ನದಿ, ಹಳ್ಳ-ಕೊಳ್ಳ ಬಯಲಿನಲ್ಲಿ, ದುರ್ಗಮವಾದ ಪರಿಸರದಲ್ಲಿ ಕಂಡುಬರುವ ಮೈಲಾರ ದೇವಾಲಯಗಳು ಸಾಮಾಜಿಕ ಧಾರ್ಮಿಕ ಮತ್ತು ಸಾಂಸ್ಕೃತಿಕವಾದ ತನ್ನದೆ ಆದ ಪ್ರಭಾವವನ್ನು ಹೊಂದಿರುವ ಮೈಲಾರ ಸಂಪ್ರದಾಯವು ಕರ್ನಾಟಕದಲ್ಲಿಯ ಇತರೆ ದೈವಗಳೊಂದಿಗೆ ಹೊಂದಿರುವ ಹೋಲಿಕೆ ಅಥವಾ ಸಹಸಂಬಂಧಗಳನ್ನು ಗುರುತಿಸಲಾಗಿದೆ.

ಕರ್ನಾಟಕದಲ್ಲಿ ಮೈಲಾರ ಪರಂಪರೆಯನ್ನು ಹೊಂದಿರುವ ಪ್ರಮುಖವಾದ ಮೈಲಾರನ ಕ್ಷೇತ್ರಗಳನ್ನು ಕ್ಷೇತ್ರಕಾರ್ಯ ಮಾಡುವ ಮೂಲಕ ಅಲ್ಲಿನ ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು ಹಾಗೂ ನಂಬಿಕೆ–ಆಚರಣೆಗಳನ್ನು ಛಾಯಾಚಿತ್ರಗಳ ಮೂಲಕ ಸಂಗ್ರಹಿಸಿ ಚಾರಿತ್ರಿಕ ಅಂಶಗಳನ್ನು ಗುರುತಿಸಿ, ದಾಖಲಿಸಿಕೊಂಡು ವಿಶ್ಲೇಷಿಸಲಾಗಿದೆ.

ವಿವಿಧ ಕಾಲಘಟ್ಟದಲ್ಲಿ ಮೈಲಾರ ಪರಂಪರೆಯು ರೂಪಾಂತರ ಗೊಂಡಿದೆ. ಮೈಲಾರನ ಪ್ರಾಚೀನತೆ ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ಹರಡಿಕೊಂಡ ಬಗೆ, ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು ಹಾಗೂ ಬುಡಕಟ್ಟು ಅಧ್ಯಯನಗಳ ಹಿನ್ನೆಲೆಯಲ್ಲಿ ಚಾರಿತ್ರಿಕ ಅಂಶಗಳನ್ನು ಕುರಿತು ಲಭ್ಯವಿರುವ ಸಾಹಿತ್ಯಿಕ ಆಧಾರಗಳ ಹಿನ್ನೆಲೆಯಲ್ಲಿ ಸ್ಪಷ್ಟಪಡಿಸಲಾಗಿದೆ.

ಮೈಲಾರನಿಗೆ ಸಂಬಂಧಿಸಿದ ಮೌಖಿಕ ಆಕರಗಳಾದ ಕಾವ್ಯಗಳು, ಐತಿಹ್ಯಗಳು, ನಂಬಿಕೆ–ಆಚರಣೆಗಳ ಹಿನ್ನೆಲೆಯಲ್ಲಿ ಚಾರಿತ್ರಿಕ ಅಂಶಗಳನ್ನು ಗುರುತಿಸಿಕೊಂಡು ಚಾರಿತ್ರಿಕ ಮತ್ತು ಮೌಖಿಕ ಆಕರಗಳೊಂದಿಗೆ ತೌಲನಿಕ ಅಧ್ಯಯನ ಮಾಡಿ ಮೈಲಾರಲಿಂಗ ಎಂಬುದು ಸಾಂಸ್ಕೃತಿಕ ಮತ್ತು ಚಾರಿತ್ರಿಕ ದೈವ ಎಂದು ಗುರುತಿಸಲಾಗಿದೆ.

ಇದುವರೆಗೂ ಮೈಲಾರನ ಕುರಿತು ಅಧ್ಯಯನಗಳು ಆಂಧ್ರಪ್ರದೇಶ, ಮಹಾರಾಷ್ಟ್ರಗಳಲ್ಲಿ ನಡೆದಿವೆ. ಈ ಅಧ್ಯಯನಗಳ ಮೂಲಕ ಕರ್ನಾಟಕದ ಮೈಲಾರನ ಬಗೆಗಿನ ಸಾಮ್ಯತೆಯನ್ನು ಲಭ್ಯವಾದ ಆಕರಗಳನ್ನು ಆಧರಿಸಿ ಮೈಲಾರ ಪರಂಪರೆಯು ಹೆಚ್ಚಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಹರಡಿಕೊಂಡಿದೆ ಎಂಬುದನ್ನು ಮಹಾಪ್ರಬಂಧದಲ್ಲಿ ದಾಖಲಿಸಲಾಗಿದೆ.

ಕರ್ನಾಟಕದಲ್ಲಿ ಕಂಡುಬರುವ ಮೈಲಾರ, ಗಂಗೆಮಾಳಮ್ಮನ ಮೂರ್ತಿಶಿಲ್ಪಗಳು ಹಾಗೂ ಮೈಲಾರನಿಗೆ ಸಂಬಂಧಿಸಿದ ಇತರೆ ಮೂರ್ತಿಶಿಲ್ಪಗಳನ್ನು ಚಾರಿತ್ರಿಕ ದೃಷ್ಟಿಕೋನದಿಂದ ಅಧ್ಯಯನ ಮಾಡಲಾಗಿದೆ.

ಈ ಮೇಲಿನ ಉದ್ದೇಶಗಳಲ್ಲಿದೆ ಕ್ಷೇತ್ರಕಾರ್ಯದಲ್ಲಿ ಲಭ್ಯವಾದ ಆಕರಗಳನ್ನು ಆಧರಿಸಿ ವಿವೇಚಿಸುವ ಮೂಲಕ ವಿಷಯಕ್ಕೆ ಅನುಗುಣವಾಗಿ ವರ್ಗೀಕರಿಸುವ, ವಿಶ್ಲೇಷಿಸುವ ಮೂಲಕ ದೇವಾಲಯಗಳು, ಮೂರ್ತಿಶಿಲ್ಪಗಳು, ನಂಬಿಕೆ–ಆಚರಣೆಗಳಿಗೆ ಸಂಬಂಧಿಸಿದಂತೆ ಛಾಯಾಚಿತ್ರಗಳು, ನಕ್ಷೆಗಳು, ಸಂಕ್ಷೇಪವಾಗಿ ಪ್ರಬಂಧದಲ್ಲಿ ಅಳವಡಿಸಿಕೊಂಡು ಸೂಕ್ತವಾದ ಚಾರಿತ್ರಿಕ ಅಂಶಗಳನ್ನು ಪುನಃ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

**೧.೨. ಅಧ್ಯಯನದ ವ್ಯಾಪ್ತಿ**

ಯಾವುದೇ ಒಂದು ಸಂಶೋಧನೆಗೆ ನಿರ್ದಿಷ್ಟ ಚೌಕಟ್ಟು ಬಹುಮುಖ್ಯ. ಇದು ಯಶಸ್ಸಿಗೆ ಅತ್ಯಗತ್ಯ. ಈ ವ್ಯಾಪ್ತಿಯ ಕ್ರಮಬದ್ಧತೆಯಿಂದಾಗಿ ನಿಖರತೆ ಸಮೀಪವಾದ

ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನವನ್ನು ಸಹ ಒಂದು ಚೌಕಟ್ಟಿಗೆ ಒಳಪಡಿಸಲಾಗಿದೆ. ಶೀರ್ಷಿಕೆಯೇ ಸೂಚಿಸುವಂತೆ ಅಧ್ಯಯನಕ್ಕೆ ಕರ್ನಾಟಕದ ಭೌಗೋಳಿಕ ಪ್ರದೇಶವು ಒಳಪಟ್ಟಿದೆ. ಮುಖ್ಯವಾಗಿ ಪ್ರಸ್ತುತ ಪ್ರಬಂಧವೂ ಕರ್ನಾಟಕದಲ್ಲಿ ಕಂಡು ಬರುವ ಪ್ರಮುಖವಾದ ಮೈಲಾರನ ಕ್ಷೇತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕರ್ನಾಟಕದಲ್ಲಿ ಮೈಲಾರನ ಕ್ಷೇತ್ರಗಳಾದ ಹೂವಿನಹಡಗಲಿ, ದೇವರ ಗುಡ್ಡ, ತೆಕ್ಕಲಕೋಟೆ, ಗುಡೂರು, ಹನುಮಸಾಗರ, ಕಂಪ್ಲಿ, ದೇವರಹಿಪ್ಪರಗಿ, ಯಾದಗಿರಿ, ಪ್ರೇಮಪುರ(ಮೈಲಾರಪುರ), ಧಾರವಾಡ, ಕುಬಟೂರು, ಶಿವಮೊಗ್ಗ ದೇವರಬೆಳಕೆರೆ, ಮೈಲಾರ ಪಟ್ಟಣ, ಮುಡುಕುತೊರೆ, ಚಿಕ್ಕನಾಯಕನಹಳ್ಳಿ, ದೇವಿಹೊಸೂರು, ಕಾರೀಮನಿ, ಮಂಗಸೂಳಿ ಹಾಗೂ ಹೊಸದುರ್ಗದ ಮೈಲಾರಪುರ ಕ್ಷೇತ್ರಗಳನ್ನು ಪ್ರಮುಖವಾಗಿ ಅಧ್ಯಯನದ ವ್ಯಾಪ್ತಿಯಾಗಿ ಮಾಡಿಕೊಂಡಿದೆ. ಮೈಲಾರನಿಗೆ ಸಂಬಂಧಿಸಿದಂತೆ ಹೆಚ್ಚಿನ ಶಾಸನಗಳು ಕ್ರಿ.ಶ. ೧೦ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿವೆ. ಹಾಗೂ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೆಚ್ಚಿನ ಸಂಖ್ಯೆಯ ಶಾಸನಗಳು ದೊರೆಯುತ್ತವೆ. ಈ ಹಿನ್ನೆಲೆಯಲ್ಲಿ ಕಾಲವ್ಯಾಪ್ತಿಯನ್ನು ಕ್ರಿ.ಶ. ೯ನೇ ಶತಮಾನದಿಂದ ಆಧುನಿಕ ಕಾಲದವರೆಗೆ ಈ ಸಂಪ್ರದಾಯವನ್ನು ಕುರಿತಂತೆ ಕಾಲವ್ಯಾಪ್ತಿಯನ್ನು ಮಾಡಿಕೊಳ್ಳಲಾಗಿದೆ. ಗೊತ್ತುಪಡಿಸಿರುವ ವ್ಯಾಪ್ತಿಯ ಆಚೆಗೂ ಅಧ್ಯಯನದ ವ್ಯಾಪ್ತಿಯಾಗಿ ಇಟ್ಟುಕೊಳ್ಳಲಾಗಿದೆ.

**೧.೩. ಅಧ್ಯಯನದ ಸಮೀಕ್ಷೆ**

ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಚಾರಿತ್ರಿಕವಾಗಿ ಸಾಂಸ್ಕೃತಿಕವಾಗಿ ಮೈಲಾರ ವಿಷಯಕ್ಕೆ ಸಂಬಂಧಿಸಿದಂತೆ, ಬಹುಮುಖಿಯಾಗಿ ಅಧ್ಯಯನಗಳು ನಡೆದಿವೆ. ಈ ಸಂಪ್ರದಾಯವನ್ನು ಕುರಿತು ಹಲವಾರು ವಿದ್ವಾಂಸರು, ಅಧ್ಯಯನಗಳನ್ನು ನಡೆಸಿದ್ದಾರೆ. ಮೈಲಾರನ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ಪ್ರಕಟವಾಗಿರುವ ಶಾಸನ ಸಂಪುಟಗಳು, ರಾಜ್ಯ ಗೆಜೆಟರ್‌ಗಳು, ಜಿಲ್ಲಾ ಗೆಜೆಟರ್‌ಗಳು, ಕೃತಿಗಳು ಹಾಗೂ ಬಿಡಿಲೇಖನಗಳು ಕಂಡುಬರುತ್ತವೆ. ಇಂತಹ ಅಧ್ಯಯನಗಳ ಸ್ಥೂಲ ಪರಿಚಯ ನೀಡುವ ಪ್ರಯತ್ನ ಇದಾಗಿದೆ.

* ಮೈಲಾರ ವಿಷಯಕ್ಕೆ ಸಂಬಂಧಿಸಿದಂತೆ ಮೊದಲಿಗೆ ಪಾಂಡುರಂಗರಾವ್ ದೇಸಾಯಿ ಅವರು, Journals of the Karnatak University, Vol-2(1959)ರಲ್ಲಿ ಮೈಲಾರಲಿಂಗ (ಐತಿಹಾಸಿಕ ವಿಮರ್ಶೆ) ಎಂಬ ಲೇಖನದಲ್ಲಿ ಮೈಲಾರನಿಗೆ ಸಂಬಂಧಿಸಿದಂತೆ ಸಂಕ್ಷಿಪ್ತ ಪೂರ್ವ ಚರಿತ್ರೆ, ಮೈಲಾರನ ಒಡಮು, ಶಾಸನಗಳು, ಶಾಕ್ತಮತದೊಂದಿಗೆ ಮೈಲಾರನ ಅವತಾರ ಮೈಲಾರನ ಮಾನ್ಯತೆ, ಶಂಕರ ವಿಜಯದಲ್ಲಿ ಮೈಲಾರ, ವೀರಶೈವ ಬ್ರಹ್ಮಶಿವನ ಸಮಯಪರೀಕ್ಷೆಯಲ್ಲಿ ಮೈಲಾರ ಹಾಗೂ ಮೈಲಾರನ ಪರಿವಾರವನ್ನು ಕುರಿತು ತಮ್ಮ ಲೇಖನದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

* ಕ.ರಾ.ಕೃ(ಸಂ.)ರವರ ಮೈಲಾರ ಲಿಂಗ ಈರಬಡಪ್ಪ(೧೯೬೩) ಎಂಬ ಕೃತಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ಕಾವ್ಯಗಳಿವೆ. ಅಪ್ಪಲಿಂಗಣ್ಣನ ನೆನೆದೇವೆ, ಕಾವಿಕಾಮಂಡ್ಲ ಧರಿಸ್ಯಾನೆ, ಹೊರೆಯಕೆ ಬಂದು ನೀರ ಹೊಯ್ಯಿಬಾರೇ, ಕಡಗಾದ ಕಯ್ಯ ಹಿಡಿದಾನೆ. ಹಾಗೂ ಕೋಮಲೇ ತಂದಿರುವುದು ನಿಜಕಾಣೆ ಎಂಬ ಕಾವ್ಯಗಳಿವೆ. ಈ ಕಾವ್ಯಗಳ ಮೂಲಕ ಮೈಲಾರನ ಅವತಾರದ ಬಗೆಗಳನ್ನು, ಗಂಗೆ ಮಾಳಮ್ಮನನ್ನು ಮದುವೆಯಾದ ಸನ್ನಿವೇಶಗಳನ್ನು ಕಾವ್ಯಗಳ ಮೂಲಕ ತಿಳಿಸಿದ್ದಾರೆ. ಕೋಮಲೆಯ ಮೇಲೆ ಇರುವ ಮೋಹ, ಮೈಲಾರನು ಶಿವನ ಅವತಾರದ ಬಗೆಯನ್ನು ಕುರಿತು ಚರ್ಚಿಸಲಾಗಿದೆ.

* ಬಿ.ಎಸ್. ಕುಲಕರ್ಣಿರವರ Journals of the Karnatak University, Humanities Vol-VIII (1959) ಮೈಲಾರ ಕರ್ನಾಟಕದ ದೇವರು ಮಹಾರಾಷ್ಟ್ರದ ಕುಲದೇವರು ಎಂದರೇನು? ಎಂಬ ಲೇಖನದಲ್ಲಿ ಮೈಲಾರ ಕರ್ನಾಟಕದ ದೇವರ? ಅಥವಾ ಮಹಾರಾಷ್ಟ್ರದ ಕುಲ ದೇವರ? ಎಂಬ ವಿಷಯವನ್ನು ಕುರಿತು ಹಿರಿಯ ವಿದ್ವಾಂಸರಾದ ಶ್ರೀ ನಾ.ಶ್ರೀ ರಾಜಪುರೋಹಿತ, ಶ್ರೀ ಶಂಬಾ ಜೋಶಿ, ಶ್ರೀ ಗಣೇಶ ಹರಿ ಖರೆ, ಪಾಡುರಂಗರಾವ ದೇಸಾಯಿ, ರಾಂ.ಚಿ. ಢೇರೆಯವರ ಲೇಖನಗಳನ್ನು ಹಾಗೂ ವಿಮರ್ಶೆಗಳನ್ನು ಮಾಡಿದ್ದಾರೆ. ತಮ್ಮ ಚರ್ಚೆಯಲ್ಲಿ ಮಾರ್ತಂಡ ಭೈರವನ ಶಬ್ಧದ ಉತ್ಪತ್ತಿ, ಮೈಲಾರ ಶಬ್ಧದ ಉತ್ಪತ್ತಿ, ಮಹಾರಾಷ್ಟ್ರದಲ್ಲಿನ ಖಂಡೋಬಾನಿಗೆ ಇರುವ ಸಾಮ್ಯತೆಯನ್ನು ಶಾಸನಗಳು, ಪದ ನಿಷ್ಪತ್ತಿಯ ಉಲ್ಲೇಖಗಳು ಈಗಾಗಲೇ ನಡೆದಿರುವ ಅಧ್ಯಯನಗಳನ್ನು ಈ ಲೇಖನದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

* ಬಿ.ಎಸ್. ಕುಲಕರ್ಣಿಯವರ ಮತ್ತೊಂದು ಲೇಖನವಾದ ಮಲ್ಲಾರಿ-ಮಾರ್ತಾಂಡ-ಭೈರವ ಒಂದು ದೈವತ್ವವೋ ಅಥವಾ ಸಂಯುಕ್ತ ದೈವತ್ವವೋ Journals of the Karnatak University, Humanities Vol-IX (1965) ಈ ಲೇಖನದಲ್ಲಿ ಮೈಲಾರ-ಮಾರ್ತಾಂಡ-ಭೈರವನ ಬಗ್ಗೆ ಇರುವ ಸಂಬಂಧವನ್ನು ವಿವರಿಸಲಾಗಿದೆ. ಕರ್ನಾಟಕದ ಮೈಲಾರ ಹಾಗೂ ಮಹಾರಾಷ್ಟ್ರದ ಖಂಡೋಬನ ಸ್ಥಳಗಳಲ್ಲಿ ಪ್ರಾಚೀನ ಹೆಸರುಗಳ ಉಲ್ಲೇಖಗಳನ್ನು ಶಾಸನಗಳ ಮೂಲಕ ಚರ್ಚಿಸಲಾಗಿದೆ.

* ಚಿದಾನಂದಮೂರ್ತಿ ಎಂ. ಅವರ ಸಂಶೋಧನಾ ತರಂಗ ಸಂಪುಟ-೨(೧೯೭೦) ಕನ್ನಡ ಕಾವ್ಯ ಶಾಸನಗಳಲ್ಲಿ ಮೈಲಾರ ಮತ್ತು ಮಾಳಚಿ ಎಂಬ ಲೇಖನ ವಿವರವಾಗಿ ಚರ್ಚಿಸಲಾಗಿದೆ. ಕಾವ್ಯ, ಶಾಸನಗಳಲ್ಲಿ ಮೈಲಾರ-ಮಾಳಚಿಯ ಕುರಿತಾದ ಉಲ್ಲೇಖಗಳನ್ನು ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ಸಿಗುವ ಸಾಹಿತ್ಯಕ ಹಾಗೂ ಶಾಸನಗಳ ಮೂಲಕ ಸ್ಥೂಲವಾಗಿ ಚರ್ಚಿಸಲಾಗಿದೆ. ಈ ಲೇಖನದಿಂದ ಮೈಲಾರ-ಮಾಳಚಿ, ಮನೆವೆಗ್ಗಡೆ ಚಟ್ಟಪ್ಪ, ಮೈಲ, ಮಾಳ ಇನ್ನೂ ಮುಂತಾದ ಹೆಸರುಗಳ ಮೂಲಕ ವಿವರಿಸಲಾಗಿದೆ.

* ಶ್ರೀನಿವಾಸ ರಿತ್ತಿ ಅವರ ಮೈಲಾರ ದೇವರು(೧೯೭೦) ಈ ಕೃತಿಯಲ್ಲಿ ಮೈಲಾರನ ಅನೇಕ ವಿಷಯಗಳನ್ನು ಚರ್ಚಿಸಲಾಗಿದೆ. ಮೈಲಾರ ಪರಂಪರೆ, ಇತಿಹಾಸ, ಪ್ರಾಚೀನತೆ, ಸ್ಥಾನಮಾನ, ಮಾಳಚಿ, ಮೈಲಾರ ಪಂಥ ಹಾಗೂ ಮೈಲಾರನ ಪರಿವಾರದ ಬಗ್ಗೆ ಸ್ಥೂಲವಾಗಿ ಮಹತ್ವ ಪೂರ್ಣವಾದ ಮಾಹಿತಿಯನ್ನು ಒದಗಿಸುತ್ತದೆ.

* ಸುಂಕಾಪುರ ಎಂ.ಎಸ್.(ಸಂ) ಡೊಳ್ಳಿನ ಹಾಡು(೧೯೭೬) ಈ ಕೃತಿಯೂ ಮೈಲಾರನಿಗೆ ಸಂಬಂಧಿಸಿದ ಕಾವ್ಯಗಳ ಮಾಹಿತಿಯನ್ನು ನೀಡಲಾಗಿದೆ. ಗುಡ್ಡದಸ್ವಾಮಿ ಎಂಬ ಕಾವ್ಯದ ಮೂಲಕ ಮೈಲಾರನ ವೇಷಭೂಷಣ, ಮೈಲಾರನ ಅವತಾರಗಳನ್ನು ಕುರಿತು ಕಾವ್ಯದಲ್ಲಿ ತಿಳಿಸಲಾಗಿದೆ.

* ದೇವೇಂದ್ರ ಕುಮಾರ ಹಕಾರಿ(ಸಂ) ವೃಷಭೇಂದ್ರಸ್ವಾಮಿ ಎಸ್. ಎಂ. ಜಾನಪದ ಸಾಹಿತ್ಯ ದರ್ಶನ. ೯(೧೯೮೮) ದೇವರಗುಡ್ಡದ ಮೈಲಾರಲಿಂಗ ಎಂಬ ಲೇಖನದಲ್ಲಿ ಪುರಾಣ, ದಂತಕಥೆ, ಮೈಲಾರ ಭಕ್ತರ ವೇಷಭೂಷಣ, ಗೊರವರ ವೃತ್ತಿ ಹಾಗೂ ಗೊರವ ಪ್ರಮುಖವಾದ ವ್ಯಕ್ತಿ ಕಾರ್ಣಿಕದ ಗೊರವರ ಬಗ್ಗೆ ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ.

* ಚೇತನಕುಮಾರ್.ಆರ್ ಅವರ ಮೈಲಾರಲಿಂಗನ ಜಾತ್ರೆ ಮತ್ತು ಜನಪದ ನಂಬಿಕೆಗಳು, ಜನಪದ ಜಗತ್ತು (೧೯೯೨) ಈ ಲೇಖನದಲ್ಲಿ ಮೈಲಾರ ದೇವರಿಗೆ ಸಂಬಂಧಿಸಿದ ದೀಕ್ಷೆಗಳು, ಗೊರವರ ದೀಕ್ಷೆ, ಕುದುರೆ ಗೊರವರ ದೀಕ್ಷೆ ದೇವನಾರಿಯರು, ಹಾಗೂ ದೀವಟಿಗೆ ದೀಕ್ಷೆಯ ಬಗ್ಗೆ ಲೇಖನವು ಸಹಾಯಕವಾಗಿದೆ.

* ನೇಗಿನಹಾಳ ಎಂ.ಬಿ. ಅವರ ಮೈಲಾರಲಿಂಗ ಖಂಡೋಬಾ (ಒಂದು ಸಾಂಸ್ಕೃತಿಕ ಅಧ್ಯಯನ) (೧೯೯೨) ಸಂಶೋಧನೆಯಲ್ಲಿ ಕೈಗೊಂಡ ಮೈಲಾರನ ಬಗ್ಗೆ ಸ್ವವಿವರವಾದ ಮಾಹಿತಿಯನ್ನು ನೀಡುತ್ತದೆ. ಮೈಲಾರ ಕ್ಷೇತ್ರಗಳು ನಂಬಿಕೆ–ಆಚರಣೆಗಳು, ಐತಿಹ್ಯ–ಪುರಾಣಗಳು. ಸಂಕೇತಗಳು, ಇತರೆ ದೇವತೆಗಳೊಂದಿಗೆ ಮೈಲಾರನ ಸಂಬಂಧ, ಭಾಷಿಕ ವಿಚಾರಗಳು, ಹಾಗೂ ಸಮೀಕ್ಷೆಯನ್ನು ಈ ಕೃತಿಯ ಮೂಲಕ ಪರಿಪೂರ್ಣವಾದ ಉತ್ತರ ಕರ್ನಾಟಕದ ಕ್ಷೇತ್ರಗಳಲ್ಲಿನ ಮೈಲಾರನ ಸಂಬಂಧಿಸಿದ ಮಾಹಿತಿಯನ್ನು ಒದಗಿಸುತ್ತದೆ.

* ಸೋಮಶೇಖರ ಇಮ್ರಾಪುರ(ಸಂ.)– ಜಾನಪದ ಸಾಹಿತ್ಯ ದರ್ಶನ ೧೩(೧೯೯೪). ಈ ಸಂಪಾದಿತ ಕೃತಿಯಲ್ಲಿ ಹಲವಾರು ವಿದ್ವಾಂಸರು ಮೈಲಾರನಿಗೆ ಸಂಬಂಧಿಸಿದ ಲೇಖನಗಳನ್ನು ಬರೆದಿದ್ದಾರೆ. ಭೋಜಪಾಟೀಲರವರ, ಮೈಲಾರಲಿಂಗ ಕುರಿತು ಜನಪದಸಾಹಿತ್ಯ, ಬಸವಲಿಂಗ ಸೊಪ್ಪಿಮಠರವರ ಮೈಲಾರಲಿಂಗ ಪರಿವಾರ ದೇವತೆಗಳು. ಎನ್ಕೆ, ರಾಮಚಂದ್ರ ನಂದಗಾವಿಯವರ ಮೈಲಾರಲಿಂಗ ಜಾತ್ರೆ–ಪೂಜೆ, ದೇವೇಂದ್ರಕುಮಾರ ಹಕಾರಿಯವರ ಮೈಲಾರ ಲಿಂಗನನ್ನು ಕುರಿತು ಹರಕೆ, ನಂಬಿಕೆ ಆಚರಣೆಗಳು, ಪಡಶೆಟ್ಟಿ ಎಂ.ಎಂ.ರವರ

ಮೈಲಾರಲಿಂಗನ ಪೂಜಾರಿ, ಭಕ್ತರು, ಶ್ರೀರಾಮ ಇಟ್ಟಣ್ಣನವರ ಉತ್ತರಕರ್ನಾಟಕದಲ್ಲಿ ಮೈಲಾರ ಸಂಪ್ರದಾಯ, ರಾಜೇಗೌಡ, ಹ.ಕ.ರವರ ದಕ್ಷಿಣ ಕರ್ನಾಟಕದಲ್ಲಿ ಮೈಲಾರ ಸಂಪ್ರದಾಯ, ಆರ್ವಿಯಸ್ ಸುಂದರಂರವರ ಆಂಧ್ರಪ್ರದೇಶದ ಮೈಲಾರನ ಸಂಪ್ರದಾಯ, ಹಾಗೂ ನೇಗಿನಹಾಳ ಎಂ.ಬಿ. ರವರ ಮಹಾರಾಷ್ಟ್ರದಲ್ಲಿ ಮೈಲಾರ ಸಂಪ್ರದಾಯವನ್ನು ಕುರಿತು ಈ ಸಂಪಾದಿತ ಕೃತಿಯೂ ವಿವರಣೆಯನ್ನು ನೀಡಲಾಗಿದೆ.

* ಸಂಗಮೇಶ ಸವದತ್ತಿಮಠ(ಸಂ.) ಅವರು ಸಂಶೋಧನ ವ್ಯಾಸಂಗ ಕೃತಿಯಲ್ಲಿ ಖಂಡೋಬಾ. ಪಿ.ಕೆ. ಯವರು. ಮೈಲಾರಲಿಂಗ-ಖಂಡೋಬಾ ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ಲೇಖನ ಬರೆದಿದ್ದಾರೆ. ಈ ಲೇಖನದಲ್ಲಿ ನೇಗಿನಹಾಳರವರ ಕೃತಿಯಾದ ಮೈಲಾರಲಿಂಗ ಖಂಡೋಬಾ ಕೃತಿಯ ವಿಮರ್ಶೆಯನ್ನು ಮಾಡಲಾಗಿದೆ.

* ಪುರುಷೋತ್ತಮ ಬಿಳಿಮಲೆ ಅವರ ಕೂಡುಕಟ್ಟು(೧೯೯೭) ಈ ಕೃತಿಯಲ್ಲಿ ಮೈಲಾರ : ಮದುವೆ, ವಾಸ್ತು, ಜಾತ್ರೆ ಮತ್ತು ಚರಿತ್ರೆಯನ್ನು ಕುರಿತು ವಿವರಗಳನ್ನು ಸ್ವವಿವರವಾಗಿ ಚರ್ಚಿಸಲಾಗಿದೆ.

* ನೇಗಿನಹಾಳ ಎಂ.ಬಿ. ಅವರ ಮೈಲಾರಲಿಂಗ ಕಾವ್ಯ(೧೯೯೭) ಈ ಕೃತಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ಏಳಯ್ಯ ಬೆಳಗಾದವೂ, ಮೈಲಾರಲಿಂಗ-ತಿರುಪತಿ ತಿಮ್ಮಪ್ಪ, ಬ್ಯಾಡೋ ಕುರುಬರಸಂಗ, ಮಾಳವ್ವ, ಸ್ವಾಮಿಗುಡ್ಡದಯ್ಯಗೆ ಬೆಳುಗ್ಯಾಳೆ-ಕೋಮಲೆ ಪದ ಹಾಗೂ ಮೈಲಾರನ ಮಂಗಳಾರತಿಯ ಕಾವ್ಯಗಳನ್ನು ನೀಡಲಾಗಿದೆ.

* ನೇಗಿನಹಾಳ ಎಂ.ಬಿ. ಅವರ ನೇಗಿನಹಾಳ ಪ್ರಬಂಧಗಳು(೧೯೯೯) ಕೃತಿಯು ನೇಗಿನಹಾಳರವರು ಬರೆದಿರುವ ಪ್ರಬಂಧಗಳನ್ನು ಕೃತಿಯ ರೂಪದಲ್ಲಿ ಹೊರತರಲಾಗಿದೆ. ಮೈಲಾರನ ವಿಷಯಕ್ಕೆ ಸಂಬಂಧಿದ ಮೂರು ಲೇಖನಗಳಾದ ಹೀರೇ ಮೈಲಾರದ ಶಾಸನಗಳು, ಶಾಸನಗಳಲ್ಲಿ ಮೈಲಾರ ಮತ್ತು ಮಾಳಚಿಯ. ಪ್ರಾಚೀನ ಉಲ್ಲೇಖಗಳು ಹಾಗೂ ಮೈಲಾರಲಿಂಗನ ಪರಿವಾರ ದೇವತೆಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.

* ಮಂಜುನಾಥ ಬೇವಿನಕಟ್ಟಿ(ಸಂ.) ಅವರ ಮೈಲಾರಲಿಂಗನ ಕಾವ್ಯ(೧೯೯೯) ಈ ಕೃತಿಯು ಮೈಲಾರನಿಗೆ ಸಂಬಂಧಿಸಿದ ಕಾವ್ಯಗಳನ್ನು ಕುರಿತದ್ದಾಗಿದೆ. ಮೈಲಾರಲಿಂಗನ ಮಹಿಮೆಗಳ ಸಂಧಿ, ಗಂಗಿಮಾಳಮ್ಮ ಸಂಧಿ, ಕೋಮಲೆ ಸಂಧಿ, ಮಡಿವಾಳರ ಸಂಧಿ ಹಾಗೂ ಕುರುಬರ ಸಂಧಿಯ ಬಗ್ಗೆ ಕಾವ್ಯಗಳನ್ನು ಹೊಂದಿದೆ. ಹಾಗಾಗಿ ಈ ಕೃತಿಯು ಮೈಲಾರನಿಗೆ ಸಂಬಂಧಿಸಿದ ಕಾವ್ಯಗಳ ಪೂರ್ಣವಾದ ವಿವರಗಳನ್ನು ಒಳಗೊಂಡಿದೆ.

* ದಾಸೇಗೌಡ ಜಿ.ವಿ. ಅವರ ಮಂಡ್ಯ ಜಿಲ್ಲೆಯ ಜಾತ್ರೆಗಳು(೨೦೦೦) ಈ ಕೃತಿಯು ಮಂಡ್ಯ ಜಿಲ್ಲೆಯ ಜಾತ್ರೆಗಳ ಕುರಿತ ಮಾಹಿತಿಯನ್ನು ಒದಗಿಸುತ್ತದೆ. ಇದರಿಂದ ಜಾತ್ರೆಯ

ಪರಿಕಲ್ಪನೆ, ಜಾತ್ರೆಯ ವಿಶೇಷವಾದ ನಂಬಿಕೆ–ಆಚರಣೆಗಳ ಬಗ್ಗೆ ಹಾಗೂ ಮೈಲಾರ ಜಾತ್ರೆಯ ತೌಲನಿಕ ಅಧ್ಯಯನಕ್ಕೆ ಸಹಾಯಕವಾಗಿದೆ.

* ಮಂಜುನಾಥ ಬೇವಿನಕಟ್ಟಿ ಅವರ ಸಾಂಸ್ಕೃತಿಕ ಪದಕೋಶ–೧(೨೦೦೦) ಈ ಕೃತಿಯಲ್ಲಿ ಮೈಲಾರನ ನಂಬಿಕೆಗಳು, ಕಾರ್ಣಿಕಗಳು, ಪರಾಮರ್ಶಿತ ಪುಸ್ತಕಗಳು, ಲೇಖನಗಳು, ಮೈಲಾರನ ಕ್ಷೇತ್ರಗಳು ಹಾಗೂ ಪದ–ಸೂಚಿಗಳನ್ನು ನೀಡಿದೆ. ಇದರಿಂದ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತದೆ.

* ಮಂಜುನಾಥ ಬೇವಿನಕಟ್ಟಿ(ಸಂ.) ಅವರ ಜಾನಪದ ಕರ್ನಾಟಕ ಸಂಪುಟ–೦೧ (೨೦೦೧) ಇದರಲ್ಲಿ ಎಸ್.ಎಸ್. ಅಂಗಡಿ ಅವರ ಮೈಲಾರನ ಕಾವ್ಯ ಛಂದಸ್ಸು, ಶೈಲಿಯ ಬಗ್ಗೆ ತಮ್ಮ ಲೇಖನದಿಂದ ಪೂರಕವಾದ ಮಾಹಿತಿಯನ್ನು ಅಧ್ಯಯನಕ್ಕೆ ಒದಗಿಸುತ್ತದೆ.

* ಶ್ರೀ ವಾಸುದೇವ ಹುಚ್ಚೂರಾವ ಹೂಲಿ–ಶ್ರೀ ಮೈಲಾರಲಿಂಗ ಮಹಿಮೆ ಕೃತಿಯಲ್ಲಿ ಪ್ರೇಮಪುರದ ಮೈಲಾರನ ಕಥಾ ಸಂಗ್ರಹವನ್ನು ವಿವರಿಸಲಾಗಿದೆ.

* ಮಂಜುನಾಥ ಬೇವಿನಕಟ್ಟಿ(ಸಂ.) ಅವರ ಜಾನಪದ ಕರ್ನಾಟಕ ಸಂಪುಟ –೨ (೨೦೦೨) ಸಂಪಾದಕೀಯ ಕೃತಿಯಲ್ಲಿ ಎರಡು ಲೇಖನಗಳಿವೆ. ಸುನಂದ ಎಂ. ರವರ ಭರತ ಹುಣ್ಣಿಮೆ ಎಂಬ ಲೇಖನವು ಭರತ ಹುಣ್ಣಿಮೆಯಲ್ಲಿ ನಡೆಯುವ ನಂಬಿಕೆ–ಆಚರಣೆಗಳು ಕುರಿತದ್ದಾಗಿದೆ. ಹಾಗೂ ಸುಮಂಗಲ ಬ. ಅತ್ತಿಗೇರಿ ಅವರ ಸೀಗೆ ಹುಣ್ಣಿಮೆ ಲೇಖನವೂ ಸೀಗೆ ಹುಣ್ಣಿಮೆಯಲ್ಲಿ ನಡೆಯುವ ನಂಬಿಕೆ ಆಚರಣೆಗಳ ಕುರಿತ ಮಾಹಿತಿಯಿಂದ ಅಧ್ಯಯನಕ್ಕೆ ಪೂರಕವಾಗಿದೆ.

* ರಾಮಕೃಷ್ಣ ಕೆ.ಆರ್. ಇತರರು.(ಸಂ.) ಅವರ ವಿಜಯನಗರ ಅಧ್ಯಯನ ಸಂಪುಟ–೮(೨೦೦೩) ಇದರಲ್ಲಿ ವಾಸುದೇವ ಬಡಿಗೇರ ಅವರು 'ಹಂಪಿ ಪರಿಸರದ ಮೈಲಾರನ ಪರಂಪರೆ' ಲೇಖನವೂ ಹಂಪಿ ಪರಿಸರದ ಮೈಲಾರ, ಭೈರವ–ಮೈಲಾರ ಸಂಬಂಧ, ಮೈಲಾರ–ನಾಥಪಂಥದ ಸಂಬಂಧ, ಹಿರೇಮೈಲಾರ, ಮಲ್ಲಯ್ಯನ ಗುಡ್ಡ ಹಾಗೂ ಹಂಪೆ ಪರಿಸರದಲ್ಲಿ ಕಂಡು ಬರುವ ಮೈಲಾರನನ್ನು ಚರ್ಚಿಸಲಾಗಿದೆ.

* ರಾ.ಚಿಂ. ಢೇರೆ(ಮರಾಠಿಮೂಲ) ದಕ್ಷಿಣ ದೇಶಿ ದೇವರು ಖಂಡೋಬಾ, ರಾಮಕೃಷ್ಣ ಮರಾಠೆ(ಕನ್ನಡಕ್ಕೆ)(೨೦೦೩) ಈ ಕೃತಿಯೂ ನನ್ನ ಅಧ್ಯಯನ ವಿಷಯಕ್ಕೆ ಮಹತ್ವವಾಗಿದೆ. ಕರ್ನಾಟಕದ ಮೈಲಾರ ಹಾಗೂ ಮಹಾರಾಷ್ಟ್ರದ ಖಂಡೋಬಾನ ಜನಪ್ರಿಯತೆಯನ್ನು ಈ ಕೃತಿಯಿಂದ ಬಳಸಿಕೊಳ್ಳಲಾಗಿದೆ.

* ವೆಂಕಟೇಶ ಜಿ.- ಗುಡ್ಡದಮಲ್ಲಯ್ಯ (ಮೀನಗುಂದಿ ಮಲ್ಲಯ್ಯ) ಆಚರಣೆ ಒಂದು ಜಾನಪದೀಯ ಅಧ್ಯಯನ(೨೦೦೩) ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧವು ಕನ್ನಡ ವಿಶ್ವವಿದ್ಯಾಲಯದ ಜಾನಪದೀಯ ಅಧ್ಯಯನದ ಮೂಲಕ ಆಂಧ್ರಪ್ರದೇಶದ ಮೀನಗೊಂದಿ ಮಲ್ಲಯ್ಯನ ಕುರಿತು ಅಧ್ಯಯನವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಆಂಧ್ರಪ್ರದೇಶದಲ್ಲಿ ಕಂಡುಬರುವ ಮಲ್ಲಯ್ಯನ ನಂಬಿಕೆ ಮತ್ತು ಆಚರಣೆಯನ್ನು ತಿಳಿಸುವ ಕೃತಿಯಾಗಿದೆ.

* ಮಂಜುನಾಥ ಬೇವಿನಕಟ್ಟಿ (ಸಂ)- ಜಾನಪದ ಕರ್ನಾಟಕ ಸಂಪುಟ-೨(೨೦೦೩) ಇದರಲ್ಲಿ ಸುಮಂಗಲಾ ಬ. ಅತ್ತಿಗೇರಿ ಶಿಗ್ಗಾಂವರವರ ಮೈಲಾರಲಿಂಗನ ಕಾವ್ಯ: ಸ್ತ್ರೀಸಂವೇದನೆ ಎಂಬ ಲೇಖನವು ಕಾವ್ಯಗಳಿಂದ ಮೈಲಾರನ ಹೆಂಡತಿಯರ ಪಾತ್ರಗಳ ಮೂಲಕ ಸ್ತ್ರೀಯರ ಸ್ವರೂಪಗಳನ್ನು ತಿಳಿಸುವ ಮುಖ್ಯವಾದ ಆಕರವಾಗಿದೆ.

* ಹಿರೇಮಠ ಎಸ್.ಎಸ್.- ಜನ ಜನಪದ ಸಂಸ್ಕೃತಿ(ವಿಮರ್ಶೆ) ಕೃತಿಯು ಹಲವಾರು ಲೇಖನಗಳನ್ನು ಒಳಗೊಂಡಿದೆ. ಪ್ರಮುಖವಾಗಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಶೈವಪಂಥವಾಗಿ ಮೈಲಾರ ಲೇಖನವು ಮಹತ್ವಪೂರ್ಣವಾದ ಅಂಶಗಳನ್ನು ಚರ್ಚಿಸಲಾಗಿದೆ.

* ರಮೇಶ್ ಸ.ಚಿ. (ಸಂ.)-ಜಾನಪದ ಕರ್ನಾಟಕ ೦೨(೨೦೦೫) ಇದರಲ್ಲಿ ಮೋಹನ್ ಎಸ್.ಅವರ 'ಭೈರವ ಆರಾಧನೆ' ಎಂಬ ಲೇಖನವು ಭೈರವನ ಪ್ರಾಚೀನತೆ, ಇತಿಹಾಸ, ಭೈರವ ಲಕ್ಷಣಗಳು ಹಾಗೂ ಸ್ವರೂಪವನ್ನು ಕುರಿತು ಮಾಹಿತಿಯನ್ನು ಈ ನನ್ನ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

* ಕಲಬುರ್ಗಿ ಎಂ.ಎಂ. ಮಾರ್ಗ ಸಂಪುಟ-೦೪(೨೦೦೭) ಈ ಕೃತಿಯು ಕಲಬುರ್ಗಿ ಯವರು ಬರೆದ ಲೇಖನಗಳಿಂದ ಕೂಡಿದೆ. ಮೈಲಾರನಿಗೆ ಸಂಬಂಧಿಸಿದ ಮಹತ್ವವಾದ ವಿಷಯಗಳನ್ನು ಈ ಲೇಖನದಿಂದ ಈ ಅಧ್ಯಯನಕ್ಕೆ ಬಳಸಿಕೊಳ್ಳಲು ಉಪಯುಕ್ತವಾಗಿದೆ.

* ಚಕ್ಕರೆ ಶಿವಶಂಕರ್(ಸಂ) ಮೈಲಾರ ಮಾಳಮ್ಮ ಮತ್ತು ನೀಲವೇಣಿ(೨೦೦೭) ಈ ಕೃತಿಯಲ್ಲಿ ಮೈಲಾರ ಮತ್ತು ಮಾಳಮ್ಮಗೆ ಸಂಬಂಧಿಸಿದ ಕಾವ್ಯಗಳನ್ನು ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಲಾಗಿದೆ.

* ಮಹಾದೇವಪ್ಪ ಎಂ. ಪಾಟೀಲ ಅಳಗೇರಿ-ಮೈಲಾಪುರದ ಮೈಲಾರ ಲಿಂಗೇಶ್ವರ(೨೦೦೮) ಯಾದಗಿರಿ ಜಿಲ್ಲೆಯ ಮೈಲಾರನ ಕುರಿತಾದ ಅವತಾರದ ಬಗೆ, ಸ್ವರೂಪ, ಹಾಗೂ ಮೈಲಾರ ದೇವರ ನಂಬಿಕೆ ಆಚರಣೆಗಳನ್ನು ಈ ಕೃತಿಯೂ ಮಹತ್ವವಾದ ಅಂಶಗಳನ್ನು ಅಧ್ಯಯನಕ್ಕೆ ಒದಗಿಸುತ್ತದೆ.

* ಕಡಪಟ್ಟಿ ಎಂ.ಎನ್. ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ(೨೦೦೮) ಶೈವಧರ್ಮದ ಸ್ವರೂಪ, ಶಾಸನದ ಹಿನ್ನೆಲೆಯಲ್ಲಿ ಶೈವಧರ್ಮ, ಶೈವಧರ್ಮದ ಹಿನ್ನೆಲೆ ಹಾಗೂ ದೇವಾಲಯಗಳ ವಾಸ್ತುಲಕ್ಷಣ, ಭೈರವನಿಗೆ ಸಂಬಂಧಿಸಿದ ಲಕ್ಷಣಗಳನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ.

* ಸತೀಶ ಕೆ.-ವಿಜಯನಗರ ಕಾಲದ ಶೈವ ದೇವಾಲಯಗಳು(೨೦೦೮) ಕೃತಿಯು ವಿಜಯನಗರ ಕಾಲದಲ್ಲಿ ಕಂಡುಬರುವ ಶೈವ ದೇವಾಲಯಗಳನ್ನು ಕುರಿತು ಮಾಹಿತಿ ಒದಗಿಸುತ್ತದೆ. ಇವರ ಕಾಲಾವಧಿಯಲ್ಲಿ ಮೈಲಾರನ ದೇವಾಲಯಗಳು ಸಹ ಈ ಕೃತಿಯಿಂದ ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

* ಕೃಷ್ಣಪ್ಪ ಶ್ರೀ ಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ(೨೦೦೮) ಕೃತಿಯೂ ಹೂವಿನ ಹಡಗಲಿ ಮೈಲಾರನಿಗೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸುತ್ತದೆ. ಮೈಲಾರನ ಪುಣ್ಯಕ್ಷೇತ್ರಗಳು, ಪೌರಾಣಿಕ ಹಿನ್ನೆಲೆ, ಅವತಾರದ ರಹಸ್ಯ, ಶಿವಸದನ, ಕಪಿಲ ಮಹಾಮುನಿಗಳು ಹಾಗೂ ನಂಬಿಕೆ ಆಚರಣೆಯ ಬಗ್ಗೆ ಚರ್ಚಿಸಲಾಗಿದೆ.

* ಜಯಮ್ಮ ಕರಿಯಣ್ಣ ಎಚ್.- ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ (೨೦೦೮) ಪಿಎಚ್.ಡಿ., ಮಹಾಪ್ರಬಂಧವೂ ಕೃತಿಯ ರೂಪದಲ್ಲಿ ಪ್ರಕಟಿಸಲಾಗಿದೆ. ನೊಳಂಬರ ಕಾಲದಲ್ಲಿ ರಚನೆಯಾದ ದೇವಾಲಯಗಳಾದ, ಕಂಪಲಿಯ ಸೋಮೇಶ್ವರ ದೇವಾಲಯ, ಮಲ್ಲಯ್ಯನಗುಡ್ಡದ ದೇವಾಲಯ, ಹಂಪೆಯ ದೇವಾಲಯಗಳು ಹಾಗೂ ಮೈಲಾರ ದೇವಾಲಯಗಳು ಮತ್ತು ನೊಳಂಬರ ಬಗ್ಗೆ ಇರುವ ಸಂಬಂಧವನ್ನು ಈ ಕೃತಿಯಿಂದ ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

* ನಾಗರಾಜ ಹೊಸೂರಕರ್-ಮೈಲಾರಲಿಂಗನ ಆಚರಣೆ-ಒಂದು ಸಾಂಸ್ಕೃತಿಕ ಅಧ್ಯಯನ(೨೦೦೮) ಪಿಎಚ್.ಡಿ., ಮಹಾಪ್ರಬಂಧವೂ ಮೈಲಾರನಿಗೆ ಸಂಬಂಧಿಸಿದ ಮಹತ್ವದ ಅಂಶಗಳನ್ನು ನೀಡುತ್ತದೆ. ಮೈಲಾರನಲಿಂಗನ ಪರಿಕಲ್ಪನೆ, ಮೈಲಾರನ ಪ್ರಾಚೀನತೆ, ಕರ್ನಾಟಕದಲ್ಲಿ ಮುಖ್ಯವಾದ ಮೈಲಾರನ ಕ್ಷೇತ್ರಗಳು, ಮೈಲಾರನ ಭಕ್ತಪರಂಪರೆ ಹಾಗೂ ನಂಬಿಕೆ ಆಚರಣೆಗಳಿಗೆ ಸಂಬಂಧಿಸಿದಂತೆ ಪೂರಕವಾದ ಮಾಹಿತಿಯನ್ನು ನೀಡುತ್ತದೆ.

* ಕಲಬುರ್ಗಿ ಎಂ.ಎಂ. ಮಾರ್ಗ ಸಂಪುಟ-೦೨(೨೦೧೦) ಕಲಬುರ್ಗಿಯವರ ಪ್ರಬಂಧಗಳಿಂದ ಕೂಡಿರುವ ಈ ಕೃತಿಯಲ್ಲಿ ಮೈಲಾರ ಮಾಳಚಿ ಎಂಬ ಲೇಖನವೂ ಮಹತ್ವವಾಗಿದೆ. ಈ ಲೇಖನದಲ್ಲಿ ಮೈಲಾರ-ಮಾಳಚಿ ಸಂಬಂಧಿಸಿದಂತೆ ಮೈಲಾರ ಮತ್ತು ಭೈರವನಿಗಿರುವ ಸಂಬಂಧವನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.

* ಜಯಮ್ಮ ಕರಿಯಣ್ಣ- ಶಾಸನಗಳಲ್ಲಿ ದಾನದತ್ತಿಗಳು(೨೦೧೦) ಈ ಕೃತಿಯಲ್ಲಿ ಕರ್ನಾಟಕದ ಪ್ರಾಚೀನ ಮೈಲಾರ ದೇವಾಲಯಗಳು ಎಂಬ ಲೇಖನವನ್ನು ಕಾಣಬಹುದು. ಕರ್ನಾಟಕದಲ್ಲಿ ಕಂಡುಬರುವ ಪ್ರಾಚೀನವಾದ ಮೈಲಾರ ದೇವಾಲಯಗಳಿಂದ ಕಂಪ್ಲಿ ತೆಕ್ಕಲಕೋಟೆಯ ಹರವಿನ ಮಲ್ಲಯ್ಯ ಹಾಗೂ ಶಾಸನೋಕ್ತ ದೇವಾಲಯಗಳ ಬಗ್ಗೆ ಚರ್ಚಿಸಲಾಗಿದೆ.

* ರಮೇಶ್ ಸ.ಚಿ. ಜಾನಪದ ಕರ್ನಾಟಕ ಸಂಪುಟ-೮(೨೦೧೦) ಇದರಲ್ಲಿ ಮೈತ್ರಿ ಕೆ.ಎಂ. ಅವರ ಮೈಲಾರ ಮಲ್ಲಣ್ಣ ಎಂಬ ಲೇಖನವಿದೆ. ಈ ಲೇಖನವೂ ಬೀದರ ಜಿಲ್ಲೆಯ ಪ್ರೇಮಪುರ ಅಥವಾ ಮೈಲಾರಪುರ ಸ್ಥಳಕ್ಕೆ ಸಂಬಂಧಿಸಿದ ಮೈಲಾರ ದೇವಾಲಯ ಬಗ್ಗೆ ಕುರಿತು ಮಾಹಿತಿ ನೀಡುತ್ತದೆ. ಮಲ್ಲಾರಿ ಮಹಾತ್ಮೆಯಲ್ಲಿನ ಮೈಲಾರನ ಪುರಾಣದ ಕಥೆ ಹಾಗೂ ವಾಸ್ತುಶಿಲ್ಪ, ನಂಬಿಕೆ ಆಚರಣೆಗಳ ಬಗ್ಗೆ ಮಾಹಿತಿಯನ್ನು ಒದಗಿಸಲಾಗುತ್ತದೆ.

* ಗೋವಿಂದರಾಜು ಸಿ.ಆರ್.(ಸಂ.) ಚರಿತ್ರೆ ಅಧ್ಯಯನ (೨೦೧೧) ಇದರಲ್ಲಿ ವಾಸುದೇವ ಬಡಿಗೇರ ಅವರ ಲೇಖನವಾದ "ತುಂಗಭದ್ರಾ ನದಿ ಪರಿಸರದ ಮೈಲಾರ ಪರಂಪರೆ" ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ನೀಡುತ್ತದೆ. ಈ ಲೇಖನದಲ್ಲಿ ಈ ಪರಿಸರದಲ್ಲಿ ಕಂಡುಬರುವ ಮೈಲಾರ ದೇವಾಲಯಗಳಾದ ಹೂವಿನಹಡಗಲಿ ಮೈಲಾರ, ತೆಕ್ಕಲಕೋಟೆ ಮೈಲಾರಗಳ ವಾಸ್ತುಶಿಲ್ಪ-ಮೂರ್ತಿಶಿಲ್ಪಗಳನ್ನು ಅಧ್ಯಯನಕ್ಕೆ ಸೂಕ್ತವಾದ ಮಾಹಿತಿ ನೀಡುತ್ತದೆ.

* ರಾಮಚಂದ್ರರಾವ್.ಎಸ್.ಕೆ. ಮೂರ್ತಿಶಿಲ್ಪದ ನೆಲೆ-ಹಿನ್ನೆಲೆ (೨೦೧೨)ಈ ಕೃತಿ ಮೂರ್ತಿಶಿಲ್ಪಗಳ ಲಕ್ಷಣಗಳು. ಸ್ವರೂಪಗಳನ್ನು ತಿಳಿಸಿಕೊಡುತ್ತದೆ. ಅಲ್ಲದೆ ಮೈಲಾರ-ಖಂಡೋಬ ಮೂರ್ತಿಶಿಲ್ಪದ ಪ್ರಾಚೀನತೆ ಹಾಗೂ ಲಕ್ಷಣಗಳನ್ನು ತಿಳಿಸಿಕೂಡಲು ಈ ಕೃತಿಯೂ ಪೂರಕವಾಗಿದೆ.

* ಮಹದೇವ ಸಿ. (ಸಂ.) ಮೈಲಾರ (೨೦೧೨) ಈ ಕೃತಿಯಲ್ಲಿ ಹೂವಿನಹಡಗಲಿ ಮೈಲಾರನಿಗೆ ಸಂಬಂಧಿಸಿದಂತೆ ವಿದ್ವಾಂಸರ ಲೇಖನಗಳ ಕಾಣಬಹುದು. ಸೋಮಶೇಖರ್ ಎಸ್.ವೈ. ಭೌಗೋಳಿಕ ಪರಿಸರ, ಮಂಜುನಾಥ ಬೇವಿನಕಟ್ಟಿ ಅವರ ಮೌಖಿಕ ಸಾಹಿತ್ಯ ಹಾಗೂ ಸಾಂಸ್ಕೃತಿಕ ನೆಲೆಗಳು, ದೇವರ ಕೊಂಡಾರೆಡ್ಡಿ. ಶಾಸನಗಳು, ರಮೇಶ ನಾಯಕ, ಚರಿತ್ರೆ, ವಾಸುದೇವ ಬಡಿಗೇರ, ವಾಸ್ತು ಮೂರ್ತಿಶಿಲ್ಪ ಹಾಗೂ ಕೇಶವನ್ ಪ್ರಸಾದ್ ಕೆ. ನಂಬಿಕೆ-ಆಚರಣೆಗಳು ಹೀಗೆ ವಿದ್ವಾಂಸರುಗಳು ಈ ಕೃತಿಯಲ್ಲಿ ಲೇಖನಗಳನ್ನು ನೀಡಿರುವುದರಿಂದ ಅಧ್ಯಯನಕ್ಕೆ ಮಹತ್ವವಾದ ಅಂಶಗಳನ್ನು ಗುರ್ತಿಸಲು ಸಹಾಯಕವಾಗಿದೆ.

* ವೆಂಕಟೇಶ ಎಂ.ಎನ್. ನಿಮ್ಮನಿಗೆ ಗುಡ್ಡದಯ್ಯ(೨೦೧೨) ಇದು ಇವರ ಪಿಎಚ್.ಡಿ. ಪ್ರಬಂಧವನ್ನು ಕೃತಿಯ ರೂಪದಲ್ಲಿ ಹೊರತರಲಾಗಿದೆ. ಪ್ರಮುಖವಾಗಿ ಹೂವಿನಹಡಗಲಿಯಲ್ಲಿನ ಜಾತ್ರೆಗಳ ಸ್ವವಿವರವಾದ ಮಾಹಿತಿಯನ್ನು ವಿಶ್ಲೇಷಿಸುತ್ತದೆ. ಮೈಲಾರ ಸಂಪ್ರದಾಯ, ಅನನ್ಯತೆ, ಮೈಲಾರ ಜಾತ್ರೆಯ ವಿವಿಧ ಮುಖಗಳು ಬದಲಾವಣೆಯ ಪ್ರಕ್ರಿಯೆ, ಕಾರಣಿಕ ಹೀಗೆ ಮುಂತಾದ ಮಹತ್ವದ ಅಂಶಗಳನ್ನು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

* ವಾಸುದೇವ ಬಡಿಗೇರ ಅವರ ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ-೧, ಈ ಕೃತಿಯಲ್ಲಿ ಹಂಪಿ ಪರಿಸರದಲ್ಲಿ ಕಂಡುಬರುವ ಮೈಲಾರನ ಕ್ಷೇತ್ರಗಳನ್ನು ಕುರಿತು ಚರ್ಚಿಸಲಾಗಿದೆ. ಹೂವಿನ ಹಡಗಲಿ ಮೈಲಾರ, ತೆಕ್ಕಲಕೋಟೆಯ ಮಲ್ಲಯ್ಯನ ಬಗೆಗೆ ಚರ್ಚಿಸಲಾಗಿದೆ.

* ಪರಮಶಿವಯ್ಯ ಜಿ. ಶಂ. ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು.(೨೦೧೨) ಈ ಕೃತಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ಗೊರವ ಸಂಪ್ರದಾಯ ಹಾಗೂ ಮೈಲಾರನ ಕುರಿತು ಕಾವ್ಯಗಳನ್ನು ಚರ್ಚಿಸಲಾಗಿದ್ದು, ಅಧ್ಯಯನಕ್ಕೆ ಪೂರಕವಾದ ಅಂಶಗಳನ್ನು ಒದಗಿಸುತ್ತದೆ.

* ರಹಮತ್ ತರೀಕೆರೆ ಅವರ ಕರ್ನಾಟಕದ ನಾಥಪಂಥ (೨೦೧೩) ಈ ಕೃತಿಯೂ ಕರ್ನಾಟಕದಲ್ಲಿ ಕಂಡು ಬರುವ ನಾಥಪಂಥದ ಪ್ರಾಚೀನತೆ ಹಾಗೂ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ. ಮೈಲಾರ ಮತ್ತು ಭೈರವಾರಾಧನೆ ಸಂಬಂಧಿಸಿದಂತೆ ಮಹತ್ವವಾದ ಅಂಶಗಳನ್ನು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

* ನಾರಾಯಣ ಪಿ.ವಿ. ಅವರ ನಯಸೇನ ಧರ್ಮಾಮೃತ(೨೦೧೩) ಈ ಕೃತಿಯಲ್ಲಿ ಮೈಲಾರನ ಕೆಲವು ಉಲ್ಲೇಖಗಳನ್ನು ಕಾಣಬಹುದು.

* ದಿವಾಕರ ಆರ್.ಬಿ. ಅವರ ಬಳ್ಳಾರಿ ಜಿಲ್ಲೆಯ ಜನಪದ ಕಾವ್ಯ ಪ್ರಕಾರಗಳು(೨೦೧೪) ಈ ಕೃತಿಯು ಜಿಲ್ಲೆಯಲ್ಲಿ ಮೈಲಾರನ ಕಾವ್ಯಗಳಿಗೆ ಸಂಬಂಧಿಸಿದ ಪ್ರಕಾರಗಳನ್ನು ಕುರಿತು ಹಾಗೂ ಮೈಲಾರನ ಒಕ್ಕಲುಗಳನ್ನು ಚರ್ಚಿಸಲಾಗಿದೆ.

* ಲಿಂಗದಹಳ್ಳಿ ಹಾಲಪ್ಪ ಅವರ ಬಳ್ಳಾರಿ ಪರಿಸರದ ಹಾಲುಮತ ದೈವಗಳು(೨೦೧೫). ಈ ಕೃತಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ಜಿಲ್ಲೆಯ ಮೈಲಾರ ಸ್ಥಳಗಳನ್ನು ಹಾಗೂ ಅಲ್ಲಿ ನಡೆಯುವ ವಿವಿಧ ಸಂಪ್ರದಾಯಗಳನ್ನು ಈ ಕೃತಿಯಿಂದ ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

* ರಮೇಶ ನಾಯಕ ಅವರ ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ(೨೦೧೫) ಅಪ್ರಕಟಿತ ಪಿಎಚ್.ಡಿ., ಮಹಾಪ್ರಬಂಧದಲ್ಲಿ ಯಾದಗಿರಿ ಜಿಲ್ಲೆಯ ಮೈಲಾರ ಪರಂಪರೆ

ಹಾಗೂ ಮೈಲಾರಪುರದ ದೇವಾಲಯ ವಾಸ್ತುಶಿಲ್ಪ, ಮೂರ್ತಿಶಿಲ್ಪಗಳನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದ್ದು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

* ಹಳ್ಳಿಕೇರಿ ಎಫ್.ಟಿ.(ಸಂ) ಮೈಲಾರಲಿಂಗ ಪರಂಪರೆ(೨೦೧೮) ಈ ಕೃತಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ಹಲವಾರು ವಿದ್ವಾಂಸರು ತಮ್ಮ ಲೇಖನಗಳನ್ನು ಚರ್ಚಿಸಲಾಗಿದೆ. ಕಾವ್ಯ ಪುರಾಣ, ಕೆ. ರವೀಂದ್ರನಾಥ, ದಾಖಲು ಸಾಹಿತ್ಯ, ಎಫ್.ಟಿ.ಹಳ್ಳಿಕೇರಿ. ಮೌಖಿಕ ಪ್ರಕಾರಗಳು, ಎಸ್.ಎಸ್. ಅಂಗಡಿ. ಕಲೆ ಮತ್ತು ವಾಸ್ತುಶಿಲ್ಪ, ಎಸ್.ವೈ.ಸೋಮಶೇಖರ್. ಚಾರಿತ್ರಿಕ ಅಧ್ಯಯನ, ಸಿ.ಮಹದೇವ. ಪಂಥ ಪ್ರಭಾವ ಮತ್ತು ಪರಂಪರೆ, ಲಿಂಗದಹಳ್ಳಿ ಹಾಲಪ್ಪ. ಉತ್ತರ ಕರ್ನಾಟಕದ ಮೈಲಾರಲಿಂಗ ನೆಲೆಗಳು, ಬಿ.ಬಿ.ಪಾಟೀಲ್. ಕಲ್ಯಾಣ ಕರ್ನಾಟಕದ ಮೈಲಾರನ ನೆಲೆಗಳು, ಗಂಗಾಧರ ಕೊಡ್ಲಿಯವರ ಮಲೆನಾಡು ಪರಿಸರ ಮೈಲಾರನ ನೆಲೆಗಳು, ಚಿಕ್ಕಣ್ಣ ಯಣ್ಣೆಕಟ್ಟೆ. ಮೈಸೂರು ಪರಿಸರದ ಮೈಲಾರ ನೆಲೆಗಳು, ರಾಜಶ್ರೀ ಬ. ಪಾಟೀಲ. ಆಂಧ್ರಪ್ರದೇಶದ ಪರಿಸರದ ಮೈಲಾರನ ನೆಲೆಗಳು, ವಿರೂಪಾಕ್ಷಿ ಎನ್.ಬಿ. ಹಾಗೂ ಮಹಾರಾಷ್ಟ್ರದ ಮೈಲಾರ ನೆಲೆಗಳು, ವಿಠಲ್‌ರಾವ್ ಟಿ. ಗಾಯಕವಾಡ್‌ರ ಲೇಖನಗಳನ್ನು ನನ್ನ ಅಧ್ಯಯನದ ಪೂರಕವಾದ ಮಾಹಿತಿ ಒದಗಿಸುತ್ತದೆ.

* ಅಶ್ವಿನಿ ಬಸಪ್ಪ ಕರೀಕಟ್ಟಿ. ಅವರ ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ(ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ(೨೦೧೬) ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಅಧ್ಯಯನಕ್ಕೆ ಸೂಕ್ತವಾದ ಮಾಹಿತಿ ಒದಗಿಸುತ್ತದೆ.

* ಕನ್ನಡ ವಿಶ್ವವಿದ್ಯಾಲಯದಿಂದ ಹಾಗೂ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ವಿದ್ವಾಂಸರಿಂದ ಪ್ರಕಟಣೆಗೊಂಡ, ಕರ್ನಾಟಕದ ದೇವಾಲಯಗಳ ಕೋಶ–ಬಳ್ಳಾರಿ ಜಿಲ್ಲೆ. ಕರ್ನಾಟಕ ದೇವಾಲಯಗಳ ಕೋಶ–ಕೊಪ್ಪಳ ಜಿಲ್ಲೆ. ಕರ್ನಾಟಕ ದೇವಾಲಯಗಳ ಕೋಶ–ಹಾವೇರಿ ಜಿಲ್ಲೆ. ಕರ್ನಾಟಕ ದೇವಾಲಯಗಳ ಕೋಶ–ರಾಯಚೂರು ಜಿಲ್ಲೆ. ಕರ್ನಾಟಕ ದೇವಾಲಯಗಳ ಕೋಶ–ಧಾರವಾಡ ಜಿಲ್ಲೆ. ಕರ್ನಾಟಕ ದೇವಾಲಯಗಳ ಕೋಶ–ಗದಗ ಜಿಲ್ಲೆ. ಕರ್ನಾಟಕ ದೇವಾಲಯಗಳ ಕೋಶ–ವಿಜಾಪುರ ಜಿಲ್ಲೆ. ಕರ್ನಾಟಕ ದೇವಾಲಯಗಳ ಕೋಶಗಳು ಈ ಜಿಲ್ಲೆಯಲ್ಲಿನ ಮೈಲಾರನ ದೇವಾಲಯಗಳ ಮಾಹಿತಿಯನ್ನು ನೀಡುತ್ತದೆ. ಇದರಿಂದ ನನ್ನ ಅಧ್ಯಯನಕ್ಕೆ ಪೂರಕವಾದ ಆಕರ ಸಾಮಗ್ರಿಯಾಗಿದೆ.

* ಮೈಲಾರನಿಗೆ ಸಂಬಂಧಿಸಿದಂತೆ ಇನ್ನೂ ಕೆಲವು ಲೇಖನಗಳನ್ನು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಶಿವಾನಂದ ಹಂಬಣ್ಣನವರ– ಮೈಲಾರಲಿಂಗನ ಪದಗಳು, ಸೂರ್ಯನಾಥ ಕಾಮತ್–ಮೈಲಾರ ದೇವರು. ಮಹಂತೇಶ ಎನ್.ಎಸ್. ಹೊಸದುರ್ಗ ಪರಿಸರದ ಸಾಂಸ್ಕೃತಿಕ

ಅಧ್ಯಯನ, ಕಣವಿ–ಗೊರವರು. ಶೇಖರ ಪೂಜಾರ–ಮೈಲಾರಲಿಂಗ ಭಕ್ತರಾದ ಗೊಗ್ಗಯ್ಯಗಳು ಎಂಬ ಲೇಖನಗಳನ್ನು ಸಂದರ್ಭಕ್ಕೆ ತಕ್ಕಂತೆ ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಶಾಸನಗಳಿಗೆ ಸಂಬಂಧಿಸಿದಂತೆ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳಾದ ೩, ೪, ೫, ೬, ೭, ೮, ೯, ೧೦, ೧೧, ೧೨, ೧೩, ೧೫, ೩೪. ಅಲ್ಲದೆ ಕನ್ನಡ ವಿಶ್ವವಿದ್ಯಾಲಯದ, ಬಳ್ಳಾರಿ ಜಿಲ್ಲೆಯ ಶಾಸನಗಳು(೧೯೯೮), ಹಂಪಿ ಶಾಸನಗಳು(೨೦೦೦), ಆಂಧ್ರಪ್ರದೇಶದ ಕನ್ನಡ ಶಾಸನಗಳು(೨೦೦೧), ತಮಿಳುನಾಡಿನ ಕನ್ನಡ ಶಾಸನಗಳು (೨೦೦೦), ಕೊಪ್ಪಳ ಜಿಲ್ಲೆಯ ಶಾಸನಗಳು(೧೯೯೯) ರಾಯಚೂರು ಜಿಲ್ಲೆಯ ಶಾಸನಗಳು (೨೦೦೩) ಹಾಗೂ ದಕ್ಷಿಣ ಭಾರತದ ಶಾಸನ ಸಂಪುಟಗಳಲ್ಲಿನ ಮೈಲಾರನ ಉಲ್ಲೇಖಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೧.೪. ಅಧ್ಯಯನದ ವಿಧಾನ**

ಸಂಶೋಧನೆಗೆ ಪೂರ್ವಯೋಜಿತ ಅಧ್ಯಯನ ವಿಧಾನವನ್ನು ಅನುಸರಿಸುವುದು ಅತಿಮುಖ್ಯ. ಅಧ್ಯಯನದ ಕ್ರಮವು ಸಂಶೋಧನೆಗೆ ವೈಜ್ಞಾನಿಕವಾದ ಮಾರ್ಗವಾದದ್ದು. ಮಹಾಪ್ರಬಂಧವನ್ನು ವ್ಯವಸ್ಥಿತ ಹಾಗೂ ಸುಲಭವಾಗಿ ರಚಿಸಲು ಸಹಾಯಕವಾದದು. ಸಂಶೋಧನಾ ಪ್ರಬಂಧಕ್ಕೆ ಪ್ರಥಮ ಹಾಗೂ ಅಂತಿಮ ರೂಪವನ್ನು ಅಧ್ಯಯನ ಕ್ರಮವು ನೀಡುವುದು ಗಮನಿಸಬೇಕಾದ ಸಂಗತಿ. ಪ್ರಸ್ತುತ ಸಂಶೋಧನಾ ವಿಧಾನವಾದ ಮೈಲಾರನಿಗೆ ಸಂಬಂಧಿಸಿದಂತೆ ಗ್ರಂಥ ಸೂಚಿಯನ್ನು ತಯಾರಿಸಿ ಅಕಾರಾದಿಯಾಗಿ ಜೋಡಿಸಿಕೊಳ್ಳಲಾಗಿದೆ. ಹಾಗೂ ಇದುವರೆಗೂ ಹೊರಬಂದಿರುವ ಸಂಶೋಧನ ಕೃತಿ, ಲೇಖನ, ನಿಯತಕಾಲಿಕೆ ಹಾಗೂ ಪ್ರಬಂಧಗಳನ್ನು ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ಆಕರಗಳನ್ನು ಅಧ್ಯಯನ ಮಾಡಿ ಮೈಲಾರ ವಿಷಯಕ್ಕೆ ಸಂಬಂಧಿಸಿದಂತೆ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಪಟ್ಟಿಮಾಡಿಕೊಳ್ಳಲಾಗಿದೆ.

ನಂತರ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ವ್ಯವಸ್ಥಿತವಾದ ಹಾಗೂ ಪೂರ್ವಯೋಜಿತವಾದ ವಿಧಾನವೆಂದರೆ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಇಲ್ಲಿ ಅನುಸರಿಸಿದ ವಿಧಾನವೆಂದರೆ ಕರ್ನಾಟಕದ ತುಂಬಾ ಹರಡಿರುವ ಮೈಲಾರನ ನೆಲೆಗಳನ್ನು ಪಟ್ಟಿ ಮಾಡಲಾಯಿತು. ಈ ಸ್ಥಳಗಳಿಗೆ ಭೇಟಿ ನೀಡುವ ಮೂಲಕ ಅಲ್ಲಿನ ದೇವಾಲಯ, ಶಾಸನ, ಮೂರ್ತಿಶಿಲ್ಪ, ನಂಬಿಕೆ ಆಚರಣೆಗಳಿಗೆ ಸಂಬಂಧಿಸಿದಂತೆ ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ. ಹಾಗೂ ಸಂಪ್ರದಾಯವನ್ನು ತಿಳಿದಿರುವ ಅನೇಕ ಸ್ಥಳೀಯ ವ್ಯಕ್ತಿಗಳೊಂದಿಗೆ ಮೈಲಾರ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಪೂರಕವಾದ ಮಾಹಿತಿಯನ್ನು ಪಡೆದುಕೊಳ್ಳಲಾಯಿತು.

ಪ್ರಸ್ತುತ ಅಧ್ಯಯನವೂ ಬಹುಶಿಸ್ತೀಯ ಅಧ್ಯಯನವಾಗಿದ್ದು, ಚಾರಿತ್ರಿಕ ಅಂಶಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಗಿದೆ ಆದರೂ ಇತರ ಅಧ್ಯಯನ ಶಿಸ್ತುಗಳಿಂದ ಜಾನಪದ, ಬುಡಕಟ್ಟು ಇನ್ನಿತರ ಶಾಸ್ತ್ರಗಳೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿರುವುದರಿಂದ ಈ ಎಲ್ಲಾ ಶಾಸ್ತ್ರಗಳನ್ನು ಬಳಸಿಕೊಂಡು "ಕರ್ನಾಟಕದಲ್ಲಿ ಮೈಲಾರ ಪರಂಪರೆ: ಚಾರಿತ್ರಿಕ ಅಧ್ಯಯನ" ಎಂಬ ವಿಷಯದಲ್ಲಿ ಪ್ರಬಂಧವನ್ನು ಕಟ್ಟಿಕೊಡುವುದರ ಹಿನ್ನೆಲೆಯಲ್ಲಿ ಇದೊಂದು ಕ್ಷೇತ್ರಕಾರ್ಯ, ಮಾಹಿತಿ ಸಂಗ್ರಹಣೆ, ದಾಖಲಾತಿ, ವಿಮರ್ಶೆಯ ಮಾದರಿಯಲ್ಲಿ ಅಧ್ಯಯನದ ವಿಧಾನವಾಗಿದೆ.

**೧.೫. ಅಧ್ಯಯನದ ಸ್ವರೂಪ**

ಪ್ರಸ್ತುತ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕೆ ತಕ್ಕಂತೆ ಆರು ಪ್ರಮುಖ ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಪ್ರಮುಖ ಅಧ್ಯಾಯಗಳನ್ನು ಹಲವು ಉಪ ಶೀರ್ಷಿಕೆಗಳನ್ನಾಗಿ ಮಾಡಿಕೊಂಡಿದೆ. ಈ ಆರು ಅಧ್ಯಾಯಗಳು ಒಳಗೊಂಡಿರುವ ವಿಷಯ ಮತ್ತು ತಾತ್ವಿಕ ಸ್ವರೂಪ ಈ ಕೆಳಗಿನಂತಿದೆ.

೧. ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪ.

೨. ಕರ್ನಾಟಕದಲ್ಲಿ ಮೈಲಾರ ಪರಂಪರೆ.

೩. ದೇವಾಲಯಗಳು

೪. ಮೂರ್ತಿಶಿಲ್ಪಗಳು

೫. ನಂಬಿಕೆ–ಆಚರಣೆಗಳು

೬. ಸಮಾರೋಪ

**ಒಂದನೆಯ ಅಧ್ಯಾಯದಲ್ಲಿ** ಪ್ರಸ್ತಾವನೆ, ವಿಷಯವನ್ನು ಆಯ್ಕೆ ಮಾಡಿಕೊಂಡು ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ವಿಷಯಕ್ಕೆ ಸಂಬಂಧಿಸಿದಂತೆ ಇಲ್ಲಿವರೆಗಿನ ನಡೆದಿರುವ ಪೂರ್ವ ಪ್ರಯತ್ನಗಳ ಸಮೀಕ್ಷೆಯನ್ನು ನೀಡಲಾಗಿದೆ.

**ಎರಡನೇ ಅಧ್ಯಾಯದಲ್ಲಿ** ಕರ್ನಾಟಕದಲ್ಲಿ ಮೈಲಾರ ಪರಂಪರೆ ಭೌಗೋಳಿಕ ಲಕ್ಷಣ, ಮೌಖಿಕ ಆಕರಗಳು ಹಾಗೂ ಕಾವ್ಯ ಪುರಾಣಗಳ ಹಿನ್ನೆಲೆ ಮತ್ತು ಮೈಲಾರನಿಗೆ ಸಂಬಂಧಿಸಿದ ಚಾರಿತ್ರಿಕ ಹಿನ್ನೆಲೆಯನ್ನು ಚರ್ಚಿಸಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** ಕರ್ನಾಟಕದಲ್ಲಿ ಕಂಡುಬರುವ ಮೈಲಾರನಿಗೆ ಸಂಬಂಧಿಸಿದ ದೇವಾಲಯಗಳನ್ನು ಚರ್ಚಿಸಲಾಗಿದೆ. ದೇವಾಲಯಕ್ಕೆ ಸಂಬಂಧಿಸಿದ ಸ್ಥಳದ ಪರಿಚಯ, ಶಾಸನೋಕ್ತ ದೇವಾಲಯ, ದೇವಾಲಯದ ಲಕ್ಷಣಗಳು, ದೇವಾಲಯದಲ್ಲಿ ಕಂಡುಬರುವ

ಚಾರಿತ್ರಿಕ ಅಂಶಗಳು ಹಾಗೂ ದೇವಾಲಯವು ಮೈಲಾರನಿಗೆ ಸಂಬಂಧಿಸಿದ ವಿಶೇಷತೆಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ನಾಲ್ಕನೇ ಅಧ್ಯಾಯ**ದಲ್ಲಿ ಕರ್ನಾಟಕದಲ್ಲಿ ಕಂಡುಬರುವ ಮೈಲಾರ, ಗಂಗೆಮಾಳಮ್ಮ ಹಾಗೂ ಮೈಲಾರನಿಗೆ ಸಂಬಂಧಿಸಿದ ಇತರೆ ಶಿಲ್ಪಗಳ ಬಗ್ಗೆ ಚರ್ಚಿಸಲಾಗಿದೆ.

**ಐದನೇ ಅಧ್ಯಾಯ**ದಲ್ಲಿ ನಂಬಿಕೆ ಆಚರಣೆ, ಮೈಲಾರನಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಕಂಡುಬರುವ ನಂಬಿಕೆ-ಆಚರಣೆ, ವಿಧಿವಿಧಾನಗಳು, ಉತ್ಸವ, ಜಾತ್ರೆ, ಸಂಪ್ರದಾಯದ ಬಗೆಗೆ ವಿವರವಾದ ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ ಸಂಪ್ರದಾಯದಲ್ಲಿ ಪಾಲ್ಗೊಳ್ಳುವ ವಿವಿಧ ಜನಸಮುದಾಯಗಳು, ದೈವಗಳ ಜೊತೆ ಇರುವ ಸಂಬಂಧವನ್ನು ಚರ್ಚಿಸಲಾಗಿದೆ.

**ಆರನೇ ಅಧ್ಯಾಯ**ವು ಸಮಾರೋಪವಾಗಿದ್ದು, ಇದರಲ್ಲಿ ಪ್ರತಿಯೊಂದು ಅಧ್ಯಾಯದಲ್ಲಿರುವ ಪ್ರಮುಖವಾದ ವಿಷಯಗಳು, ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳ ವಿವರಣೆ ನೀಡಲಾಗಿದೆ. ಅಲ್ಲದೇ ಪ್ರಸ್ತುತ ಸಂಶೋಧನೆ ಅಥವಾ ಅಧ್ಯಯನ ಒಟ್ಟಾರೆ ಸಮಗ್ರ ವಿಷಯಕ್ಕೆ ಸಂಬಂಧಿಸಿದಂತೆ ಕಂಡುಕೊಳ್ಳಲಾದ ಒಟ್ಟು ಫಲಿತಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇಲ್ಲಿ ವ್ಯಕ್ತಪಡಿಸಿರುವಂತಹ ಅಭಿಪ್ರಾಯಗಳೇ ಅಂತಿಮವಲ್ಲ. ಇವು ಮುಂದಿನ ಸಂಶೋಧನೆಗೆ ಹಾಗೂ ಹೊಸ ವಿಚಾರಗಳಿಗೂ ಪೂರಕವಾದವುಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ವಿಷಯಕ್ಕೆ ಅನುಗುಣವಾಗಿ ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳು, ವಕ್ತೃ ವಿವರ, ಪದಕೋಶ, ನಕ್ಷೆಗಳು, ತಲನಕ್ಷೆಗಳು ಹಾಗೂ ಛಾಯಾಚಿತ್ರಗಳನ್ನು ನೀಡಲಾಗಿದೆ.



# ಅಧ್ಯಾಯ : ಎರಡು

# ಕರ್ನಾಟಕದಲ್ಲಿ ಮೈಲಾರ ಪರಂಪರೆ

೨.೧. ಭೌಗೋಳಿಕ ಹಿನ್ನೆಲೆ

೨.೨. ಮೌಖಿಕ ಆಕರಗಳು ಮತ್ತು ಕಾವ್ಯ ಪುರಾಣಗಳ ಹಿನ್ನೆಲೆ

೨.೩. ಚಾರಿತ್ರಿಕ ಹಿನ್ನೆಲೆ

# ಅಧ್ಯಾಯ: ಎರಡು

# ಕರ್ನಾಟಕದಲ್ಲಿ ಮೈಲಾರ ಪರಂಪರೆ

ಕರ್ನಾಟಕದ ಚಾರಿತ್ರಿಕ ಕಾಲಘಟ್ಟದಲ್ಲಿ ವಿವಿಧ ಪಂಥ-ಪರಂಪರೆಗಳನ್ನು ಕಾಣಬಹುದು. ಇಲ್ಲಿ ಹಲವಾರು ದೈವಗಳ ಪರಂಪರೆಗಳು ಹುಟ್ಟಿಕೊಂಡು ನಾಡಿನ ಉದ್ದಗಲಕ್ಕೂ ಹರಡಿಕೊಂಡಿವೆ. ಮಂಟೇಸ್ವಾಮಿ, ಮಲೆಮಾದೇಶ್ವರ, ಬೀರಪ್ಪ ಹಾಗೂ ರಂಗನಾಥ ಪರಂಪರೆಗಳಂತೆ ಮೈಲಾರ ಪರಂಪರೆಯೂ ಒಂದು. ಕರ್ನಾಟಕದಲ್ಲಿ ಕಂಡುಬರುವ ಈ ದೈವವು ಮಹಾರಾಷ್ಟ್ರ, ಆಂಧ್ರಪ್ರದೇಶ ಹಾಗೂ ತಮಿಳುನಾಡಿಗೂ ತನ್ನ ವಿಸ್ತರತೆಯನ್ನು ಹೊಂದಿದೆ. ಮೈಲಾರ ಪರಂಪರೆಯ ನೆಲೆಗಳು ಚಾರಿತ್ರಿಕ ಮತ್ತು ಸಾಂಸ್ಕೃತಿಕವಾದ ಸಂಪ್ರದಾಯಗಳನ್ನು ಅರಿತುಕೊಳ್ಳಲು ಅವಕಾಶವನ್ನು ಕಲ್ಪಿಸುತ್ತವೆ. ಕರ್ನಾಟಕದಲ್ಲಿ ದಕ್ಷಿಣದಿಂದ ಉತ್ತರಕ್ಕೆ ವಲಸೆ ಹೋದ ದೈವಗಳು ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದ ದೈವಗಳು ಎನ್ನುವ ಪರಿಕಲ್ಪನೆ ರೂಢಿಯಲ್ಲಿದೆ. ಕೆಲವು ದೈವಗಳು ಆಂಧ್ರದಿಂದ ವಲಸೆ ಬಂದ ದೈವಗಳು, ತಮಿಳುನಾಡಿನಿಂದ ವಲಸೆ ಬಂದ ದೈವಗಳು, ಮಹಾರಾಷ್ಟ್ರದಿಂದ ವಲಸೆಬಂದ ದೈವಗಳು ಎಂಬ ಪರಿಕಲ್ಪನೆ ಜನರಲ್ಲಿದೆ. ಆದರೆ ರಾಜ್ಯಗಳ ವಿಂಗಡನೆ ಹಾಗೂ ಪ್ರಾದೇಶಿಕವಾಗಿ ಭಿನ್ನ ಆಚರಣೆಗಳಿಂದ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ದೈವಗಳು ಜನರ ಆಚರಣೆಗಳ ಮೂಲಕ ವಲಸೆ ಹೋಗುತ್ತವೆ. ಪ್ರಮುಖವಾಗಿ ಮೈಲಾರನನ್ನು ದಕ್ಷಿಣದ ದೇಶಿ ದೇವರು ಎಂಬ ನಂಬಿಕೆ ಜನರಲ್ಲಿದೆ. ಏಕೆಂದರೆ ದಕ್ಷಿಣ ಭಾರತದಲ್ಲಿ ಹೆಚ್ಚು ಆರಾಧನೆಗೆ ಒಳಗಾಗಿರುವ ದೈವ ಮೈಲಾರ. ಮೈಲಾರನಿಗೆ ಸಂಬಂಧಿಸಿದ ಹೆಚ್ಚು ಆಕರಗಳು ದಕ್ಷಿಣ ಭಾರತದ ಕರ್ನಾಟಕದಲ್ಲಿ ದೊರೆಯುತ್ತವೆ.

ಭೌಗೋಳಿಕವಾಗಿ ಕರ್ನಾಟಕದ ತುಂಬಾ ಹರಡಿರುವ ಈ ದೈವ ಎಲ್ಲಾ ಜನಸಮುದಾಯದಲ್ಲಿ ಭಕ್ತರಿದ್ದಾರೆ. ಪ್ರದೇಶದಿಂದ ಪ್ರದೇಶಕ್ಕೆ ಭಿನ್ನ ಆಚರಣೆಗಳನ್ನು ಹೊಂದಿರುವ ಈ ದೈವದ ಅಸ್ತಿತ್ವವು ಪ್ರಾಚೀನ ಕಾಲದಿಂದಲೂ ಗೋಚರಿಸುತ್ತದೆ. ಪ್ರಾಗೈತಿಹಾಸ ಕಾಲದಿಂದ ಆಧುನಿಕ ಕಾಲದವರೆಗೆ ಕಂಡುಬರುವ ಹಲವು ನೆಲೆಗಳಲ್ಲಿ ಮೈಲಾರನ ಅಸ್ತಿತ್ವ

ಇರುವುದನ್ನು ಕಾಣಬಹುದು. ಭೌಗೋಳಿಕವಾಗಿ ಬೆಟ್ಟ, ಗುಡ್ಡ, ಗವಿ, ಕಲ್ಲಾಸರೆ, ದುರ್ಗಮವಾದ ಪ್ರದೇಶಗಳಲ್ಲಿ ಮೈಲಾರನ ನೆಲೆಗಳನ್ನು ಕಾಣಬಹುದು. ಇಂತಹ ಮೈಲಾರನ ನೆಲೆಗಳು ಇಂದಿಗೂ ಸಾಂಸ್ಕೃತಿಕ ಜೀವಂತಿಕೆಯನ್ನು ಉಳಿಸಿಕೊಂಡಿವೆ. ಈ ಪರಂಪರೆಯನ್ನು ಅರಿಯಲು ನಮಗೆ ದೊರೆಯುವ ಮೌಖಿಕ ಆಕರಗಳು ಕ್ರಿ.ಶ. ೧೦ನೇ ಶತಮಾನದಿಂದ ದೊರೆಯುತ್ತವೆ. ಕಾವ್ಯ, ಪುರಾಣ, ವಚನ, ಜನಪದ, ಸಾಹಿತ್ಯ, ಲಾವಣಿ, ಕೀರ್ತನೆ, ಸುಳಾದಿಗಳಲ್ಲಿ ಮೈಲಾರನ ಉಲ್ಲೇಖಗಳು ದೊರೆಯುತ್ತವೆ. ಮೈಲಾರನಿಗೆ ಸಂಬಂಧಿಸಿದಂತೆ ನಯಸೇನ ಧರ್ಮಾಮೃತ, ಬ್ರಹ್ಮಶಿವನ ಸಮಯ ಪರೀಕ್ಷೆ, ನೇಮಿಚಂದ್ರನ ಲೀಲಾವತಿ ಪ್ರಬಂಧ, ಹರಿಹರ ಕವಿಯ ಶಂಕರ ದಾಸಿಮಯ್ಯನ ರಗಳೆ, ಕುಮಾರವ್ಯಾಸನ ಕರ್ನಾಟಕ ಭಾರತ ಕಥಾಮಂಜರಿ, ಅಂಜನಾ ಚರಿತೆ, ರಾಮನಾಥ ಚರಿತೆ, ಭೈರವೇಶ್ವರ ಕಾವ್ಯ ಹಾಗೂ ಶಂಕರವಿಜಯದ ಕಾವ್ಯದಲ್ಲಿ ಮೈಲಾರನನ್ನು ತಮ್ಮದೇ ರೀತಿಯಲ್ಲಿ ವರ್ಣಿಸಿರುವುದು ಕಂಡುಬರುತ್ತದೆ.

ಈ ಕಾವ್ಯಗಳಿಂದ ಮೈಲಾರನ ಉಲ್ಲೇಖಗಳು ಕ್ರಿ.ಶ. ೧೦ನೇ ಶತಮಾನದಿಂದ ಮೈಲಾರ ಇದ್ದದ್ದು ಗೋಚರಿಸುತ್ತದೆ. ಮೈಲಾರನಿಗೆ ಸಂಬಂಧಿಸಿದಂತೆ ಕ್ರಿ.ಶ. ೧೩ನೇ ಶತಮಾನದಿಂದ ೧೬ನೇ ಶತಮಾನದಲ್ಲಿ ರಚನೆಯಾದ ಪುರಾಣಗಳು ಮುಖ್ಯ ಆಕರಗಳಾಗಿ ದೊರೆಯುತ್ತವೆ. ಶಂಕರದಾಸಿಮಯ್ಯನ ಪುರಾಣ, ಜನ್ನ ಕವಿಯ ಅನಂಥನಾಥ ಪುರಾಣ ಹಾಗೂ ವಿರಕ್ತ ತೋಂಟದಾರ್ಯರ ತೋಂಟದ ಸಿದ್ದೇಶ್ವರ ಪುರಾಣದಲ್ಲಿ ಮೈಲಾರನ ಉಲ್ಲೇಖಗಳು ಕಂಡುಬರುತ್ತವೆ. ಬಸವಣ್ಣ, ಚನ್ನಬಸವಣ್ಣ, ಉರಲಿಂಗಪೆದ್ದಿ, ಮಡಿವಾಳ ಮಾಚಿದೇವ ಹಾಗೂ ಸೊಡ್ಡಳ ಬಾಚರಸನ ವಚನಗಳಲ್ಲಿ ಮೈಲಾರನ ಉಲ್ಲೇಖಗಳು ದೊರೆಯುತ್ತವೆ. ಕನಕದಾಸರ ಕೀರ್ತನೆಗಳಲ್ಲಿ ಹಾಗೂ ವಿಜಯದಾಸರ ಸುಳಾದಿಗಳಲ್ಲಿ ಮೈಲಾರನ ಗುರುತು ಇದ್ದದ್ದು ಕಂಡುಬರುತ್ತದೆ. ಈ ಎಲ್ಲಾ ಮೌಖಿಕ, ಕಾವ್ಯ, ಪುರಾಣಗಳು ಕ್ರಿ.ಶ. ೧೦ನೇ ಶತಮಾನದಿಂದ ೧೬ನೇ ಶತಮಾನದವರೆಗೆ ಮೈಲಾರನು ಹೆಚ್ಚು ಪ್ರಚರತೆಯನ್ನು ಪಡೆದುಕೊಂಡು ಆರಾಧನೆಗೆ ಒಳಪಟ್ಟಿರುವುದನ್ನು ಕಾಣಬಹುದು.

ಚಾರಿತ್ರಿಕವಾಗಿ ಮೈಲಾರ ಪರಂಪರೆಯನ್ನು ತಿಳಿಯಲು ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು ಕರ್ನಾಟಕದ ತುಂಬಾ ದೊರೆಯುತ್ತವೆ. ಈ ಆಕರಗಳು ನಮಗೆ ೧೦ನೇ ಶತಮಾನದಿಂದ ಲಭ್ಯವಾಗುತ್ತವೆ. ಮೈಲಾರನ ದೇವಾಲಯಕ್ಕೆ ದತ್ತಿ ಬಿಟ್ಟ ಉಲ್ಲೇಖಗಳು ಕೆಲವು ಶಾಸನಗಳಲ್ಲಿ ದೊರೆಯುತ್ತವೆ. ಇನ್ನು ಹಲವು ಉಲ್ಲೇಖಗಳನ್ನು ಹೊಂದಿರುವ ವ್ಯಕ್ತಿನಾಮಗಳು, ಸ್ಥಳನಾಮಗಳು ಶಾಸನಗಳಲ್ಲಿ ಕಾಣಬಹುದು. ಮೈಲಾರ ಪರಂಪರೆಯನ್ನು ಅರಿಯಲು ಮೂಲ ಆಕರಗಳಾಗಿ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳು ಕಂಡುಬರುತ್ತವೆ. ಪ್ರಾಚೀನವಾಗಿ ಮೈಲಾರನ ದೇವಾಲಯ ನಿರ್ಮಾಣದ ಬಗೆಗೆ ಕಲ್ಯಾಣ

ಚಾಲುಕ್ಯರ ಕಾಲದಿಂದ ಆರಂಭವಾಗಿ ನೊಳಂಬರು ಹಾಗೂ ವಿಜಯನಗರ ಕಾಲದವರೆಗೆ ಈ ಪರಂಪರೆ ಬೆಳೆದುದರ ಬಗೆಗೆ ಸ್ಪಷ್ಟವಾದ ಆಕರ ಸಾಮಗ್ರಿಗಳಾಗಿವೆ. ಇದರಿಂದ ಈಗಾಗಲೇ ಲಭ್ಯವಾದ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳ ಹಿನ್ನೆಲೆಯಲ್ಲಿ ವಿವೇಚಿಸುವುದಾದರೆ ರಾಷ್ಟ್ರಕೂಟರ ಕಾಲದಲ್ಲಿದ್ದ ಪರಂಪರೆಯು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೆಚ್ಚು ಬೆಳವಣಿಗೆಯಾಗಿ, ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ಅನೇಕ ದಾರ್ಶನಿಕರ, ವಚನಕಾರರ ಕಾವ್ಯ ಪುರಾಣಗಳಲ್ಲಿ ಉಲ್ಲೇಖವಾಗಿದ್ದಾನೆ. ಮುಂದುವರೆದು ಕಲ್ಯಾಣ ಚಾಲುಕ್ಯರ ಸಾಮಂತ ಅರಸರಾದ ನೊಳಂಬರು ಹಾಗೂ ಗುತ್ತಲದ ಗುತ್ತರಸ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದು ಆರಾಧನೆಗೆ ಒಳಗಾಗಿರುವುದನ್ನು ಕಾಣಬಹುದು. ಚಾರಿತ್ರಿಕ ಕಾಲಘಟ್ಟದಲ್ಲಿ ವಿಜಯನಗರ ಅರಸರು ಅನೇಕ ದೇವಾಲಯಗಳು, ಮೂರ್ತಿಶಿಲ್ಪಗಳು ನಾಡಿನ ತುಂಬೆಲ್ಲಾ ಕಾಣಬಹುದು. ವಿಜಯನಗರ ಹಾಗೂ ವಿಜಯನಗರೋತ್ತರ ಕಾಲಾವಧಿಯಲ್ಲಿ ಈ ಪರಂಪರೆಯು ಕರ್ನಾಟಕದ ತುಂಬಾ ಹರಡಿಕೊಂಡಿದೆ. ಇದರ ಆಧಾರವೆಂಬಂತೆ ದಕ್ಷಿಣ ಕರ್ನಾಟಕದ ಭಾಗದಲ್ಲಿ ವಿಜಯನಗರ ಹಾಗೂ ವಿಜಯನಗರೋತ್ತರವಾಗಿ ನಿರ್ಮಾಣಗೊಂಡ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳು ದೊರೆಯುತ್ತವೆ. ವಿಜಯನಗರ ಕಾಲದಲ್ಲಿ ಮೈಲಾರನಿಗೆ ಸ್ಪಷ್ಟವಾಗಿ ಲೋಹದಿಂದ ಮಾಡಿದ ಮೂರ್ತಿಶಿಲ್ಪಗಳು ದೊರೆಯುತ್ತವೆ. ರಾಷ್ಟ್ರಕೂಟರ ಕಾಲದಿಂದ ಹಿಡಿದು ವಿಜಯನಗರೋತ್ತರ ಕಾಲದವರೆಗೆ ಹಂತ ಹಂತವಾಗಿ ಬೆಳವಣಿಗೆ ಹೊಂದುತ್ತಾ ಸಾಗಿದ ಮೈಲಾರ ಪರಂಪರೆಯು ಚಾರಿತ್ರಿಕವಾಗಿ ಮಹತ್ವವಾದ ಸ್ಥಾನವನ್ನು ಪಡೆದಿದೆ. ಚಾರಿತ್ರಿಕ ಪುರುಷನಾಗಿ ಸಾಂಸ್ಕೃತಿಕ ವೀರನಾಗಿ ಮಹತ್ವ ಪಡೆದ ಮೈಲಾರ ಅನೇಕ ಕಾವ್ಯಗಳು, ಬುಡಕಟ್ಟು ಆಚರಣೆಗಳು, ಜಾನಪದ ನಂಬಿಕೆಗಳಲ್ಲಿ ಬೆರೆತುಕೊಂಡಿದ್ದಾನೆ. ಇಂದಿನ ಪ್ರಸ್ತುತ ದಿನಗಳಲ್ಲಿ ಕುರುಬ ಸಮುದಾಯದಿಂದ ಹಿಡಿದು ಬ್ರಾಹ್ಮಣ ಜಸಮುದಾಯದಲ್ಲಿ ಆರಾಧನೆಗೆ ಒಳಗಾಗಿದ್ದಾನೆ. ಈತನಿಗೆ ಸಂಬಂಧಿಸಿದಂತೆ ಭೌಗೋಳಿಕವಾಗಿ ಒಂದು ಚೌಕಟ್ಟನ್ನು ರೂಪಿಸಿಕೊಂಡು, ಮೌಖಿಕ ಪರಂಪರೆ ಹಾಗೂ ಕಾವ್ಯ ಪುರಾಣಗಳ ಮೂಲಕ ವಿವೇಚಿಸುವ ಪ್ರಯತ್ನ ಪ್ರಬಂಧದ ನಿಲುವಾಗಿದೆ.

ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ದೇವಾಲಯಗಳು, ಮೂರ್ತಿಶಿಲ್ಪಗಳು, ಶಾಸನಗಳು ಹಾಗೂ ಇನ್ನಿತರ ಪ್ರಾಚ್ಯವಶೇಷಗಳಿಂದ ಈ ಅಧ್ಯಾಯವನ್ನು ಚರ್ಚಿಸುವ, ದಾಖಲಿಸುವ ಉದ್ದೇಶವನ್ನು ಹೊಂದಲಾಗಿದೆ. ಅಲ್ಲದೆ ಜನಸಮುದಾಯದಲ್ಲಿ ಕಂಡುಬರುವ ನಂಬಿಕೆ ಆಚರಣೆಗಳು ಪ್ರಬಂಧಕ್ಕೆ ಪೂರಕವಾಗಿ ನಿಲ್ಲುತ್ತವೆ. ಅಧ್ಯಾಯದಲ್ಲಿ ಕಂಡುಕೊಂಡ ನಿರ್ಣಯಗಳೇ ಅಂತಿಮವಲ್ಲ. ಮೈಲಾರ ಪರಂಪರೆಯನ್ನು ಕುರಿತು ಕೆಲಸ ಮಾಡಿದ

ವಿದ್ವಾಂಸರ ಅಭಿಪ್ರಾಯಗಳು ಹಾಗೂ ಕ್ಷೇತ್ರಕಾರ್ಯದ ಆಧಾರದಿಂದ ತಿಳಿಯುವ ಪ್ರಯತ್ನ ಈ ಅಧ್ಯಾಯದ ಆಶಯವಾಗಿದೆ.

**೨.೧. ಭೌಗೋಳಿಕ ಹಿನ್ನೆಲೆ**

ಒಂದು ದೇಶದ ಚರಿತ್ರೆಯು ಬಹುವಾಗಿ ಅದರ ಭೂಗೋಳದಿಂದ ನಿರ್ಧಾರವಾಗುತ್ತದೆಂದು ಆಗಾಗ್ಗೆ ಹೇಳಲಾಗುತ್ತದೆ. ಆದರೆ ಈ ಭೂಗೋಳವು ತನ್ನದೆ ಆದ ಕ್ರಮದಲ್ಲಿ ಆ ಪ್ರದೇಶವು ಭೂ ಚರಿತ್ರೆಯೂ ವ್ಯಕ್ತತೆ ಎಂಬುದು ಅನೇಕ ಬಾರಿ ಅರಿವಿಗೆ ಬರುವುದಿಲ್ಲ. ಅದಕ್ಕಾಗಿ ಕರ್ನಾಟಕದ ಚರಿತ್ರೆಯು ಭೂವಿಕಾಸದಿಂದ ಪ್ರಾರಂಭವಾಗುವುದು ಸೂಕ್ತವಾಗಿದೆ.[೧]

ಕರ್ನಾಟಕವೂ ಸಂಪದ್ಭರಿತವಾದ ಪರಂಪರೆಯನ್ನು ಹೊಂದಿದ್ದು ಅದರ ಪ್ರಾಕೃತಿಕ ಸಂಪತ್ತು ಉಜ್ವಲ ಭವಿಷ್ಯವನ್ನು ರೂಪಿಸಲು ನಾಡಿನ ಜನತೆಗೆ ಸ್ಫೂರ್ತಿದಾಯಕವಾಗಿದೆ. ವಿಶೇಷವಾದ ಭೌಗೋಳಿಕ ಸನ್ನಿವೇಶ, ನೈಸರ್ಗಿಕ ಸಂಪತ್ತು, ನದಿಗಳು, ಬೆಟ್ಟಗುಡ್ಡಗಳು, ಕಣಿವೆಗಳು, ಮೈದಾನಗಳು, ಅರಣ್ಯಗಳು ಮತ್ತು ಸಂಪನ್ಮೂಲಗಳು ವೈವಿಧ್ಯತೆಯಿಂದ ಕೂಡಿವೆ. ಕರ್ನಾಟಕ ರಾಜ್ಯವೂ ಅನೇಕ ಪ್ರೇಕ್ಷಣೀಯ ಸ್ಥಳಗಳನ್ನು ಹೊಂದಿದ್ದು, ಕೈಗಾರಿಕಾ ಸಂಪನ್ಮೂಲಕ್ಕೂ ಅಷ್ಟೇ ಹೆಸರುವಾಸಿಯಾಗಿದೆ. ಸುಮಾರು ಎರಡು ಸಾವಿರ ವರ್ಷಗಳಷ್ಟು ದೀರ್ಘವಾದ ಐತಿಹಾಸಿಕ ಪರಂಪರೆಯುಳ್ಳ ಈ ನಾಡಿನಲ್ಲಿ ಪ್ರಾಮುಖ್ಯತೆಯನ್ನು ಪಡೆಯುವ ಅನೇಕ ಸುಂದರವಾದ ಕೋಟೆಗಳು, ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು, ಮಸೀದಿಗಳು ಮತ್ತು ನಗರ ಪಟ್ಟಣಗಳನ್ನು ಕಾಣಬಹುದು.[೨]

ಕನ್ನಡವನ್ನು ಮುಖ್ಯವಾಗಿ ಕನ್ನಡ ಮಾತನಾಡುವ ಜನರು ವಾಸಮಾಡುವ, ದಕ್ಷಿಣ ಭಾರತದಲ್ಲಿರುವ ಪ್ರದೇಶವೆಂದು ಸ್ಥೂಲವಾಗಿ ವರ್ಣಿಸಬಹುದು. ರಾಜ್ಯವೂ ದಕ್ಷಿಣ ಭಾರತದ ಪಶ್ಚಿಮಾರ್ಧದ ಮಧ್ಯದಲ್ಲಿ ಪ್ರಮುಖ ಭಾಗವನ್ನು ಆಕ್ರಮಿಸಿದೆ. ಅದರ ಒಟ್ಟು ವಿಸ್ತಾರ ೭೪೦೦ ಚದುರ ಮೈಲಿಗಳು. ಅದರ ಉತ್ತರ ಭಾಗದಲ್ಲಿ ಮಹಾರಾಷ್ಟ್ರ ಪ್ರಾಂತ್ಯವೂ, ಪೂರ್ವಭಾಗದಲ್ಲಿ ಆಂಧ್ರಪ್ರದೇಶವೂ, ದಕ್ಷಿಣದಲ್ಲಿ ಕೇರಳವೂ ಹರಡಿದೆ. ಉತ್ತರದಲ್ಲಿ ಕಾರವಾರದಿಂದ, ದಕ್ಷಿಣದಲ್ಲಿ ಮಂಗಳೂರಿನವರೆಗೆ, ೩೫೦ ಮೈಲಿಗಳ ಉದ್ದ ಹರಡಿರುವ ಅರಬ್ಬಿಸಮುದ್ರ ತೀರವು ಅದರ ಪಶ್ಚಿಮ ಮೇರೆಯಾಗಿದೆ. ಕರ್ನಾಟಕವೂ ಭೌಗೋಳಿಕವಾಗಿ ಸಮುದ್ರಮಟ್ಟದಿಂದ ೧೮೦೦ ರಿಂದ ೨೦೦೦ ಅಡಿಗಳು ಎತ್ತರವಾಗಿ ದಖನ್ ಪ್ರಸ್ಥಭೂಮಿಯ ಭಾಗವಾಗಿದೆ. ಇಲ್ಲಿನ ಭೂ ಚರಿತ್ರೆಯಿಂದ ನಿರ್ಧರಿತವಾಗಿರುವ ತನ್ನದೇ ಆದ ಭೌತ ಮತ್ತು ಮೇಲ್ಮೆ ಲಕ್ಷಣಗಳ ರಚನೆಗಳಿಂದ ವೈಶಿಷ್ಟ್ಯದಿಂದ ಕೂಡಿದೆ.[೩]

ಕರ್ನಾಟಕದ ಪ್ರಾಚೀನತೆ ಹಳೆಯ ಶಿಲಾಯುಗದಷ್ಟು ಹಿಂದಿನದು. ಹಾಗೆಯೇ ಪ್ರಾಚೀನ ಮತ್ತು ಮಧ್ಯಕಾಲೀನ ಪ್ರಬಲ ಸಾಮ್ರಾಜ್ಯಗಳು ಇಲ್ಲಿ ತಲೆದೂರಿವೆ. ಈ ಸಾಮ್ರಾಜ್ಯಗಳು ಘೋಷಿಸಿದ ತತ್ವಜ್ಞಾನಿಗಳು ಮತ್ತು ಸಂಗೀತ ಸಾಮ್ರಾಟರು ಹುಟ್ಟುಹಾಕಿದ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳು ಇಂದಿಗೂ ಮುಂದುವರೆದುಕೊಂಡು ಬಂದಿವೆ.[೪]

ಭಾರತ ಶ್ರೀಮಂತ ಸಾಂಸ್ಕೃತಿಕ ಪರಂಪರೆಗೆ ತನ್ನದೇ ಕಾಣಿಕೆಯನ್ನು ನೀಡಿದೆ. ಸಾಹಿತ್ಯ, ಲಲಿತಕಲೆ, ಧರ್ಮ, ಹಾಗೂ ಆಧ್ಯಾತ್ಮಿಕವಾದ ಕ್ಷೇತ್ರಗಳಲ್ಲಿ ಗಣನೀಯವಾದ ಸಾಧನೆಯನ್ನು ಮಾಡಿರುವುದು ಕಾಣಬಹುದು. ಕರ್ನಾಟಕವೂ ಗಣನೀಯವಾಗಿ ಪ್ರಾಚೀನವಾದ ಗುಹಾಂತರ ದೇವಾಲಯಗಳು, ಬೆಟ್ಟದ ಸಾಲುಗಳು, ನದಿಗಳು, ಸಮುದ್ರಗಳು, ಜಲಪಾತಗಳು ಮತ್ತು ಸಮುದ್ರ ತೀರಗಳು ಇಲ್ಲಿ ಕಂಡುಬರುತ್ತವೆ.[೫] ಕರ್ನಾಟಕ ಸಾಂಸ್ಕೃತಿಕವಾದ ಪರಂಪರೆಯನ್ನು ಸಮೃದ್ಧಗೊಳಿಸುವಲ್ಲಿ ಗಣನೀಯವಾದ ಸಾಧನೆ ಮಾಡಿದೆ. ಭೂಮಿ, ಅರಣ್ಯ, ಖನಿಜ, ಜಲ, ಮಾನವಶಕ್ತಿಯನ್ನು ಹೇರಳವಾಗಿ ಪಡೆದಿದೆ. ಇತಿಹಾಸ ಕಾಲದಿಂದಲೂ ಗಂಧದ ಮರ, ಗಂಧದ ಎಣ್ಣೆ, ತೇಗದ ಮರ, ಮಸಾಲೆ ಪದಾರ್ಥಗಳು ಮತ್ತು ಚಿನ್ನಕ್ಕೆ ಕರ್ನಾಟಕವೇ ಮಾದರಿಯಾಗಿದೆ. ಖನಿಜ ಸಂಪನ್ಮೂಲಗಳಾದ ಚಿನ್ನ, ಸುಣ್ಣದ ಕಲ್ಲು. ಬೆಣಚು ಕಲ್ಲು, ಕಲ್ನಾರು, ಮತ್ತು ವೆನಡಿಯಂಗಳನ್ನು ಉತ್ಪಾದಿಸುವಲ್ಲಿ ಮೊದಲನೆ ಸ್ಥಾನ ನಮ್ಮ ರಾಜ್ಯಕ್ಕೆ ಸಲ್ಲುತ್ತದೆ. ಇತರ ಖನಿಜಗಳಾದ ಕ್ರೋಮೈಟ್, ಟಂಗ್‌ಸ್ಟನ್ ಮತ್ತು ಗ್ರಾನೈಟ್ಸ್‌ಗಳ ತಯಾರಿಕೆಯಲ್ಲಿ ರಾಜ್ಯಕ್ಕೆ ಎರಡನೆ ಸ್ಥಾನವಿದೆ. ಕರ್ನಾಟಕದ ಎಲ್ಲಾ ಪ್ರದೇಶಗಳು ವಿದ್ಯುಚ್ಛಕ್ತಿ ಪಡೆದಿದೆ. ಹಾಗೆಯೇ ಬೆಂಗಳೂರು ನಗರವೂ ಇಡೀ ದೇಶದಲ್ಲೇ ವಿದ್ಯುತ್ ಪಡೆದ ಮೊದಲನೆಯ ನಗರವಾಗಿದೆ.[೬] ಕರ್ನಾಟಕವೂ ಸಹ್ಯಾದ್ರಿ ಘಟ್ಟದ ಅಖಂಡ ಪರ್ವತ ಶ್ರೇಣಿಗಳಿಂದ ಎತ್ತರ ಹಾಗೂ ವಿಸ್ತಾರವಾಗಿದೆ. ನೈರುತ್ಯ ಭಾಗದ ಬೆಳಗಾವಿ, ಉತ್ತರ ಕನ್ನಡ ಜಿಲ್ಲೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ಸಹ್ಯಾದ್ರಿ ಪರ್ವತ ಹಾದುಹೋಗಿದೆ. ಈ ಶ್ರೇಣಿಗಳ ಪೂರ್ವದ ಬದಿಯೂ ಹಾಗೂ ಅದಕ್ಕೆ ಅಂಟಿಕೊಂಡಿರುವ ಪ್ರದೇಶವೇ ಮಲೆನಾಡು. ಶೀತಮಯವಾದ ಈ ಪ್ರಸ್ಥಭೂಮಿಯು ಘಟ್ಟದ ಬದಿಯಿಂದ ಬಹುದೂರದವರೆಗೆ ಹಾಸಿದಂತಿದೆ. ಘಟ್ಟದ ತಗ್ಗಿನ ಪೂರ್ವಭಾಗ ಮತ್ತು ಮಲೆನಾಡು ದಟ್ಟವಾದ ನಿತ್ಯಹರಿದ್ವರ್ಣ ಅರಣ್ಯಮಯವಾಗಿದೆ. ಈ ಪ್ರದೇಶದಿಂದ ಮುಂದೆ ಪೂರ್ವ ಹಾಗೂ ಈಶಾನ್ಯ ಭಾಗಗಳಲ್ಲಿ ಅಲ್ಲಲ್ಲಿ ಪರ್ವತ ಶ್ರೇಣಿಗಳಿವೆ.

ಮಲೆನಾಡು ಪಶ್ಚಿಮದಲ್ಲಿನ ಸಹ್ಯಾದ್ರಿ ಶ್ರೇಣಿ ಹಾಗೂ ಪೂರ್ವಕ್ಕಿರುವ ತಪ್ಪಲು ಪ್ರದೇಶದ ನಡುವಿನ ಭೂಪ್ರದೇಶ ಇದು ಸಹ್ಯಾದ್ರಿಯ ಪೂರ್ವದ ಅಂಚಿನುದ್ದಕ್ಕೂ ಸುಮಾರು ೬೫೦. ಮೀಟರ್ ಮಾತ್ರ ಉತ್ತರ ದಕ್ಷಿಣವಾಗಿ ಹಬ್ಬಿದ್ದು ಬೆಳಗಾವಿ, ಧಾರವಾಡ, ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ದಕ್ಷಿಣ ಕನ್ನಡ, ಕೊಡಗು ಹಾಗೂ

ಮೈಸೂರು ಜಿಲ್ಲೆಗಳನ್ನೊಳಗೊಂಡಿದೆ. ಗುಡ್ಡ, ಕೋಟೆ, ದಟ್ಟವಾದ ಅರಣ್ಯ ಹಾಗೂ ಜಲಪಾತಗಳು ಈ ಪ್ರದೇಶದಲ್ಲಿವೆ.

ಭೌಗೋಳಿಕ ದೃಷ್ಟಿಯಿಂದ ಉತ್ತರ ಬಯಲು ಸೀಮೆಯ ಪ್ರದೇಶ ಹಳೆಯದಾಗಿದ್ದು, ವಿಶಾಲವಾಗಿ ಹರಡಿಕೊಂಡಿರುವ ತಪ್ಪಲು ಪ್ರದೇಶ, ಬೀದರ್, ಗುಲ್ಬರ್ಗ, ಬಿಜಾಪುರ ಮತ್ತು ರಾಯಚೂರು ಜಿಲ್ಲೆಗಳು ಹಾಗೂ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಯ ಕೆಲವು ಭಾಗಗಳು ಈ ಪ್ರದೇಶದಲ್ಲಿವೆ. ಎರೆಮಣ್ಣು ಈ ಪ್ರದೇಶದ ಬಹಳಷ್ಟು ಭಾಗಗಳನ್ನು ಆವರಿಸಿದೆ. ಕುರುಚಲು ಗಿಡಗಳನ್ನು ಹೊಂದಿರುವ ಬಯಲು ಪ್ರದೇಶ ಇದಾಗಿದೆ. ಕೆಂಪುಮಣ್ಣಿನ ಪ್ರದೇಶವು ಕಣಶಿಲೆ (ಗ್ರಾನೈಟ್) ಗುಡ್ಡಗಳ ಸುತ್ತಮುತ್ತ ಹರಡಿಕೊಂಡಿದೆ. ಕೃಷ್ಣನದಿಯು ಈ ಭಾಗದ ಮುಖ್ಯ ನದಿಯಾಗಿದ್ದು, ಭೀಮಾ, ತುಂಗಭದ್ರ, ಮಲಪ್ರಭ ಹಾಗೂ ಘಟಪ್ರಭ ಎಂಬ ಉಪನದಿಗಳನ್ನು ಒಳಗೊಂಡಿದೆ. ಕರ್ನಾಟಕದ ೬೦%ರಷ್ಟು ಭಾಗವನ್ನು ಹೊಂದಿದೆ.[೭]

ದಕ್ಷಿಣ ಬಯಲು ಪ್ರದೇಶವನ್ನು ಇಬ್ಭಾಗ ಮಾಡಿದ ಪ್ರದೇಶ ತುಂಗಭದ್ರ ನದಿಯ ಪ್ರದೇಶ ಹುಲ್ಲುಗಾವಲು, ಗಿಡಗಂಟೆ, ಕಾಡು-ಮೇಡುಗಳಿಂದ ಕೂಡಿದ ಈ ಪ್ರದೇಶವೂ ಉತ್ತರವಾದ ಬಯಲು ಪ್ರದೇಶವಾಗಿದೆ. ಅತಿಹೆಚ್ಚು ಸಸ್ಯ ಸಂಪನ್ಮೂಲವನ್ನು ಹೊಂದಿದ ಪ್ರದೇಶವಾಗಿದೆ. ಈ ಪ್ರದೇಶವೂ ಚಿತ್ರದುರ್ಗ, ದಾವಣಗೆರೆ, ತುಮಕೂರು, ಮಂಡ್ಯ, ಬೆಂಗಳೂರು, ಕೋಲಾರ, ಶಿವಮೊಗ್ಗ, ಚಿಕ್ಕಮಂಗಳೂರು, ಹಾಸನ, ಹಾಗೂ ಮೈಸೂರು ಭಾಗಗಳನ್ನು ಈ ಪ್ರದೇಶವು ಹೊಂದಿದೆ. ಕಾವೇರಿ ನದಿಯ ಉಪನದಿಗಳಾದ ಹೇಮಾವತಿ, ಕಬಿನಿ ಮತ್ತು ಶಿಂಷಾ ನದಿಗಳು ಈ ಪ್ರದೇಶವನ್ನೇ ಉತ್ತರದಿಂದ ದಕ್ಷಿಣದವರೆಗೂ ಆವರಿಸಿರುವ ಮಾಂಜ್ರಾ, ಕಾರಾಂಜ, ಕೃಷ್ಣ ಮಲಪ್ರಭಾ, ಘಟಪ್ರಭಾ, ತುಂಗಭದ್ರ, ಕಾವೇರಿ, ಹೇಮಾವತಿ, ಪಾಲಾರ್ ಮತ್ತು ಕಪಿಲಾನದಿ, ಪಶ್ಚಿಮ ಘಟ್ಟ ಮತ್ತು ಕಡಲ ಪ್ರದೇಶದ ಕಾಳಿ, ಗಂಗಾವತಿ, ಶರಾವತಿ, ವಾರಾಹಿ, ಸೀತಾ ಮತ್ತು ನೇತ್ರಾವತಿ ಮೊದಲಾದ ೧೨ ಮಹಾ ನದಿಗಳು ಹಾಗೂ ಅದರ ಉಪನದಿಗಳು ಪ್ರಮುಖವಾಗಿವೆ.

ಪೂರ್ವಾಭಿಮುಖವಾಗಿ ಹರಿಯುವ ಕಾವೇರಿ ನದಿ ಮುಖ್ಯವಾಗಿ ಕೊಡಗು ಜಿಲ್ಲೆಯ ಭಾಗಮಂಡಲದಲ್ಲಿ ಹುಟ್ಟುತ್ತದೆ. ಬಯಲು ಸೀಮೆಗಳಾದ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಿಗೆ ಜಲಸಮೃದ್ಧಿಯನ್ನು ಉಂಟುಮಾಡುತ್ತವೆ. ಬೆಂಗಳೂರು ಜಿಲ್ಲೆಯ ಮೂಲಕ ತಮಿಳುನಾಡಿನ ಮೂಲಕ ಹರಿಯುವ ಈ ನದಿಗೆ ಕರ್ನಾಟಕದಲ್ಲಿ ಸೇರುವ ಉಪನದಿಗಳಲ್ಲಿ ಹಾರಂಗಿ, ಯುಗಚಿ, ಹೇಮಾವತಿ, ಲಕ್ಷಣತೀರ್ಥ, ಕಪಿಲಾ, ಸುವರ್ಣಾವತಿ, ಶಿಂಷಾ, ಕಣ್ವೆ, ಅರ್ಕಾವತಿ ಮುಖ್ಯವಾದವು. ಹೀಗೆ ಕಾವೇರಿಯನ್ನು ಸೇರುವ ಉಪನದಿಗಳ ಸಂಖ್ಯೆ ೨೦ ಈ ನದಿಗಳಿಂದ ಶಿವನಸಮುದ್ರದ ಬಳಿ ಜಲಪಾತಗಳನ್ನು ಸೃಷ್ಟಿಸಿವೆ.

ಯಾವುದೇ ಒಂದು ಪ್ರದೇಶದ ಚರಿತ್ರೆ ಮತ್ತು ಸಂಸ್ಕೃತಿಯ ಬೆಳವಣಿಗೆಯಲ್ಲಿ ಭೌಗೋಳಿಕ ಪರಿಸರ ಹಾಗೂ ನೈಸರ್ಗಿಕ ಸಂಪನ್ಮೂಲ ಬಹಳ ಮುಖ್ಯವಾಗಿರುತ್ತದೆ. ಸಂಸ್ಕೃತಿಯು ಹುಟ್ಟಿ, ನೆಲೆನಿಂತು ಬೆಳವಣಿಗೆಯಾಗಲು ಭೌಗೋಳಿಕ ಹಿನ್ನೆಲೆಯು ಪ್ರಮುಖವಾದ ಪ್ರಭಾವವನ್ನು ಬೀರುತ್ತದೆ. ಕರ್ನಾಟಕವೂ ವಿಶಾಲವಾದ ಸಂಸ್ಕೃತಿಯನ್ನು ಹೊಂದಿರುವ ನಾಡು. ತನ್ನದೆ ಆದ ಇತಿಹಾಸ, ಭಾಷೆ, ಸಂಸ್ಕೃತಿ, ಸಂಗೀತ, ಸಾಹಿತ್ಯ, ಶಿಲ್ಪಕಲೆ, ನಾಣ್ಯ ಮುಂತಾದ ಸುದೀರ್ಘವಾದ ಶ್ರೀಮಂತವಾದ ಸಂಪದ್ಭರಿತವಾದ ನಾಡು. ಕರ್ನಾಟಕ ಎಂಬ ಹೆಸರಿಗೆ ಪುರಾತನವಾದ ಇತಿಹಾಸವಿದೆ. ಈ ನಾಡಿನಲ್ಲಿ ತನ್ನದೇ ಆದ ಸಂಸ್ಕೃತಿ ಸಂಪ್ರದಾಯಗಳಿವೆ. ಸಂಸ್ಕೃತಿಯ ಪ್ರತೀಕವಾಗಿರುವ ಈ ನಾಡಿನಲ್ಲಿ ಹಲವು ಮತ ಪಂಥಗಳು, ಇತಿಹಾಸ, ಭಾಷೆ, ಕಲೆ, ಆಚಾರ–ವಿಚಾರಗಳನ್ನು ಒಳಗೊಂಡಿದೆ. ಪ್ರಾಚೀನ ಕಾಲದಿಂದ ಅನೇಕ ರಾಜಮನೆತನಗಳು ಇಂತಹ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದೆ.

ಪ್ರಸ್ತುತವಾಗಿ ಕರ್ನಾಟಕದಲ್ಲಿ ಮೈಲಾರ ಪರಂಪರೆಯು ಶಿಷ್ಟ ಮತ್ತು ಪರಿಶಿಷ್ಟ ನೆಲೆಯಲ್ಲಿ ನೆಲೆಗೊಂಡಿದ್ದು, ತನ್ನದೆ ಆದ ಚಾರಿತ್ರಿಕ ಮಹತ್ವವನ್ನು ಹೊಂದಿದೆ. ಪ್ರಮುಖವಾಗಿ ಮೈಲಾರನ ನೆಲೆಗಳು ಕರ್ನಾಟಕದ ತುಂಬೆಲ್ಲಾ ಹರಡಿಕೊಂಡಿದೆ. ಕೊಪ್ಪಳ, ಚಿತ್ರದುರ್ಗ, ಧಾರವಾಡ, ಹಾವೇರಿ, ಬಳ್ಳಾರಿ, ಬಾಗಲಕೋಟೆ ವಿಜಯಪುರ, ಬೀದರ್, ಬೆಳಗಾವಿ, ಮಂಡ್ಯ, ಯಾದಗಿರಿ, ಶಿವಮೊಗ್ಗ, ಮೈಸೂರು, ಹೀಗೆ ೧೫ ಜಿಲ್ಲೆಗಳಲ್ಲಿ ಸುಮಾರು ೨೫ಕ್ಕೂ ಹೆಚ್ಚು ಮೈಲಾರ ಪ್ರಸಿದ್ಧವಾದ ಆರಾಧನಾ ನೆಲೆಗಳು ಕಂಡುಬರುತ್ತವೆ.

ಈ ಎಲ್ಲಾ ಮೈಲಾರನ ನೆಲೆಗಳು ಕರ್ನಾಟಕದ ಪ್ರಮುಖವಾದ ಜಿಲ್ಲೆಗಳಲ್ಲಿ ಬೆಟ್ಟ–ಗುಡ್ಡ ಹಳ್ಳ–ಕೊಳ್ಳ ದುರ್ಗಮಯವಾದ ಪರಿಸರದಲ್ಲಿ ಕಂಡುಬರುತ್ತವೆ. ಪ್ರಾಕೃತಿಕವಾಗಿ ಸ್ಥಳೀಯವಾಗಿ ಹರಿಯುತ್ತಿರುವ ನದಿಗಳು ಹಳ್ಳ–ಕೊಳ್ಳಗಳ ದಡದಲ್ಲಿ ಕೆಲವು ದೇವಾಲಯಗಳಿವೆ. ಹೆಚ್ಚಾಗಿ ಮೈಲಾರ ದೇವಾಲಯಗಳು ಎತ್ತರವಾದ ಬೆಟ್ಟದಲ್ಲಿ ನೆಲೆಗೊಂಡಿರುವುದನ್ನು ಕಾಣಬಹುದು. ಈ ಎಲ್ಲಾ ನೆಲೆಗಳು ಭಕ್ತ ಸಮುದಾಯಕ್ಕೆ ಉತ್ತಮವಾದ ಪೂಜ್ಯತಾ ಭಾವನೆಯನ್ನು ಸೃಷ್ಟಿಸಿದ್ದು ತನ್ನದೇ ಆದ ಭೌಗೋಳಿಕ ಪರಿಸರವನ್ನು ಒಳಗೊಂಡಿದೆ.

ಕರ್ನಾಟಕದಲ್ಲಿ ನೆಲೆಗೊಂಡಿರುವ ಮೈಲಾರ ನೆಲೆಗಳು ಪ್ರಾಗೈತಿಹಾಸಿಕ ಕಾಲದಿಂದಲೂ ಮಹತ್ವವನ್ನು ಪಡೆದುಕೊಂಡಿವೆ. ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಹನುಮಸಾಗರ[೮], ಬಾಗಲಕೋಟೆ ಜಿಲ್ಲೆಯ ಹುನುಗುಂದ ತಾಲ್ಲೂಕಿನ ಗುಡೂರು.[೯] ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲ್ಲೂಕಿನ ತೆಕ್ಕಲಕೋಟೆ,[೧೦] ಹೂವಿನ ಹಡಗಲಿಯ ಮೈಲಾರ[೧೧] ಈ ಸ್ಥಳಗಳು ಆದಿ ಹಳೆ ಶಿಲಾಯುಗದಿಂದ ಬೃಹತ್ ಶಿಲಾಯುಗದವರೆಗೆ ಪ್ರಮುಖವಾದ ನೆಲೆಗಳಾಗಿವೆ. ಕರ್ನಾಟಕದ ತುಂಬಾ ಕಂಡುಬರುವ ಮೈಲಾರನ ನೆಲೆಗಳ ಪರಿಸರದಲ್ಲಿ ಆದಿಶಿಲಾಯುಗ, ಮಧ್ಯಶಿಲಾಯುಗ,

ಸೂಕ್ಷ್ಮಶಿಲಾಯುಗ, ನೂತನ ಶಿಲಾಯುಗ, ಬೃಹತ್ ಶಿಲಾಯುಗ, ತಾಮ್ರ ಶಿಲಾಯುಗ, ಹಾಗೂ ಇತಿಹಾಸ ಆರಂಭ ಕಾಲದವರೆಗಿನ ಅನೇಕ ಅವಶೇಷಗಳು ದೊರೆತಿವೆ.

ಪ್ರಸ್ತುತ ಮೈಲಾರ ನೆಲೆಗಳು ಕರ್ನಾಟಕದಲ್ಲಿ ಗ್ರಾಮ ಪರಿಸರದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಪ್ರಾಗೈತಿಹಾಸ ಕಾಲದಿಂದ ಇತಿಹಾಸಕಾಲದವರೆಗೆ ಈ ಸ್ಥಳಗಳ ಅನೇಕ ರೂಪಾಂತರಗಳನ್ನು ಪಡೆದುಕೊಂಡು ಬಂದಿದೆ. ಅನೇಕ ರಾಜಮನೆತನಗಳ ಆಳ್ವಿಕೆಯಲ್ಲಿ ಮೈಲಾರನ ನೆಲೆಗಳು ಒಳಪಟ್ಟಿರುವುದನ್ನು ಕಾಣಬಹುದು. ಪ್ರಮುಖವಾಗಿ ಕಲ್ಯಾಣ ಚಾಲುಕ್ಯರ ಕಾಲವಧಿಯಲ್ಲಿ ಹೆಚ್ಚಾಗಿ ಮೈಲಾರನ ದೇವಾಲಯಗಳಿಗೆ ದತ್ತಿ ಬಿಟ್ಟ ಉಲ್ಲೇಖಗಳು ದೊರೆಯುತ್ತವೆ. ವಿಜಯನಗರ ಕಾಲದವರೆಗೆ ಶಾಸನಗಳ ಹಾಗೂ ದೇವಾಲಯಗಳ ನಿರ್ಮಾಣವಾದುದರ ಬಗ್ಗೆ ಅನೇಕ ಪುರಾವೆಗಳು ದೊರೆಯುತ್ತವೆ.

ಕರ್ನಾಟಕದಲ್ಲಿ ಮೈಲಾರನ ನೆಲೆಗಳು ಹೆಚ್ಚಾಗಿ ಬೆಟ್ಟ ಪರಿಸರದಲ್ಲಿ ಹಲವಾರು ಬಗೆಯ ಸಸ್ಯಗಳು, ನೈಸರ್ಗಿಕ ನೀರಿನ ತಾಣಗಳಲ್ಲಿ ಕಂಡುಬರುತ್ತವೆ. ಇಂತಹ ನೆಲೆಗಳು ಪ್ರಾಚೀನ ಜನವಸತಿಗಳನ್ನು ಸೂಚಿಸುತ್ತವೆ. ಈ ರೀತಿಯಾದ ಮೈಲಾರನ ನೆಲೆಗಳು ತನ್ನದೇ ಆದ ಭೌಗೋಳಿಕ ಪರಿಸರದಲ್ಲಿ ವ್ಯಾಪಿಸಿವೆ. ಎತ್ತರವಾದ ಬೆಟ್ಟದ ಪರಿಸರದಲ್ಲಿ ತೆಕ್ಕಲಕೋಟೆ, ಕಾರೀಮನಿ, ಮುಡುಕುತೊರೆ, ದೇವರಗುಡ್ಡ, ಯಾದಗಿರಿ, ಧಾರವಾಡ, ಹೊಸದುರ್ಗ, ಹಾಗೂ ಹೂವಿನ ಹಡಗಲಿಯ ಮೈಲಾರ, ಕಂಪ್ಲಿ, ದೇವರಬೆಳಕೆರೆ, ಮಂಗಸೂಳಿ, ಭಾಲ್ಕಿಯ ಮೈಲಾರಪುರ, ದೇವರಹಿಪ್ಪರಗಿ, ದೇವಿಹೊಸೂರು, ಕುಬಟೂರು, ಮೈಲಾರಪಟ್ಟಣ, ಗುಡೂರು, ಶಿವಮೊಗ್ಗ ಚಿಕ್ಕನಾಯಕನಹಳ್ಳಿ, ಸ್ಥಳಗಳು ಜನವಸತಿ ಇರುವ ಗ್ರಾಮಗಳಲ್ಲಿ ನೆಲೆಗೊಂಡಿವೆ.

ಭೌಗೋಳಿಕವಾಗಿ ಮೈಲಾರನ ನೆಲೆಗಳು ಕರ್ನಾಟಕವಲ್ಲದೆ, ಆಂಧ್ರ ಪ್ರದೇಶ, ತೆಲಂಗಾಣ, ತಮಿಳುನಾಡು, ಹಾಗೂ ಮಹಾರಾಷ್ಟ್ರದವರೆಗೆ ಹರಡಿಕೊಂಡಿದೆ. ಭೌಗೋಳಿಕವಾಗಿ ಹಾಗೂ ಅಧ್ಯಯನದ ದೃಷ್ಟಿಯಿಂದ ಮೈಲಾರನ ನೆಲೆಗಳನ್ನು ಪ್ರಾಗೈತಿಹಾಸ ಕಾಲದಿಂದ ಇತಿಹಾಸದ ಕಾಲದವರೆಗೆ ಹಲವು ನೆಲೆಗಳು ಮಹತ್ವವನ್ನು ಪಡೆದುಕೊಂಡಿವೆ. ಮೈಲಾರನ ನೆಲೆಗಳು ಇಂದಿಗೂ ಅನೇಕ ಬದಲಾವಣೆಗಳೊಂದಿಗೆ ಆರಾಧನೆಯನ್ನು ಸಂಪ್ರದಾಯಗಳನ್ನು ಅಲ್ಲಿನ ಸ್ಥಳಿಯ ಜನ ಸಮುದಾಯದವರು ಮುಂದುವರೆಸಿಕೊಂಡು ಬಂದಿದ್ದಾರೆ.

### ೨.೨. ಮೌಖಿಕ ಆಕರಗಳು ಮತ್ತು ಕಾವ್ಯ, ಪುರಾಣಗಳ ಹಿನ್ನೆಲೆ

ಲಿಖಿತ ಆಕರಗಳನ್ನು ಆಧಾರವಾಗಿಟ್ಟುಕೊಂಡು ಇಲ್ಲಿಯವರೆಗೂ ಚರಿತ್ರೆ ಬರೆದದ್ದುಂಟು. ಆದರೆ ಜನ ಸಮುದಾಯದ ದಿನನಿತ್ಯದ ಜೀವನದಲ್ಲಿ ಮೌಖಿಕ ಆಕರಗಳಿವೆ. ಎಂದಿಗೂ ನಶಿಸಲಾರದಂತಹ ಮೌಖಿಕ ಆಕರಗಳ ಸಂಪತ್ತು ಹಳ್ಳಿಗಾಡಿನ ವಯೋವೃದ್ಧರಲ್ಲಿ

ಹೇರಳವಾಗಿದೆ. ಅಂತಹ ಆಕರಗಳ ಸಂಗ್ರಹಿಸಿ ದಾಖಲಿಸುವುದರಿಂದ ಅಲಕ್ಷಿತ ಸ್ಥಳೀಯ ಚರಿತ್ರೆಯನ್ನು ವ್ಯವಸ್ಥಿತವಾಗಿ ಕಟ್ಟಬಹುದಾಗಿದೆ. ಕಾವ್ಯ, ಪುರಾಣ, ವಚನ, ಜನಪದ, ಸಾಹಿತ್ಯ, ಲಾವಣಿ, ಕೀರ್ತನೆ, ಸುಳಾದಿ ಇತ್ಯಾದಿಗಳು ಮೌಖಿಕ ಆಕರಗಳಾಗಿವೆ. ಮೌಖಿಕ ಆಕರ ಮತ್ತು ಲಿಖಿತ ಆಕರ ಎರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇಲ್ಲಿಯವರೆಗೆ ಲಿಖಿತ ಆಕರಗಳ ಒಂದು ಮುಖ ಗೋಚರಿಸಿದೆ. ಆದರೆ ಮೌಖಿಕ ಆಕರಗಳ ಇನ್ನೊಂದು ಮುಖವು ಸೀಮಿತ ಪ್ರದೇಶ ಮತ್ತು ಸ್ಥಳಕ್ಕೆ ಮಾತ್ರ ವ್ಯಾಪ್ತಿಯನ್ನು ಹೊಂದಿ ಗೋಚರಿಸಿದೆ. ಆದರೆ ಇಂದಿನ ದಿನಗಳಲ್ಲಿ ಮೌಖಿಕ ಆಕರಗಳ ಸಹಾಯದಿಂದ ಸೂಕ್ಷ್ಮ ಮತ್ತು ವಿಶಾಲವಾದ ವ್ಯಾಪ್ತಿಯಲ್ಲಿ ಅಧ್ಯಯನಗಳು, ಚರ್ಚೆಗಳು ನಡೆಯುತ್ತಿರುವುದು ಪ್ರಶಂಸನೀಯವಾಗಿದೆ. ಅದರಂತೆ ಮೌಖಿಕ ಆಕರಗಳ ಸಹಾಯದಿಂದ ಇನ್ನು ಹೆಚ್ಚಿನ ವಿಸ್ತೃತ ಅಧ್ಯಯನ, ಸಂಶೋಧನೆಗಳು ನಡೆಯಬೇಕಾದ ಅನಿವಾರ್ಯತೆವಿದೆ.

ಒಂದು ಪ್ರದೇಶದ ಸಮಗ್ರ ಅಧ್ಯಯನ ಕೈಗೊಳ್ಳುವುದರ ಮೂಲಕ ಆ ಪ್ರದೇಶದ ಸತ್ಯನಿಷ್ಠ ಹಾಗೂ ಪೂರ್ವರೂಪದ ಚರಿತ್ರೆಯನ್ನು ಕಟ್ಟಲು ಸಾಧ್ಯವಿದೆ. ಆದರೆ ಇಲ್ಲಿಯವರೆಗೆ ಇತಿಹಾಸ ರಚನಾಕಾರರು ಲಿಖಿತ ಪರಂಪರೆಯನ್ನು ಅವಲಂಬಿಸಿ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಇದರಿಂದಾಗಿ 'ಬಹುಸಂಖ್ಯಾತ ಜನಸಮುದಾಯಗಳ ಭಾವನೆಗಳನ್ನು ಸಂಪೂರ್ಣವಾಗಿ ಕಡೆಗಣಿಸಿ ಅನ್ಯಾಯ ಮಾಡಲಾಗಿದೆ. ಆ ಕೊರತೆಯನ್ನು ತುಂಬಲು ಇಂದು ಮೌಖಿಕ ಪರಂಪರೆಯನ್ನು ಬಳಸಿಕೊಳ್ಳಲಾಗುತ್ತಿದೆ. ಎಂಬುದು ಸಂತಸದ ಸಂಗತಿ. ಮೌಖಿಕ ಪರಂಪರೆಯ ಸಾಮಗ್ರಿಗಳಲ್ಲಿ ಕಾಲ್ಪನಿಕತೆ ಸೇರಿಕೊಂಡಿರಬಹುದು. ಹೆಸರುಗಳು ವ್ಯತ್ಯಾಸಗೊಂಡಿರಬಹುದು. ಆದರೆ ಬಹುಜನರ ನೋವು-ನಲಿವುಗಳು, ಆಸೆ-ಆಕಾಂಕ್ಷೆಗಳು ಬೇರೆ ಬೇರೆ ರೂಪಗಳಲ್ಲಿ ದಾಖಲಾಗಿ ಪಸರಿಸುತ್ತಾ ಇಂತಹ ಕಂಠಸ್ಥ ಪರಂಪರೆಯಾಗಿದೆ. ಎನ್ನುವುದನ್ನು ಮರೆಯಲಾಗದು.[೨] ಈ ಮಹತ್ವದ ಸಂಗತಿಯನ್ನು ಗಮನಿಸಿದಾಗ ಮೌಖಿಕ ಆಕರವು ಕಾಲಮಾನಕ್ಕೆ ತಕ್ಕಂತೆ ಬದಲಾಗಿರಬಹುದು. ಆದರೆ ನಿಜ ಅಥವಾ ಸತ್ಯ ಸಂಗತಿಗಳನ್ನು ಸತತವಾಗಿ ಬಿಂಬಿಸುತ್ತದೆ. ಎಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಜನಪದರಲ್ಲಿ ಪುರಾಣ, ಕಥೆ, ಕಾವ್ಯ, ಐತಿಹ್ಯಗಳುಂಟು ಅವುಗಳನ್ನು ಅವರು ಇತಿಹಾಸವೆಂದು ತಿಳಿದುಕೊಂಡಿದ್ದಾರೆ, ಮತ್ತು ಅದನ್ನೇ ಅವರು ನಿರೂಪಿಸುತ್ತಾರೆ. ಇತಿಹಾಸ ಸಂಶೋಧಕರಂತೆ ಜಾನಪದ ನಿರೂಪಕರಿಗೆ ದಾಖಲೆಗಳು ಬೇಕಾಗಿಲ್ಲ. ಅದರ ಅವಶ್ಯಕತೆಯು ಅವರಿಗಿಲ್ಲ. ಅವರು ನಿರೂಪಿಸುವುದನ್ನೇ ಸತ್ಯವೆಂದು ನಂಬಿ ಅದನ್ನೇ ಪ್ರತಿಪಾದಿಸುತ್ತಾರೆ. ಪ್ರತಿಯೊಂದು ಪ್ರದೇಶದ ಮೌಖಿಕ ಪರಂಪರೆಯಲ್ಲಿರುವ ಪುರಾಣ, ಕಥೆ, ಕಾವ್ಯದ ಅಧ್ಯಯನಕ್ಕೆ ತೊಡಗಿದಾಗ ಆ ಪ್ರದೇಶದ ಚರಿತ್ರೆಯ ಇನ್ನೊಂದು ಮುಖದ ಪರಿಚಯವಾಗುತ್ತದೆ.[೩] ಅಲ್ಲದೇ ಇತಿಹಾಸ ರಚನಾಕಾರನಿಗೆ ಲಿಖಿತ ಪರಂಪರೆ ತೋರದ

ಅದೆಷ್ಟೋ ಸಂಗತಿಗಳನ್ನು ಮೌಖಿಕ ಸಾಹಿತ್ಯ ತೋರಿಸುತ್ತದೆ. ಇತಿಹಾಸದ ಸ್ಪಷ್ಟತೆಗೆ ಹಾಗೂ ಸಹ ಸಂಪರ್ಕಕ್ಕೆ ಮೌಖಿಕ ಆಕರಗಳು ಮಹತ್ವದ್ದಾಗಿವೆ.

ಪುರಾಣ, ಕಥೆಗಳಿಗೂ ಧರ್ಮಕ್ಕೂ ಇರುವ ಸಂಬಂಧ ಬಿಡಿಸಲಾಗದ ನಂಟು. ಚರಿತ್ರೆಗೂ ಸಮಾಜಕ್ಕೂ ಇರುವ ಅವಿನಾಭಾವ ಸಂಬಂಧ ಧರ್ಮ ಮತ್ತು ಸಮಾಜಗಳು ಅನುಸರಿಸುವ ಧಾರ್ಮಿಕ ಆಚರಣೆ. ದೇವತಾರಾಧನೆಗಳ ಪ್ರಬಲ ಪರಂಪರೆಗಳಲ್ಲಿ ಅನಾದಿ ಕಾಲದಿಂದ ಅತ್ಯಂತ ಪ್ರಭಾವಶಾಲಿ ಜನಪದ ವೃಂದವೊಂದರ ಮುಖ್ಯಸ್ಥನಾಗಿ, ತನ್ನ ವೃಂದವನ್ನು ಎರಗಿ ಬಂದ ಕ್ರೌರ್ಯಗಳಿಂದ ಕಾಪಾಡಿ ಅವರೆಲ್ಲರಿಗೆ ಶಕ್ತಿಶಾಲಿ, ಪೂಜ್ಯ ವ್ಯಕ್ತಿಯಾಗಿದ್ದರಿಂದ ಮೈಲಾರ ಕಾಲಾನುಕ್ರಮದಲ್ಲಿ ನಾಗರಿಕತೆ ಬೆಳೆದಂತೆ, ಶಿಷ್ಟಪದ ಸಾಮಾಜಿಕ ಘಟಕಗಳ ವ್ಯವಸ್ಥೆಗೆ ಸಿಕ್ಕು ಅವರವರ ಕಲ್ಪನೆಯಲ್ಲಿ ಹಿಗ್ಗಾಮುಗ್ಗಾ ಎಳೆಯಲ್ಪಟ್ಟರೂ ಅದನ್ನು ಮೀರಿ ಭಿನ್ನ ಭಿನ್ನ ಜನಪದ ವೃಂದಗಳ ಆರಾಧನೆಯ ವಸ್ತುವಾಗಿ ಪುರಾಣೀಕರಣದ ವೈಭವಕ್ಕೆ ಕೆಲವೊಮ್ಮೆ ಚಾರಿತ್ರಿಕ ಆಂದೋಲನಗಳ ಖಂಡನೆಗೆ ಮತ್ತೊಮ್ಮೆ ಪಕ್ಕಾಗಿ ದೇವತೆಯಾಗಿ ಪೂಜೆಗೊಳ್ಳುತ್ತ ಬಂದಿದ್ದಾನೆ.[೧೪] ಹಾಗಾಗಿ ಪುರಾಣಗಳ ಮೂಲಕ ಜನಸಮುದಾಯದಲ್ಲಿ ಅಚ್ಚಳಿಯದೇ ಮೈಲಾರ ಉಳಿಯಲು ಸಾಧ್ಯವಾಗಿದೆ.

ಶಿಲಾಯುಗದ ಪೂರ್ವದಿಂದ ಶಿಲಾಯುಗ, ನವಶಿಲಾಯುಗ ಇತ್ಯಾದಿ ಮೊದಲುಗೊಂಡು ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದು ಅನೇಕ ಆದಿಮ ಗುಂಪುಗಳಲ್ಲಿ ಜನಪದ ವೃಂದಗಳಲ್ಲಿ ಅಲೆಮಾರಿಗಳಾಗಿದ್ದ ಬೇಡರು, ಅರೆ ಅಲೆಮಾರಿಗಳಾಗಿದ್ದ ಕುರುಬರ ಕುಲಗುಂಪು, ಗೊಲ್ಲ ವೃಂದಗಳ ಉಲ್ಲೇಖ ಬರುವ ಮೈಲಾರನ ಕಥೆ ಪುರಾಣಗಳ ಜಾನಪದೀಯ ವಿಶ್ಲೇಷಣೆಗೆ ಒತ್ತುಕೊಡುವ ಸಂಕೀರ್ಣ ವಸ್ತುವಾಗಿದೆ.[೧೫] ಅದರಂತೆ ಅಷ್ಟೇ ಸೂಕ್ಷ್ಮವಾಗಿಯೂ ಮೈಲಾರ ಪರಂಪರೆಯು ಮುಂದುವರೆಯುತ್ತಾ ಇಂದಿಗೂ ಆಚರಣೆಯಲ್ಲಿರುವುದು.

**ಕಾವ್ಯಗಳಲ್ಲಿ ಮೈಲಾರ**

ಮೈಲಾರನ ಉಲ್ಲೇಖವು ಕನ್ನಡದ ಕಾವ್ಯಗಳಲ್ಲಿಯೂ ಬಂದಿರುವುದು ವಿಶೇಷವಾಗಿದೆ. ಮೌಖಿಕ ಪರಂಪರೆಯ ಭಾಗವಾದ ಕಾವ್ಯಗಳಲ್ಲಿ ಮೈಲಾರನ ಉಲ್ಲೇಖದಿಂದ ಪ್ರಾಚೀನತೆ, ನಂಬಿಕೆ, ಆಚರಣೆ ಮತ್ತು ಮೈಲಾರನ ಕ್ಷೇತ್ರಗಳನ್ನು ಗುರುತಿಸಲು ಸಹಾಯಕಾರಿಯಾಗುತ್ತದೆ.

ಕನ್ನಡ ಜನಪದ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಗೀತಸಾಹಿತ್ಯವೂ ಒಂದು. ಗೀತ ಸಾಹಿತ್ಯದಲ್ಲಿ(ಭಜನೆ, ಲಾವಣಿ, ಹಂತಿ, ಗೀಗೀಪದ ಮುಂತಾದವು) ಮತ್ತು ದೀರ್ಘಕಥನ, ಕಾವ್ಯಗಳು ಎಂದು ಎರಡು ವಿಧ. ಪೌರಾಣಿಕವಾಗಿ ಅಥವಾ ಐತಿಹಾಸಿಕವಾಗಿ ಮಹತ್ವ ಪಡೆದ ಸಾಂಸ್ಕೃತಿಕ ವೀರರನ್ನು ಕುರಿತು ರಚಿತವಾದ ಕಾವ್ಯಗಳು ಕಥನ ಕಾವ್ಯವೆನಿಸಿಕೊಳ್ಳುತ್ತವೆ.

ಮಂಟೇಸ್ವಾಮಿ, ಜುಂಜಪ್ಪ, ಮಾಳಿಂಗರಾಯ, ಮಲೆಮಾದೇಶ್ವರ ಇಂತಹ ಕಾವ್ಯಗಳಂತೆ ಮೈಲಾರಲಿಂಗನ ಕಾವ್ಯವೂ ಕಥನ ಮಹಾಕಾವ್ಯ ಪರಂಪರೆಗೆ ಸೇರುತ್ತದೆ.[೧೬] ಮೈಲಾರ ಕನ್ನಡ ನಾಡಿನ ದೇವತೆ, ಅವನ ಉಗಮ ಕನ್ನಡನಾಡು, ಇಲ್ಲಿಂದ ಮಹಾರಾಷ್ಟ್ರಕ್ಕೆ 'ಖಂಡೋಬಾ' ಎಂಬ ಹೆಸರಿನಿಂದ ಜನಪ್ರಿಯ ದೇವತೆಯಾಗಿ ಪರಿಣಮಿಸಿದೆ. ನೆರೆಯ ಆಂಧ್ರಪ್ರದೇಶದಲ್ಲಿಯೂ ಮೈಲಾರನ ಪರಂಪರೆಯಿದೆ. ಈ ದೇವತೆಯಾಗಿ ಪೂಜಾರಿಗಳಿಗೆ ಗೊಗ್ಗಯ್ಯ, ಗೊಗ್ಗಪ್ಪ, ವಗ್ಗಯ್ಯ ಎಂದು ಕರೆಯುವುದುಂಟು. ಮೈಲಾರನ ಸುತ್ತ ಕಾವ್ಯಗಳು ರಚನೆಯಾಗಿವೆ. ಪ್ರದೇಶದಿಂದ ಪ್ರದೇಶಕ್ಕೆ ಹಾಡುಗಳ ರಚನೆಯಲ್ಲಿ ಪ್ರಭೇದಗಳಿರುತ್ತವೆ. ಅದು ಸಹಜ.[೧೭] ಮೈಲಾರಲಿಂಗನನ್ನು ಕುರಿತು ರಚನೆಯಾದ ಮೌಖಿಕ ಆಕರವಾದ ಕಾವ್ಯಗಳಲ್ಲಿ ಉಲ್ಲೇಖಿಸಿರುವ ಅಂಶಗಳನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

* ನಯಸೇನನ ಧರ್ಮಾಮೃತದ ೨ನೇ ಸಂಧಿ ೨೦೬ನೇ ವಚನದಲ್ಲಿ

'ಮೈಲಾರನ ಗೊರವನಂತೆ ತಂತಮ್ಮನೆ
ಬಡಿದುಕೊಳ್ವ ಅಚ್ಚುಉಳಾಯಿಲರುವುಂ॥

ಎಂಬ ಉಲ್ಲೇಖವಿದೆ. ಕ್ರಿ. ಶ. ೧೧೧೨ರ ಈ ಉಲ್ಲೇಖವೇ ಅತ್ಯಂತ ಪ್ರಾಚೀನವಾದುದೆಂದು ವಿದ್ವಾಂಸರಾದ ಚಿದಾನಂದಮೂರ್ತಿ ಎಂ. ಅವರು ಅಭಿಪ್ರಾಯ ಪಡುತ್ತಾರೆ. ಮುಂದುವರೆದು ಮೈಲಾರನ ಭಕ್ತರಾದ ಗ್ವಾರಪ್ಪ, ಗ್ವಾರಯ್ಯ ಇಲ್ಲವೆ ಗೊರವನಂತೆ ಆವೇಶದಿಂದ ತಮ್ಮ ಮೈಯನ್ನು ತಾವು ಬಡಿದುಕೊಳ್ಳುತ್ತಿದ್ದು ಆಚರಣೆ ಅಂದಿನಿಂದ ಇಂದಿನವರೆಗೂ ಮುಂದುವರೆದಿದೆ.

* ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಮೈಲಾರನನ್ನು ಕುರಿತು ಹಲವಾರು ಅಮೂಲ್ಯ ಉಕ್ತಿಗಳಿವೆ.[೧೮] ಬ್ರಹ್ಮಶಿವನ ಸಮಯ ಒಂದು ಸಂಕ್ರಮಣದ ಕಾಲಾವಸ್ಥೆಯಲ್ಲಿ ರಚಿತವಾದ ಕೃತಿ. ಜೈನಧರ್ಮದ ಅವಸಾನ ಹೊಂದುವ ಕಾಲಘಟ್ಟದಲ್ಲಿ ಅದರ ಪುರೋಭಿವೃದ್ಧಿಗೆ ಶ್ರಮಿಸಿದ ಬ್ರಹ್ಮಶಿವ 'ಜೈನ ಧರ್ಮದ ಕೈಪಿಡಿಯಂತೆ' ತನ್ನ ಕೃತಿಯನ್ನು ರಚಿಸುತ್ತಾನೆ. ಬಹುತೇಕ ಶೈವ, ವೀರಶೈವ ಇಲ್ಲವೇ ಹಿಂದೂ ಅಥವಾ ಬ್ರಾಹ್ಮಣ ಆಚರಣೆಗಳನ್ನು ಖಂಡಿಸುವ ಈತ ಜೈನ ಧರ್ಮವೊಂದೇ ಶ್ರೇಷ್ಠವಾದುದೆಂದು ಪ್ರತಿಪಾದಿಸುತ್ತಾನೆ. ಬಲಿದಾನ, ಸಮಾಧಿ, ವೀರಮರಣಗಳಂಥ ಸಾವಿನ ಸಂದರ್ಭಗಳಲ್ಲಿ ಇತರರಿಗಿಂತ ಜೈನರ ಸಲ್ಲೇಖನ ವ್ರತ ಶ್ರೇಷ್ಠ ಎಂತಲೂ ಆಚರಣೆ-ನಂಬಿಕೆ-ಸಂಪ್ರದಾಯಗಳಲ್ಲಿ ಇತರರಿಗಿಂತ ಜೈನ ಸಂಬಂಧಿ ಆಚರಣೆಗಳೇ ಶ್ರೇಷ್ಠವೆಂದು ಪ್ರತಿಪಾದಿಸುವ ಸಂದರ್ಭದಲ್ಲಿ ಇತರ ದೈವಗಳಂತೆ ಮೈಲಾರಲಿಂಗನನ್ನು ಟೀಕಿಸಿ ಬರೆಯುತ್ತಾನೆ.[೧೯]

ಅಡಿಗಡಿರಗಿದೊಳ್ಳಿತ್ತಂ
ನುಡಿಯೆನುತೆ ಪವಿತ್ರಮಪ್ಪ ಸರುಗೆತ್ತುವರೆಂ
ದೊಡೆ ಮೈಲಾರಂ ಕೊತಿಗಳ
ನೊಡಂಬಡಂ ನಾಡಪಾಪ ಕರ್ಮವದೆ ಕೊಲ್ವರ್

ಮೈಲಾರನು ಕೊತಿಗಳನ್ನು ಅಪೇಕ್ಷಿಸುವ ದೈವವಲ್ಲ. ಮನುಷ್ಯರೇ ಕೊಲೆಮಾಡ ತಕ್ಕವರು ಎನ್ನುವ ಬ್ರಹ್ಮಶಿವ.

ಪೆಂಡತಿ ಮಾಹೇಶ್ವರಿ ಗಡ
ಗಂಡಗಡ ಜೈನನವನ ಮಕ್ಕಳ್ ಗಡ
ಮಾರ್ತಾಂಡಗೆ ಭಕ್ತರೆನಿಪಾ
ಭಂಡಂಗೆ ಉತ್ತಮದ ಜೈನವಸೆರಂತ್ಸಗುಂ

ಹೆಂಡತಿ ಮಾಹೇಶ್ವರಿ, ಗಂಡ ಜೈನ, ಅವನ ಮಕ್ಕಳು ಮೈಲಾರಲಿಂಗನಿಗೆ ಭಕ್ತರು. ಹೀಗಾಗಿ ಆ ಭಂಡ ಭಕ್ತರಿಗೆ ಉತ್ತಮ ಜೈನ ಹೆಸರನ್ನೇಕಿಡಬೇಕು? ಎಂದು ಪ್ರಶ್ನಿಸುತ್ತಾನೆ. ಒಂದೇ ಕುಟುಂಬದಲ್ಲಿ ಬೇರೆ ಬೇರೆ ದೈವಗಳಿಗೆ ಒಕ್ಕಲಾಗುವ ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಜೈನರು ಮೈಲಾರನಿಗೆ ಭಕ್ತರಾಗಿದ್ದರೆಂಬ ಕುತೂಹಲದ ಕಡೆಗೆ ಬ್ರಹ್ಮಶಿವ ನಮ್ಮ ಗಮನ ಸೆಳೆಯುತ್ತಾನೆ.

ಮನೆವೆರ್ಗಡೆ ಚಟ್ಟಪನಿಂದ
ನಿನ್ನೆ ತಾನಾದ ಮೈಲನುಂ ಮಾಳಚಿಯುಂ॥
ಜನಕಾಪ್ತರಾದರೆನೆ ಮು
ನ್ನಿನ ಹರಿಹರರಾಪ್ತರಾಗದೇಕೆಯೋ ಮಾಣ್ಯದ (ಸಂಧಿ ೮.ಪದ್ಯ ೨೩೦)

ಇತ್ತೀಚೆಗೆ ಚಟ್ಟಪ್ಪನಿಂದ ನಿನ್ನೆ ತಾನಾದ ಮೈಲಾರ-ಮಾಳಚಿಯರು ಹರಿಹರನಂತೆ ಪ್ರಾಚೀನ ದೇವತೆಗಳಲ್ಲ. ಆದರೂ ಹೆಚ್ಚು ಜನಪ್ರಿಯತೆಯನ್ನು ಹೊಂದಿರುವ ದೈವವಾಗಿ ಕಾಣಿಸಿಕೊಳ್ಳುತ್ತಾರೆ.[೨೦]

ಮನೆವೆರ್ಗಡೆ ಚಟ್ಟಪ್ಪ ಎಂಬುವನನ್ನು ಐತಿಹಾಸಿಕ ವ್ಯಕ್ತಿ. ಈತನಿಂದ ಎಲ್ಲಿಯೋ ದೂರದಲ್ಲಿ ಪೂಜೆಗೊಳ್ಳಿದ್ದ ಮೈಲಾರ-ಮಾಳಚಿಯರನ್ನು ತಂದು ಪ್ರತಿಷ್ಠಾಪಿಸಿ ತನ್ನ ಪ್ರದೇಶದಲ್ಲಿ ಜನಪ್ರಿಯಗೊಳಿಸಿರಬಹುದು. ಅಥವಾ ಮನುಷ್ಯರಾಗಿದ್ದ ಇವರ ಹೆಸರಿನಲ್ಲಿ ದೇವಸ್ಥಾನ ಕಟ್ಟಿಸಿರಬಹುದೆಂದು ಊಹಿಸುತ್ತಾರೆ. ಜೊತೆಗೆ ಮೈಲಾರ-ಮಾಳಚಿ ರೂಪ ನಿಷ್ಪತ್ತಿಯ ಅನೇಕ ಶಾಸನಗಳನ್ನು ಪರಿಶೋಧಿಸಿ ೧೦ನೇ ಶತಮಾನದ ಪೂರ್ವದಲ್ಲಿ ಈ ದೈವ ಕರ್ನಾಟಕದಲ್ಲಿ ಜನಪ್ರಿಯವಾಗಿರಲಿಲ್ಲವೆಂಬ ಅಭಿಪ್ರಾಯಕ್ಕೆ ಬರುತ್ತಾರೆ.[೨೧] ಅದೇ

ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಮಾಳಚಿಯ ಹೆಸರು ಚಾಮುಂಡಿ, ಕಾಳಿ ಎಂಬ ದೇವತೆಗಳ ಸಾಲಲ್ಲಿ ಬಂದಿದೆ.[೨೨] ಅವನ ಪ್ರಕಾರ ಅವುಗಳಲ್ಲಿ ಕ್ಷುದ್ರದೇವತೆಗಳು. ಹೀಗಾಗಿ ಕಾವ್ಯಗಳಲ್ಲಿ ಮಾಳಚಿ ಮೈಲಾರನ ಸಂಬಂಧದ ಕುರಿತು ಉಲ್ಲೇಖಗಳು ಸ್ಪಷ್ಟವಾಗಿವೆ.

* ನೇಮಿಚಂದ್ರನ ಲೀಲಾವತಿಯಲ್ಲಿ(೮.೧೯) ಹಲ್ಲುಗಳ ಮಿಂಚನ್ನು ಬೀರುತ್ತಿದ್ದ ಒಂದು ಮದ್ದಾನೆಯನ್ನು ಮೈಲಾರನಿಗೆ ಹೋಲಿಸಿದೆ. "ಪಲ್ಗಳ ಛವಿ ಮಿಂತಂ ಬೀಟೆ ಸಮದ ಸ್ತಂಬೇರಮಮೆಸೆದುದು ಮೈಲಾರನ ಮೋಲ್' ಮೈಲಾರನ ವಿಗ್ರಹದ ಮುಖದಲ್ಲಿ ಹೊಳೆಯುವ ಕೋರೆ ಹಲ್ಲುಗಳಿದ್ದವು ಎಂಬುದು ಇದರಿಂದ ಸೂಚಿತವಾಗುತ್ತದೆ. ಸ್ತಂಬೇರಮ ಎನ್ನುವಲ್ಲಿ ಪಿಂಬೇರು ಎಂಬ ಸ್ಥಳವಾಚಿ ಕವಿಯ ಮನಸ್ಸಿನಲ್ಲಿರುವಂತಿದೆ.[೨೩] ಮೈಲಾರನ ಶಕ್ತಿಯನ್ನು ಇಲ್ಲಿ ಆನೆ ಗಾತ್ರಕ್ಕೆ ಹೋಲಿಸಿರಬಹುದು.

* ಹರಿಹರ ಕವಿ ಶಂಕರದಾಸಿಮಯ್ಯನ ರಗಳೆಯಲ್ಲಿ[೨೪] ಶಂಕರದಾಸಿಮಯ್ಯನು ಪೆಂಬೇರಿನಲ್ಲಿ ಮೈಲಾರನನ್ನು ತನ್ನ ಆಳನ್ನಾಗಿ ಮಾಡಿಕೊಂಡ ಕತೆ ಬಂದಿದೆ. ಈ ಕತೆ ಮುಂದಿನ ಅನೇಕ ವೀರಶೈವ ಪುರಾಣಗಳಲ್ಲಿ ಕಾಣಿಸಿಕೊಳ್ಳುವುದುಂಟು. ಶಂಕರದಾಸಿಮಯ್ಯನ ಈ ಪವಾಡ ಮುಂದೆ ಅನೇಕ ವೀರಶೈವ ಕಾವ್ಯಗಳಲ್ಲಿ ಕಾಣಿಸಿಕೊಳ್ಳುತ್ತದೆ. ಬಸವ ಪುರಾಣದಲ್ಲಿ(೨೩,೧೯)..... ಕೊಡೆವಿಡಿದೊಡನೆ ನಡೆಯೆ ಕಟಕದ ಮೈಲಾರ' ಎಂದಿದೆ. ಸಾನಂದ ಚರಿತೆಯಲ್ಲಿ(೯.೩೭– "ಮಾರಿ ಕೊಟ್ಟಣಂಗುಟ್ಟಯಂ ಮೈಲಾರ ಕೊಡೆವಿಡಿಯಂ" ಎಂದಿದೆ. ಗುರುರಾಜ ಚಾರಿತ್ರದಲ್ಲಿ(೮.೫೬)" ಪ್ರತ್ಯಕ್ಷಾಭೂದುದ್ರನೆನಿಸಿ ಬಳಿಕ ಕೊಡೆಯ ಮೈಲಾರನಿಂದಂ ಮರನ ಸತ್ತಿಗೆಯ ಪಿಡಿಸಿ..... ಎಂದಿದೆ. ತೊಂಟದ ಸಿದ್ದೇಶ್ವರ ಪುರಾಣದಲ್ಲೂ(೧೬.೧೧) ಈ ಸಂಗತಿ ಬಂದಿದೆ.[೨೫] ರಗಳೆಗಳಲ್ಲಿ ಮೈಲಾರನ ಉಲ್ಲೇಖವು ಸ್ಪಷ್ಟತೆಯಿಂದಾಗಿ ಮೈಲಾರನ ನಂಬಿಕೆ ಆಚರಣೆ ಇನ್ನಷ್ಟು ಪ್ರಾಚೀನತೆಗೆ ಕುರುಹು ಎಂದು ಗುರುತಿಸಬಹುದು.

* ಕುಮಾರವ್ಯಾಸನ ಕರ್ನಾಟಕ ಭಾರತ ಕಥಾಮಂಜರಿ(ವಿರಾಟಪರ್ವ, ಸಂಧಿ ಪದ್ಯ ೬೯) ಯಲ್ಲಿ ಈ ಪದ್ಯವಿದೆ. "ವೀರರಿದಿರಹ ಹೊತ್ತು ರಣ ಮೈಲಾರರಾದರು ಮರಳಿ ತೆಗೆವುತ ಭೈರವನ ಸಾರೂಪ್ಯವಾದರು ಪೂತು ಮಝುರೆನುತ"[೨೬] ವೀರರನ್ನು ಎದುರಿಸಿ ರಣರಂಗದಲ್ಲಿ ಮೈಲಾರರಾದರು ಎಂದು ಮೈಲಾರನಾಗಿ ಅವತರಿಸಿ ರಾಕ್ಷಸನನ್ನು ಸಂಹಾರ ಮಾಡಿದ ಉಲ್ಲೇಖ ಆನಂದ ಕವಿಯ ಶಂಕರ ವಿಜಯದಲ್ಲಿ ಬರುತ್ತದೆ.[೨೭] ಹೀಗೆ ಕುಮಾರವ್ಯಾಸನ ಕಾವ್ಯದಲ್ಲಿ ಮೈಲಾರನ ಉಲ್ಲೇಖವಿರುವುದು ಅತ್ಯಂತ ವಿಶೇಷವಾಗಿದೆ.

* ಅಂಜನಾ ಚರಿತೆಯಲ್ಲಿ(೩.೧೨೯) ಪುರದ ಮಸಣೆ, ಇಂದುಪುರದ ಎಕ್ಕನಾತಿ, ಪಿರಿಯ ಭೈರವದೇವ, ಮೈಲಾರನ ಹೆಸರುಗಳಿವೆ.[೨೮] ಇಲ್ಲಿ ಮೈಲಾರನನ್ನು ಪ್ರಾದೇಶಿಕವಾಗಿ

ಆಯಾ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಹಲವು ನಾಮಾಂಕಿತಗಳಿಂದ ಕರೆಯಲ್ಪಡುತ್ತಿದ್ದರು ಎಂಬುದು ಇಲ್ಲಿ ಗೋಚರಿಸುತ್ತದೆ.

* ರಾಮನಾಥ ಚರಿತೆಯಲ್ಲಿ ಮೈಲಾರನನ್ನು ದೊಡ್ಡಿದೇವ ಎಂದು ಕರೆದಿದೆ.[೨೯] ದೊಡ್ಡಿ ಎಂದರೆ ದನ ಕರಗಳನ್ನು ಕಾಯುವ ಸ್ಥಳ, ದೇವ ಎಂದರೆ ಪಾಲಕ, ಆಶ್ರಯದಾತ ಎಂದರ್ಥ ಹಾಗಾಗಿ ದೊಡ್ಡಿದೇವ ಎಂದರೆ ಪಶುಪಾಲಕ ದೈವ ಎಂದರ್ಥವಾಗುತ್ತದೆ. ಹಾಗಾಗಿ ಹಲವಾರು ಪಶುಪಾಲಕ ಸಮುದಾಯಗಳಿಗೆ ದೈವ, ದೇವನಾಗಿ ಮೈಲಾರನು ಸಾಂಸ್ಕೃತಿಕ ಹಾಗೂ ಪೂಜ್ಯನೀಯವಾಗಿ ಆರಾಧಿಸುವ ಮೂರ್ತ ಕಲ್ಪನೆಯಾಗಿದ್ದಾನೆ.

* ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ ಮಾರಿ, ಮಸಣೆ, ಬೀರ, ಮೈಲಾರ, ಉಡಿಸಿಕಾರಿ, ಬಾದುಮಯ್ಯ ಎಂಬ ದೇವತೆಗಳ ಹೆಸರಿದೆ.[೩೦] ಇಲ್ಲಿ ಪ್ರತಿಯೊಂದು ಹೆಸರು ಪ್ರತ್ಯೇಕವಾಗಿ ಹಾಗೂ ವಿಶಿಷ್ಟವಾಗಿ ಅರ್ಥಗರ್ಭಿತವಾಗಿದೆ. ಮಸಣೆ ಎಂದರೆ ಸ್ಮಶಾನ ಎಂಬ ಅರ್ಥದಲ್ಲಿ ಹುಡುಕಿದಾಗ ಮಸಣದ ಒಡೆಯ ಮೈಲಾರನಾಗಿದ್ದಿರ ಬಹುದೆಂದು ಊಹಿಸಲೂಬಹುದು.

* ಶಂಕರ ವಿಜಯ ಕಾವ್ಯದಲ್ಲಿ ಮೈಲಾರ ಎಂಬ ಹೆಸರಿನಿಂದ ಈಶ್ವರನು ಅವತರಿಸಿ ರಾಕ್ಷಸ ಸಂಹಾರವನ್ನು ಮಾಡಿದನೆಂದಿದೆ.[೩೧] ಕೆಲವು ವಿದ್ವಾಂಸರು ಮೈಲಾರನ ಈಶ್ವರನ ಇನ್ನೊಂದು ಬಹುಶಃ ಶಂಕರ ವಿಜಯ ಕಾವ್ಯದಲ್ಲಿ ಆಧಾರದಿಂದ ಇರಬೇಕು.

ಹೀಗೆ ಮೈಲಾರ ಕುರಿತು ಕಾವ್ಯಗಳಲ್ಲಿ ಉಲ್ಲೇಖದಿಂದಾಗಿ ಇಂದಿಗೂ ಸಹ ಜನರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದೆ. ಮೈಲಾರನ ಜಾತ್ರೆ, ಹಬ್ಬ, ಹರಿದಿನ, ಆಚರಣೆ ಸಂದರ್ಭದಲ್ಲಿ ಮೈಲಾರನ ಕುರಿತಂತೆ ಹಲವು ಜನಸಮುದಾಯಗಳು ಕಾವ್ಯವನ್ನು ಹಾಡಿನ ರೂಪದಲ್ಲಿ ಇಂದಿಗೂ ಪ್ರಸ್ತುತಪಡಿಸುತ್ತಾರೆ. ಮೈಲಾರನ ಕಾವ್ಯಗಳು ಸ್ಥಳ, ಅಥವಾ ಪ್ರಾದೇಶಿಕವಾಗಿ ವಿಭಿನ್ನವಾಗಿ ಹಾಗೂ ವಿಶೇಷತೆಯಿಂದ ಕೂಡಿಕೊಂಡು ಮೈಲಾರ ಪರಂಪರೆಯನ್ನು ಮುಂದುವರೆಸಿದೆ ಎಂದು ಹೇಳಬಹುದು.

**ಪುರಾಣಗಳಲ್ಲಿ ಮೈಲಾರಲಿಂಗನ ಉಲ್ಲೇಖ**

ಮೈಲಾರ ಕಾವ್ಯಗಳಲ್ಲಿಯ ಉಲ್ಲೇಖಗಳನ್ನು ಹೊರತುಪಡಿಸಿ ಪುರಾಣಗಳಲ್ಲಿಯು ಸಹ ಉಲ್ಲೇಖಿಸಲಾಗಿದೆ. ಕನ್ನಡದಲ್ಲಿ ಮಲ್ಲಿಕಾರ್ಜುನ ಕವಿಯ ಶಂಕರದಾಸಿಮಯ್ಯ ಪುರಾಣ (ಕ್ರಿ.ಶ.೧೬೮೫) ಜನ್ನ ಕವಿಯ ಅನಂತನಾಥ ಪುರಾಣ, (ಕ್ರಿ.ಶ ೧೩ನೆಯ ಶತಮಾನ) ವಿರಕ್ತ ತೊಂಟದಾರ್ಯರ ತೊಂಟದ ಸಿದ್ದೇಶ್ವರ ಪುರಾಣ, ಕ್ರಿ.ಶ. ೧೫ನೆಯ ಶತಮಾನಗಳಲ್ಲಿ ಮೈಲಾರನ ಉಲ್ಲೇಖಗಳು ದೊರೆಯುತ್ತವೆ. ಮೈಲಾರನ ನಂಬಿಕೆ, ಆಚರಣೆ, ಪವಾಡಗಳ ಕುರಿತು ಈ ಪುರಾಣಗಳಲ್ಲಿ ಉಲ್ಲೇಖವಿರುವುದರಿಂದ ಮತ್ತಷ್ಟು ಮೈಲಾರನ ಪ್ರಾಚೀನತೆಗೆ ಮಹತ್ವ ಬರುತ್ತದೆ.

* ಜನ್ನ ಕವಿಯ ಅನಂತನಾಥ ಪುರಾಣದ ಸಂಧಿ ೧೨ ಪದ್ಯ ೪೯ರಲ್ಲಿ 'ರಕ್ತಾಂಬು ಮಜ್ಜನಂ ಮಾಡಿಸಿ ಮಸ್ತಕಾಂಬುರುಹದಿಂದಂ ಪ್ರಜೆಗೆಯ್ದಾಂ ತೊಡಾತನ ಕೂರ್ವಳ್ ಕರವಾಳ್‌ದಲುಂತು ಮರವಾಳ್ ಪಾಳರ ಮೈಲಾರ" ಎಂಬ ಉಲ್ಲೇಖದಿಂದ ಈ ಖಡ್ಗಧಾರಿ ಎಂಬುದಾಗಿ ತಿಳಿದು ಬರುತ್ತದೆ.[೩೨] ಮೈಲಾರನ ವಿಗ್ರಹದ ಕೈಯಲ್ಲಿ ಮರದ ಕತ್ತಿಯು ಇದ್ದುದ್ದು ಸೂಚಿಸುವುದು ಅನಂತನಾಥ ಪುರಾಣದಲ್ಲಿ ವಿಶೇಷತೆಯಾಗಿದೆ.

* ಕ್ರಿ.ಶ. ೧೫ನೆಯ ಶತಮಾನದಲ್ಲಿ ವಿರಕ್ತ ತೋಂಟದಾರ್ಯನ ಸಿದ್ದೇಶ್ವರನ ಪುರಾಣದಲ್ಲಿ "ತೋಂಟದ ಸಿದ್ದಲಿಂಗ ಯತಿಗಳ ಆಶೀರ್ವಾದಕ್ಕೆ ಮಲ್ಲಿಶೆಟ್ಟಿ ಹೋಗಲು ಮುಂದಾಗುತ್ತಾನೆ. ಆದರೆ ಈ ಶೆಟ್ಟಿಯ ಹೆಂಡತಿ ಮೈಲಾರನ ಭಕ್ತೆ. ಹೀಗಾಗಿ ಗಂಡ ಹೆಂಡಿರ ನಡುವೆ ಮಾತು ನಡೆದು ಮಲ್ಲಿಶೆಟ್ಟಿ ಶಂಕರದಾಸಿಮಯ್ಯನ ಆಳಾಗಿ ಕೊಡೆ ಸೇವೆ ಮಾಡಿದ್ದನ್ನು ಎತ್ತಿ ಹೇಳುತ್ತಾನೆ. ಅದೇ ಸಂದರ್ಭದಲ್ಲಿ "ಕೊರಳಿಗೆ ಕವಡಿಯ ಕಟ್ಟಿಕೊಂಡು, ನಾಯಿಯ ರೀತಿ ಬೋಗಳುತ್ತಾ ಭೂಮಿಯೊಳಗೆ ಹೊಟ್ಟೆ ಹೊರೆಯಲು ತಿರುಗುತ್ತಿದ್ದ ದೈವಗಳ ಹೆಗ್ಗಳಿಕೇ ತಾನು ಬಿಡು ಮರುಳೇ" ಎಂದು ಹೆಂಡತಿಯನ್ನು ಪೀಡಿಸುವಂತಿಲ್ಲಿ. ಮೈಲಾರ ಹಾಗೂ ಆತನ ಭಕ್ತರನ್ನು ಖಂಡಿಸುತ್ತಾನೆ.[೩೩] ಮೈಲಾರ ಇವನ ವಾಹನ, ಹೆಂಡತಿಯನ್ನು ಖಂಡಿಸುವ ವಿಧಾನ ಇಂತಹ ಮುಖ್ಯವಾದ ಅಂಶಗಳು ಸಿದ್ದೇಶ್ವರ ಪುರಾಣದಲ್ಲಿ ಉಲ್ಲೇಖಿಸಿರುವುದು ಮಹತ್ವದ ಸಂಗತಿಯಾಗಿದೆ.

ಪಂಡಿತ ಮಲ್ಲಿಕಾರ್ಜುನ ಶಂಕರದಾಸಿಮಯ್ಯ ಪುರಾಣಗಳಲ್ಲಿ ಅನೇಕ ರೀತಿಯ ರೋಚಕ ಸಂಗತಿಗಳನ್ನು ಒಳಗೊಂಡಿದೆ. ಮೈಲಾರನು ಶಂಕರದಾಸಿಮಯ್ಯನ ಆಳಾಗಿ ದುಡಿದು ಆತನ ತಾಂಬುಲವನ್ನು ಸ್ವೀಕರಿಸಿದ್ದು ಹಾಗೂ ಶಿಷ್ಯ ವಕ್ರಾಪಾತನಿಗೆ ಕೊಡೆ ಸೇವೆ ಮಾಡಿರುವುದನ್ನು ಹರಿಹರನ ಶಂಕರದಾಸಿಮಯ್ಯನ ರಗಳೆ ಪ್ರಸಂಗವನ್ನೇ ವಿಸ್ತಾರವಾಗಿ ಮಲ್ಲಿಕಾರ್ಜುನ ಕವಿ ತನ್ನ ಶಂಕರದಾಸಿಮಯ್ಯನ ಪುರಾಣದಲ್ಲಿ ಚಿತ್ರಿಸಿದ್ದಾನೆ. ವಿಶೇಷವಾಗಿ ಮಲ್ಲಿಕಾರ್ಜುನ ಕವಿ ಪೌರಾಣಿಕ, ಜನಪದ ಹಾಗೂ ಚಾರಿತ್ರಿಕ ನೆಲೆಗಳಲ್ಲಿ ಮೈಲಾರನ ಕಥೆಗಳನ್ನು ಹೆಣೆದಿರುವುದು ಕಂಡುಬರುತ್ತದೆ.[೩೪] ಅಂಥವುಗಳನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

೧. ಮಲ್ಲನೆಂಬ ದೈತ್ಯನು ಮೃಗವಾಗಿ ಉಪಟಳ ಕೊಡುತ್ತಿದ್ದಾಗ ಶಿವನಿಂದ ಹತನಾದ ದೈತ್ಯನೇ ಮಲ್ಲಾರಿ>ಮೈಲಾರಿ ಎಂಬುದು ಶಿವನ ಕಿರಾತಲೀಲೆಯಂತೆ ಚಿತ್ರಣಗೊಂಡ ಪೌರಾಣಿಕ ನೆಲೆಯಾಗಿದೆ.

೨. ಮಲ್ಲನೆಂಬ ದೈತ್ಯನನ್ನು ಕೊಂದ ಶಿವ ಕುರುಬರ ಬೀಡಿಗೆ ಬಂದು ಕುರಿಗಳಿಗೆ ಉಪಟಳ ಕೊಡುತ್ತಿದ್ದ ತೋಳವನ್ನು ಕೊಂದ ಕಾರಣವಾಗಿ ಹೆಗ್ಗಡೆಯ ಮಗಳನ್ನು ಮದುವೆಯಾದ ಮಲ್ಲಾರಿಯದ ಜನಪದ ನೆಲೆಯಾಗಿದೆ.

೩. ಕ್ಷತ್ರಿಯ ಭೂಪಾಲನು ರಾಜ್ಯ ತ್ಯಜಿಸಿ ಜೈನದೀಕ್ಷೆ ಹೊಂದಿ ಮಲ್ಲಿದೇವನಾಗುತ್ತಾನೆ. ಶಿಷ್ಯನ ಪರೀಕ್ಷೆಗಾಗಿ ಜೈನಮುನಿ ಹೂವನ್ನು ಮಂತ್ರಿಸಿ ಕೊಟ್ಟು ಸ್ತ್ರೀ ವಶೀಕರಣ ಮಾಡಲು ತಿಳಿಸುತ್ತಾರೆ. ಇದರಂತೆ ಕುರುಬ ಗೃಹಸ್ಥನ ಮಡದಿ ಮಾಳಿಗೆ ಹೂ ನೀಡಿ ಓಡಿಸಿಕೊಂಡು ಹೋಗಲು ನೆರೆದ ಬೇಡರಿಂದ ಮಾಳೆ-ಮಲ್ಲರು ಹತರಾದ ಸಂಗತಿಯನ್ನು ನಿರೂಪಿಸುವುದು ಚಾರಿತ್ರಿಕ ನೆಲೆಯಾಗಿದೆ. ಇಷ್ಟೇ ಅಲ್ಲದೆ ಮೈಲಾರನ ಪರಿವಾರದವರಾದ ಗೊರವರು, ವೀರರು, ವಗ್ಗರು, ದೀವಟಿಗರು, ಒಡೆಯರ ದೀಕ್ಷಾ ಉಲ್ಲೇಖಗಳು ಕಾವ್ಯದ ತುಂಬಾ ಸೇರೆಯಾಗಿರುವುದನ್ನು ಕಾಣಬಹುದು.[೩೫] ಮಹತ್ವ ಪೂರ್ಣವಾಗಿ ಶಂಕರದಾಸಿಮಯ್ಯ ಪುರಾಣದಲ್ಲಿ ಮೈಲಾರನ ಕುರಿತು ಉಲ್ಲೇಖಗಳಿವೆ ಎಂದು ಹೇಳಬಹುದು.

**ವಚನಗಳಲ್ಲಿ ಮೈಲಾರಲಿಂಗನ ಉಲ್ಲೇಖ**

ಬಸವಣ್ಣ, ಚನ್ನಬಸವಣ್ಣ, ಉರಲಿಂಗಪೆದ್ದಿ, ಮಡಿವಾಳ ಮಾಚಿದೇವ, ಸೊಡ್ಡಳ ಬಾಚರಸ ಮುಂತಾದ ವಚನಕಾರರ ವಚನಗಳಲ್ಲಿ ಮೈಲಾರಲಿಂಗನ ಪವಾಡ, ನಂಬಿಕೆ, ಆಚರಣೆ ಕುರಿತಂತೆ ಉಲ್ಲೇಖವಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.

* ಬಸವಣ್ಣನವರ ವಚನಗಳಲ್ಲಿ ಮೈಲಾರನ ಉಲ್ಲೇಖ ಹಲವೆಡೆ ಬಂದಿದೆ. "ಒಳ್ಳ ಮೈಲಾರನ ಒಳಗೆಲ್ಲ ಸೆಣಬು ಹೊರಗೆ ಬಣ್ಣ ಕರಲೇ ಸಾಯಿತ್ತಯ್ಯ" ಮೈಲಾರನ ಪ್ರತಿಮೆಯ ಹೊರಭಾಗ ಸಿಂಗಾರಗೊಂಡಿದ್ದರೂ ಒಳಗೆ ಸೆಣಬನ್ನು ತುಂಬಿರುತ್ತಿದ್ದರು.[೩೬] ಮೈಲಾರನನ್ನು ಪೂಜಿಸಿದ ಭಕ್ತರು ನಾಯಿಗಳಂತೆ ಬೊಗಳುತ್ತಿದ್ದರು.[೩೭] ಇವತ್ತಿಗೂ ಸಹ ಮೈಲಾರನ ಭಕ್ತರು ಅಥವಾ ಗೊರವಯ್ಯಗಳು ನಾಯಿಗಳಂತೆ ಎರಡು ಕೈ, ಎರಡು ಮಂಡಿಗಳನ್ನು ನೆಲಕ್ಕೆ ಊರಿ ಅವುಗಳಂತೆ ಬೊಗಳುವ ದೃಶ್ಯಗಳನ್ನು ಉತ್ತರ ಕರ್ನಾಟಕದ ಮೈಲಾರನ ಕ್ಷೇತ್ರಗಳಲ್ಲಿ ಆಚರಣೆಯ ಸಂದರ್ಭದಲ್ಲಿ ನೋಡಬಹುದು. ಇನ್ನೊಂದು ಪ್ರಮುಖ ಉದ್ದೇಶವೆಂದರೆ "ಪಿಂಬೇರ ಮೈಲುಗ ಮೇಳವಾಡುತ್ತಿದ್ದ" ಎಂದು ಹರಿಹರನ ಶಂಕರದಾಸಿಮಯ್ಯನ ರಗಳೆಯ ಆಧಾರದ ಮೇಲೆ ಪಿ.ಬಿ. ದೇಸಾಯಿ ಅವರು ಸಮರ್ಪಕವಾಗಿ, ತೋರಿಸಿಕೊಟ್ಟಿದ್ದಾರೆ.[೩೮] ಎಂದು ಗುರುತಿಸಬಹುದು. ಬಸವಣ್ಣ ತಮ್ಮನ್ನು ಭಕ್ತಿಯ ಮರಳು ಎಂದು ಕರೆದುಕೊಳ್ಳುವಲ್ಲಿ ಮೈಲಾರನ ಭಕ್ತರಾದ ಮರುಳರನ್ನು ಮನಸ್ಸಿನಲ್ಲಿಟ್ಟುಕೊಂಡಂತಿದೆ. ದೇವರಹಿಪ್ಪರಗಿಯಲ್ಲಿ 'ಮಳ್ಳಗೊಗ್ಗಯ್ಯ' ಹೆಸರಿನ ಕುಟುಂಬಗಳಿರುವುದು ಇಲ್ಲಿ ಸ್ಮರಣೀಯ. ಈ ಮರುಳದ ಸ್ತ್ರೀಲಿಂಗವಾಚಿ ಮರುಳೆ ಈ ಮರುಳಯರೇ ಈಗಿನ ಮೈಲಾರನ ಮುರಳಿಯರು, ಅಂದರೆ ದೇವರಿಗೆ ಮರುಳಾದ ಸ್ತ್ರೀಯರು ಎಂದು[೩೯] ಗುರುತಿಸಿದ್ದಾರೆ.

* ಚನ್ನಬಸವಣ್ಣನ ವಚನ ೧೪೭ರಲ್ಲಿ[೪೦] ಮೈಲಾರನ ಆರಾಧನೆ ಕುರಿತಂತೆ ಉಲ್ಲೇಖವಿದೆ.

"ಭೈರವನನಾರಾಧಿಸಿ ಬಾಹಿರ ಪೋದರಯ್ಯ
ಮೈಲಾರನನಾರಾಧಿಸಿ ಕುರುಳು ಬೆರಳ ಕಡಿಸಿಕೊಂಡು
ನಾಯಾಗಿ ಬಗಳುತಿಪ್ಪರು"

ಎನ್ನುವಲ್ಲಿ ತಾನು ಒಲಿಸಿಕೊಳ್ಳುವ ದೈವಕ್ಕೆ ಮುಡಿ-ಬೆರಳು ಅರ್ಪಿಸುವಲ್ಲಿ ಮೈಲಾರನಿಗೆ "ಮುಡುಪು" ನೀಡುವ ಪರಂಪರೆಯಿರುವುದನ್ನು ಕಾಣಬಹುದು. ಹೀಗೆ ವಚನಕಾರರ ವಚನಗಳಲ್ಲಿ ಮೈಲಾರಲಿಂಗ ವಿಲೀನವಾಗಿದ್ದಾನೆ ಎಂದು ಹೇಳಬಹುದು.

* ಉರಿಲಿಂಗಪೆದ್ದಿ ವಚನಗಳಲ್ಲಿ ಮೈಲಾರನ ಉಲ್ಲೇಖದಿಂದ ಸ್ಪಷ್ಟತೆಯಿದೆ.

"ಮೈಲಾರನ ದೈವವೆಂದಾರಾಧಿಸಿದಾತನು ಕೊರಳಿಗೆ ಕವಡೆಯ ಕಟ್ಟಿ ನಾಯಾಗಿ ಬೊಗಳುತಿರ್ಪ

ಭೈರವನೇ ದೈವವೆಂದಾರಾಧಿಸಿದಾತನು ಕೊರಲಿಗೆ ಕವಡೆಯ ಕಟ್ಟಿ ಕಿರುಕುಳ(ಕರುಳ?) ಬೆರಳ ಕಡಿದಿಕ್ಕಿ ಬಾಹಿರನಾದನು.

ಮಾಯಿರಾಣಿಯ ದೈವವೆಂದಾರಾಧಿಸಿದಾತನು ಕೊರಳಿಗೆ
ಕವಡೆಯ ಕಟ್ಟಿ
ತಲೆಯಲ್ಲಿ ಕೆರಹ ಬೇವಿನ ಸೊಪ್ಪನುಟ್ಟು ಸವಡಿಲಜ್ಜೆಯ ನೀಗಿದ[೪೧]

ಮೈಲಾರನ ಭಕ್ತರು ನಾಯಿಗಳಂತೆ ಬೊಗಳುತ್ತಿದ್ದ, ಕೊರಳಲ್ಲಿ ಕವಡೆಗಳ್ನು ಕಟ್ಟುತ್ತಿದ್ದ ವಿಷಯ ಇಲ್ಲಿದೆ. ಈ ವಚನವು ಚನ್ನಬಸವಣ್ಣನವರ ಮೇಲಿನ ವಚನದಿಂದ ಪ್ರಭಾವಿತ ವಾಗಿರುವಂತಿದೆ. ಭೈರವನಿಗೆ 'ಕಿರುಕುಳ'ವನ್ನು ಕಡಿದಿಡುವ ಪದ್ದತಿ ಇಲ್ಲಿ ಸೂಚಿತವಾಗಿದೆ.[೪೨] ಇವತ್ತಿಗೂ ಇಂತಹ ಆಚರಣೆಗಳು ಮೈಲಾರಲಿಂಗನ ಕೆಲವು ಕ್ಷೇತ್ರಗಳಲ್ಲಿ ನಿರಂತರ ನಡೆಯುತ್ತವೆ.

* ಮಡಿವಾಳ ಮಾಚಿದೇವ ವಚನವೊಂದರಲ್ಲಿ 'ಕಾಳುದೈವ'ಗಳೆಂದು ಮಿಂಡ, ಬೀರ, ಭೈರವ, ಯಕ್ಕನಾತಿ, ಕುಕ್ಕನೂರು ಬನದಿ, ಕೇತ, ಧೂಳ ಎಂಬ ಹೆಸರುಗಳಿವೆ.[೪೩] ಈ ಹೆಸರುಗಳು ಮೈಲಾರನಿಗೆ ಸಂಬಂಧಿಸಿದ್ದಿರಬಹುದು. ಹೇಗೆಂದರೆ ಮೈಲಾರ ಪ್ರಾದೇಶಿಕವಾಗಿ ವಿಭಿನ್ನತೆಯಿಂದ ಕೂಡಿದ ಸಂಸ್ಕೃತಿ, ಹಲವು ವಿಭಿನ್ನವಾದ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಾನೆ ಎಂದು ಗುರುತಿಸಬಹುದು.

* ಸೊಡ್ಡಳ ಬಾಚರಸನ ವಚನದಲ್ಲಿ ಮೈಲಾರನ ಉಲ್ಲೇಖವಿದೆ.

"ಘುಡು ಘುಡಿಸಿ ಅನ್ಯ ದೈವಂಗಳ ಕೊಡೆವಿಡಿಸಿದನು
ಪಿಂಬೇರು ಮೈಲಿಗೆಯನು ಅಡಗಿಸಿದನು ಭೋ
ದೈವಂಗಳ ದರ್ಪವನು ಉಡುಗಿಸಿದ ಭೋ.........."[೪೪]

ಈ ವಚನದಲ್ಲಿ ಮೈಲಾರನ ಕೊಡೆ ಸೇವೆ ಹಾಗೂ ಪಿಂಬೇರದ ಉಲ್ಲೇಖಗಳಿಂದ ಕೂಡಿದೆ ಒಂದಲ್ಲ ಒಂದು ರೀತಿ ವಚನಗಳಲ್ಲಿ ಮೈಲಾರನ ಉಲ್ಲೇಖಗಳಿರುವುದು ವಿಶೇಷವಾಗಿದೆ.

**ಕೀರ್ತನೆ ಸುಳಾದಿಗಳಲ್ಲಿ ಮೈಲಾರಲಿಂಗನ ಉಲ್ಲೇಖ**

ಕನಕದಾಸರ ಕೀರ್ತನೆಗಳಲ್ಲಿ 'ಎಕ್ಕನಾತಿ, ಕಾಟ, ಜಕ್ಕಿಕನ್ಯೆಯರು, ಭೈರವದೇವ, ಮಾರಿ, ಮಸಣೆ, ಚೌಡಿ, ಮೈಲಾರ, ಗುತ್ತಿಯ ಯಲ್ಲಮ್ಮ ಮುಂತಾದವರನ್ನು ಇಲ್ಲಿ ಉಲ್ಲೇಖಿಸಿದ್ದಾರೆ.[೪೫] ಕನಕದಾಸರು ಮಾನವೀಯ ಮೌಲ್ಯಗಳನ್ನು ಇಟ್ಟುಕೊಂಡು ಇಡೀ ಮನುಕುಲಕ್ಕೆ ತಮ್ಮ ಕೀರ್ತನೆಗಳ ಮೂಲಕ ಪ್ರಸಾರ ಮಾಡಿದರು.

ವಿಜಯದಾಸರ ಸಾಧನೆ ಭಾಗ ಸುಳಾದಿಗಳಲ್ಲಿ "ಎಲ್ಲಾಯಿ, ಯಕನಾತಿ, ಬನಶಂಕರಿ, ಮಲ್ಲಗ (=ಮೈಲಾರ) ಜಟ್ಟಿಂಗ, ಮಾಳಿಗೆ, ತುಳಜಾಭವಾನಿ, 'ಕರಿಯಾ ಶೀರಿಯ ಶಟಮಿ' ಮುಂತಾದ ದೈವಗಳ ಹೆಸರಿವೆ. ಹೀಗಾಗಿ ಕೀರ್ತನೆ ಮತ್ತು ಸುಳಾದಿಗಳಲ್ಲಿ ಮೈಲಾರ ಕುರಿತು ಉಲ್ಲೇಖಗಳು ಸ್ಪಷ್ಟವಾಗಿ ಅರ್ಥವಿವರಣೆಯನ್ನು ನೀಡುತ್ತವೆ.

ಹೀಗೆ ಪುರಾಣ ಕಾವ್ಯ, ವಚನ, ಕೀರ್ತನೆ, ಇತ್ಯಾದಿ ಆಕರ ಸಾಮಗ್ರಿಗಳನ್ನು ಗಮನಿಸಿದ ಮೇಲೆ ಮೈಲಾರನ ಪರಂಪರೆಯ ಅಸ್ತಿತ್ವವನ್ನು ಈ ಕೆಳಗಿನಂತೆ ನಿರೂಪಿಸಬಹುದು. ಮೈಲಾರ ಕ್ಷುದ್ರವೆಂದು ಕಾವ್ಯ-ಪುರಾಣಗಳಲ್ಲಿ ನಿರ್ವಚಿಸಲಾಗಿದೆ. ಮೈಲಾರನ ಹುಟ್ಟು ಕರ್ನಾಟಕಕ್ಕಿಂತ ಮಹಾರಾಷ್ಟ್ರವೆಂಬುದರ ಕಡೆಗೆ ಕಾವ್ಯ-ಪುರಾಣಗಳು ಪ್ರಸ್ತುತ ಪಡಿಸುತ್ತವೆ. ಮಹಾರಾಷ್ಟ್ರದ ತರಲಾನದಿ ಪ್ರವೇಶಿಸಿದಾಗ 'ಪಿಂಬೇರ' ಆತನ ಕ್ಷೇತ್ರವೆಂಬುದು ಶಂಕರದಾಸಿಮಯ್ಯನ ಪುರಾಣ. ಬಸವಣ್ಣನವರ ವಚನ ಮುಂತಾದ ಕಾವ್ಯಗಳಿಂದ ತಿಳಿದು ಬರುತ್ತದೆ. ಮಸಣಿಗೆ ಪುರಂದಂತೆ ಎಕ್ಕನಾತಿಗೆ ಇಂದುಪುರದಂತೆ, ಭೈರವನಿಗೆ ಪೆಲಿಯಂತೆ ದೇವನಂತೆ "ಪಿಂಬೇರಿ" ಮೈಲಾರನ ಮೂಲ ಸ್ಥಾನವಾಗಿರಬೇಕು.[೪೬]

ಮಹಾರಾಷ್ಟ್ರ ಮೂಲದ ಖಂಡೋಬಾ ೧೧೫೦ ಕ್ಕೂ ಹಿಂದೆ 'ಮೈಲಾರ' ಹೆಸರಿನಲ್ಲಿ ಕರ್ನಾಟಕವನ್ನು ಪ್ರವೇಶಿಸಿರಬೇಕು. ಆದರೆ ಈ ಅಭಿಪ್ರಾಯವನ್ನು ಪ್ರೊ. ನೇಗಿನಹಾಳ ಅವರು ಒಪ್ಪುವುದಿಲ್ಲ. ಮಹಾರಾಷ್ಟ್ರದಲ್ಲಿ ವಿಠೋಬನ ಬಗ್ಗೆ ಭಿನ್ನಾಭಿಪ್ರಾಯಗಳಂತೆ ಮೈಲಾರ

ದೈವದ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಹೀಗಾಗಿ ಕನ್ನಡಿಗರ ದೇಶಿ ದೈವ ಎಂದು ಅಭಿಪ್ರಾಯ ಪಡುತ್ತಾರೆ.[೪೭]

ಈ ದೈವವನ್ನು ಪ್ರಸಿದ್ಧಿಗೆ ತಂದಿರಬಹುದಾದ ಚಟ್ಟಪನನ್ನು ಕುರಿತು ಚಿದಾನಂದಮೂರ್ತಿ ಅವರು ಈತ ಐತಿಹಾಸಿಕ ವ್ಯಕ್ತಿ ಎನ್ನುತ್ತಾರೆ. ಈತನಿಂದಾಗಿ ಮಹಾರಾಷ್ಟ್ರದ "ಖಂಡೋಬಾ" "ಮೈಲಾರ" ನೆಂದು ಕರ್ನಾಟಕದಲ್ಲಿ ಪ್ರತಿಷ್ಠಾಪಿತವಾಗಿರಬೇಕು. ಉದಾಹರಣೆಗೆ ಕರ್ನಾಟಕದ ಸೊರಟೂರನಿಂದ ಮಲ್ಲಿಕಾರ್ಜುನನ್ನು ಶಿವಾಜಿ ವಂಶಜನಾದ ಬಿಳಿಯಪ್ಪ ಸಾತಾರ ಜಿಲ್ಲೆಯ ಶಿಖರಸಿಂಘನಾಪುರದಲ್ಲಿ ಪ್ರತಿಷ್ಠಾಪಿಸಿದಂತೆ ಪಿಂಬೇರದ ಖಂಡೋಬನನ್ನು ಚಟ್ಟಪನು ಕರ್ನಾಟಕದಲ್ಲಿ ಮೈಲಾರನೆಂದು ಪ್ರತಿಷ್ಠಾಪಿಸಿದಂತೆ ತೋರುತ್ತದೆ. ಯಾಕೆಂದರೆ ಅಲ್ಲಿಯ ತರಲಾ ನದಿಯ ಎರಡು ಮಗ್ಗಲಿನ 'ಪಾಲ' ಎಂಬ ಮೈದಾನ ಸುಪ್ರಸಿದ್ಧ ಪುಣ್ಯಕ್ಷೇತ್ರ ಈ ನದಿಯ ಒಂದು ತಡಿಗೆ ಇರುವ ಪೆಂಬರದಲ್ಲಿ ಮೈಲಾರನ ದೇವಾಲಯವಿದೆ. ಆ ಪೆಂಬರನೇ ಪಿಂಬೇರ ಆಗಿರಬೇಕು.[೪೮] ಏನೇ ಇದ್ದರೂ ಮೈಲಾರನ ಕುರಿತತಂತೆ ಹಲವಾರು ವಿದ್ವಾಂಸರು ತಮ್ಮ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೂ ಸಹ ಮೈಲಾರಲಿಂಗನ ಒಬ್ಬ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ದೈವ ಎಂದು ಸ್ಪಷ್ಟಪಡಿಸಬಹುದು.

### ೨.೩. ಚಾರಿತ್ರಿಕ ಹಿನ್ನೆಲೆ

ದಕ್ಷಿಣ ಭಾರತದಲ್ಲಿ ಚಾರಿತ್ರಿಕ ಕಾಲಘಟ್ಟದಲ್ಲಿ ವಿವಿಧ ದೇವತೆಗಳು ಪ್ರಸಿದ್ಧಿಯನ್ನು ಪಡೆದಿವೆ. ಆದರೆ ಎಲ್ಲಾ ಜನಮನದಲ್ಲಿ ಬೇರೂರಿರುವ ದೈವವೆಂದರೆ ಮೈಲಾರ. ಮೈಲಾರನ ಪ್ರಾಚೀನತೆಯನ್ನು ಸ್ಪಷ್ಟವಾಗಿ ತಿಳಿಯುವುದು ಕಷ್ಟಕರವಾದ ಮಾತು. ಆದರೆ ಕೆಲವೊಂದು ಆಕರಗಳು ಮೈಲಾರನ ಪ್ರಾಚೀನತೆಯನ್ನು ತಿಳಿಯಲು ತುಂಬಾ ಸಹಾಯಕವಾಗಿ ನಿಲ್ಲುತ್ತವೆ. ದಕ್ಷಿಣ ಭಾರತದ ಆಂಧ್ರಪ್ರದೇಶ, ತಮಿಳುನಾಡು, ಗೋವಾ, ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ನೆಲೆಗೊಂಡಿರುವ ಈ ದೈವವೂ ಹೆಚ್ಚು ಪ್ರಚಾರತೆಯನ್ನು ಪಡೆದುಕೊಂಡ ದೈವ. ಈ ದೈವದ ಚಾರಿತ್ರಿಕ ಅಂಶಗಳೇನು? ಚಾರಿತ್ರಿಕ ಅಂಶಗಳಿಂದ ನಾಡಿನ ಉದ್ದಗಲಕ್ಕೂ ಹೇಗೆ ಹರಡಿಕೊಂಡಿತು? ಮೈಲಾರನ ಸಂಕೇತಗಳೇನು? ಎಂಬ ನಾನಾ ಪ್ರಶ್ನೆ ಮೂಡುತ್ತವೆ. ಮೈಲಾರನ ಪ್ರಾಚೀನತೆಯನ್ನು ತಿಳಿಯಲು ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು, ಜಾನಪದ ಹಾಗೂ ಬುಡಕಟ್ಟು ಆಚರಣೆಗಳು ಪೂರಕವಾಗಿ ನಿಲ್ಲುತ್ತವೆ. ಈ ಎಲ್ಲಾ ಆಕರಗಳು ದಕ್ಷಿಣ ಭಾರತದಲ್ಲಿ ಲಭ್ಯವಾಗುತ್ತವೆ. ಪ್ರಾಚೀನ ಸಾಹಿತ್ಯಿಕ ಕೃತಿಗಳಲ್ಲಿ ಮೈಲಾರನ ಉಲ್ಲೇಖಗಳು ಕಂಡುಬರುತ್ತವೆ. ಇಂತಹ ಆಕರಗಳನ್ನು ಇಟ್ಟುಕೊಂಡು ಗ.ಹಂ. ಖರೇ, ಪಾಂಡುರಂಗರಾವ್ ದೇಸಾಯಿ, ಶ್ರೀನಿವಾಸ ರಿತ್ತಿ, ಎಂ.ಎಂ. ಕಲಬುರ್ಗಿ, ಶಂಬಾ ಜೋಶಿ, ಎಂ. ಚಿದಾನಂದಮೂರ್ತಿ, ರಾಮಚಂದ್ರ ಢೇರಿ, ಪುರುಷೋತ್ತಮ ಬಿಳಿಮಲೆ, ದೇವರ ಕೊಂಡರೆಡ್ಡಿ, ವಾಸುದೇವ ಬಡಿಗೇರ, ಮಹದೇವ ಸಿ., ರಮೇಶ ನಾಯಕ ಹಾಗೂ

ಎಸ್.ಎಸ್. ಹಿರೇಮಠ ಅವರುಗಳು ಚರ್ಚಿಸಿದ ಅಂಶಗಳ ಆಧಾರದಿಂದ ಚಾರಿತ್ರಿಕ ಅಂಶಗಳನ್ನು ಕುರಿತು ವಿವೇಚಿಸುವ ಪ್ರಯತ್ನವನ್ನು ಮಾಡಲಾಗಿದೆ.

ಮೈಲಾರ ಪರಂಪರೆಯು ನಾಡಿನ ಉದ್ದಗಲಕ್ಕೂ ಹರಡಿಕೊಳ್ಳಲು ಪ್ರಮುಖವಾಗಿ ಭೌಗೋಳಿಕ ಪರಿಸರ ಕಾರಣವಾಗುತ್ತದೆ. ಪಶ್ಚಿಮ ಘಟ್ಟದಲ್ಲಿ ಹರಿಯುವ ತುಂಗಭದ್ರಾ ನದಿಯು ಶಿವಮೊಗ್ಗ ಜಿಲ್ಲೆಯಲ್ಲಿ ಹುಟ್ಟಿ ಹರಿಹರ ತಾಲ್ಲೂಕಿನ ಮೂಲಕ ದಾವಣಗೆರೆ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಹರಿಯುವ ಮಾರ್ಗದಲ್ಲೇ ಹಲವು ತಿರುವುಗಳನ್ನು ಪಡೆದುಕೊಂಡು ಗದಗ, ಕೊಪ್ಪಳ, ಬಳ್ಳಾರಿ, ರಾಯಚೂರು ಜಿಲ್ಲೆಗಳ ಮೂಲಕ ಆಂಧ್ರಪ್ರದೇಶ ರಾಜ್ಯವನ್ನು ಸೇರುತ್ತದೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಾಂಸ್ಕೃತಿಕ ನೆಲೆಗಳಿಗೆ ಸ್ಪಷ್ಟವಾದ ನೆಲೆಗಟ್ಟನ್ನು ಈ ನದಿಯು ನೀಡಿದೆಂದು ತಿಳಿಯಬಹುದು. ಪ್ರಾಚೀನ ಪೂರ್ವ ಮಾನವನ ಬದುಕಿನ ಬಗೆಗೆ ಮಾಹಿತಿ ನೀಡುವ ಹಲವಾರು ನೆಲೆಗಳು ಸಹ ಈ ಜೀವ ನದಿ ದಂಡೆಯ ಪರಿಸರದಲ್ಲಿ ಆಗಿಹೋಗಿರುವ ಕುರುಹುಗಳು ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳಲ್ಲಿ ದಾಖಲಾಗಿರುವುದನ್ನು ತಿಳಿಯಬಹುದಾಗಿದೆ. ಬಹು ಸಾಂಸ್ಕೃತಿಕ ಆಯಾಮಗಳಿಗೆ ಚೈತನ್ಯವಾಗಿರುವ ತುಂಗಭದ್ರಾ ನದಿ ಪರಿಸರದಲ್ಲಿಯೇ ಜನಪ್ರಸಿದ್ಧಿ ಪಡೆದ ಮೈಲಾರ ಪರಂಪರೆ ಬೆಳೆದು ಬಂದಿದೆ.[೪೯] ಇಂತಹ ಪರಿಸರದಲ್ಲಿ ಅನೇಕ ಶಾಸನಗಳು ಮೈಲಾರ ಪರಂಪರೆಯನ್ನು ತಿಳಿಯಲು ಮಹತ್ವವಾದ ಆಕರ ಸಾಮಗ್ರಿಗಳಾಗಿವೆ. ಪ್ರಮುಖವಾಗಿ ತುಂಗಭದ್ರಾ ನದಿ ಪರಿಸರದಲ್ಲಿ ಮೌರ್ಯರ ಕಾಲದಿಂದ ವಿಜಯನಗರೋತ್ತರ ಕಾಲದವರೆಗೆ ಅನೇಕ ರಾಜಮನೆತನಗಳು ಆಳ್ವಿಕೆ ಮಾಡಿವೆ. ಇವರು ಆಳ್ವಿಕೆ ಮಾಡಿದ ಕುರುಹುಗಳಾಗಿ ದೇವಾಲಯ, ಶಾಸನ, ಮೂರ್ತಿಶಿಲ್ಪಗಳಿವೆ. ಅವುಗಳಲ್ಲದೇ ಚರಿತ್ರೆಯನ್ನು ರಚಿಸಲು ಬಹುಮುಖ್ಯ ಆಕರ ಸಾಮಗ್ರಿಗಳಾಗಿ ಮೌಖಿಕ ಹಾಗೂ ಜಾನಪದ ಆಕರಗಳು ಪೂರಕವಾಗಿವೆ.

ಮೈಲಾರ ದೈವದ ಸಂಪ್ರದಾಯಗಳು, ಆಚರಣೆಗಳು, ಭೌಗೋಳಿಕವಾದ ವಿಸ್ತರಣೆಯು ಗೋದಾವರಿಯಿಂದ ಕಾವೇರಿಯವರೆಗೆ ಹರಡಿಕೊಂಡಿದೆ. ದಕ್ಷಿಣ ಭಾರತದಲ್ಲಿ ನೆಲೆಸಿರುವ ಮೈಲಾರನಿಗೆ ಸಂಬಂಧಿಸಿದ ಅನೇಕ ಕ್ಷೇತ್ರಗಳನ್ನು ಕಾಣಬಹುದು. ವಿಸ್ತಾರವಾಗಿ ಹರಡಿಕೊಳ್ಳಲು ಕಾರಣವೆಂದರೆ ದೈವವೂ ಹೊಂದಿರುವ ಸಮನ್ವತೆಯ ಗುಣಧರ್ಮ, ಜಾತಿ, ಕುಲ, ಮತ, ಧರ್ಮ, ಮೇಲ್ವರ್ಗ ಹಾಗೂ ಕೆಳವರ್ಗ ಎಂಬ ಭೇದವಿಲ್ಲದೆ ಎಲ್ಲಾ ಕಡೆಗೂ ವಿಸ್ತರಿಸಿಕೊಂಡಿದೆ. ಅದಕ್ಕಾಗಿಯೇ ಮೈಲಾರನನ್ನು ಕುರಿತಂತೆ ಎಲ್ಲಾ ಕಾಲಾವಧಿಯಲ್ಲಿ ದಾರ್ಶನಿಕರು ಹಾಡಿ ಹೊಗಳಿದ್ದಾರೆ. ಶಾಸನ ಮತ್ತು ಕಾವ್ಯಗಳಲ್ಲಿ ಕವಿಗಳು ಇಷ್ಟವಾದಂತೆ ಕಟ್ಟಿಕೊಟ್ಟಿದ್ದಾರೆ.[೫೦] ಹೆಚ್ಚಿನ ಸಂಖ್ಯೆಯ ಭಕ್ತರನ್ನು ಹೊಂದಿರುವ ಮೈಲಾರನನ್ನು ವಿದ್ವಾಂಸರು ಶಾಸನ, ದೇವಾಲಯ, ಜಾನಪದ, ಕಾವ್ಯ, ಬುಡಕಟ್ಟು ಹಾಗೂ ಭಾಷಾ ವಿಜ್ಞಾನದ ಮೂಲಕ ಮೈಲಾರನ ಪ್ರಾಚೀನತೆಯನ್ನು ಬಿಡಿಸಲು ಪ್ರಯತ್ನಿಸಿದ್ದಾರೆ. ಮೈಲಾರ ಶಬ್ದವನ್ನು ಮೈಲ ಮತ್ತು ಅರ

ಎಂದು ಬಿಡಿಸಿ ನೋಡಿದ್ದಾರೆ. ಮೈಲ ಎಂಬ ಶಬ್ದವು 'ಮಲೆ' ಎಂಬುದರಿಂದ ಬಂದಿರಬಹುದು. ಮಲೆ ಎಂಬುದಕ್ಕೆ 'ಗುಡ್ಡ' ಅಥವಾ 'ಪರ್ವತ' ಎಂಬ ಅರ್ಥವಿದೆ. ಅದಕ್ಕಾಗಿ ಮೈಲಾರ ಗುಡ್ಡದ ದೇವರು ಹಾಗೂ ಪರ್ವತದಿಂದ ಬಂದಿರಬಹುದು. ಮೈಲಾರನ ಹೆಂಡತಿಯಾದ ಮಾಳಚಿ, ಮಾಳಮ್ಮನನ್ನು ಕುರಿತು ಮಾಳವ್ವ, ಮಾಳಚಿ, ಮಾಲತಿ ಎಂಬ ಹೆಸರುಗಳಿಂದ ಕರೆಯುತ್ತಾರೆ. ಈ ದೇವತೆಯು ಮೂಲ ಎಂಬುದು ಮೈಲ ಎಂದು ಹೇಗಾಯಿತು ಎಂಬುದಾಗಲಿ ಹಾಗೂ 'ಅ' ಕಾರದ ಬಗೆಗೆ ಸ್ಪಷ್ಟವಾದ ವಿವರಣೆ ಸಿಗುವುದಿಲ್ಲ ಎಂದು ಅನುಮಾನ ವ್ಯಕ್ತಪಡಿಸಬಹುದು. ಮೈಲಾರನಿಗೆ ವಸ್ತ್ರ (ಬಟ್ಟೆ) ಮುಖವಾಡವನ್ನು ಹೊದಿಕೆಯಾಗಿ ಹಾಕಿದ್ದರಿಂದ ಮೈಲಾರಿ (ಮೈಲಾಯ) (ವಸ್ತ್ರ), ಮಾರಿ (ಮುಖ) ಎಂಬ ಅಭಿಪ್ರಾಯವನ್ನು ಸಹ ಕಾಣಬಹುದು.[೫೧]

ಮೈಲಾರನನ್ನು ತಮಿಳು ಶಬ್ದ ಮೂಲದಿಂದ ಬಿಡಿಸಲು ಪ್ರಯತ್ನಿಸಲಾಗಿದೆ. ಮಯಿಲ್ (ನವಿಲು) ಎಂಬ ಶಬ್ದವನ್ನು ಆಧಾರವಾಗಿ ತೆಗೆದುಕೊಳ್ಳುತ್ತಾರೆ. ತಮಿಳು ಪ್ರದೇಶ ಪ್ರಸಿದ್ಧವಾದ ಷಣ್ಮುಖ ಹಾಗೂ ಮೈಲಾರನಿಗೆ ಸಂಬಂಧ ಕಲ್ಪಿಸುವುದು ಸರಿಯಾದುದಲ್ಲ. ಮೈಲಾರ ಶಬ್ದದ ಅರ ಎಂಬ ಪದವು ಅರಸ ಎಂಬ ಪದದ ಹೃಸ್ವರೂಪ ಎನ್ನುವುದಕ್ಕೆ ಆಧಾರವಿರುವುದರಿಂದ ಮೈಲಾರಸ, ಮೈಲಾರ ಎಂದು ಆಗಿರಬಹುದು ಎಂದು ಗುರ್ತಿಸಬಹುದಾಗಿದೆ.[೫೨] ಮೈಲಾರನನ್ನು ಕುರಿತಂತೆ ಮರಾಠಿ ಸಾಹಿತ್ಯದಲ್ಲಿ ಮೈಳಾರಿ, ಮಲ್ಲಾರಿ ಎಂದು ಕರೆಯುತ್ತಾರೆ. ಪುರಾಣಗಳಲ್ಲಿ ಮಲ್ಲಾರಿಯನ್ನು ಇಂದ್ರನಿಗೆ ಹೋಲಿಸಲಾಗಿದೆ. ಪರ್ವತ ವಿರೋಧಿಯಾದ ಇಂದ್ರನು ತನ್ನ ವಜ್ರಾಯುಧದಿಂದ ಮಲಯ (ಪರ್ವತ) ವಾಸಿಗಳನ್ನು ನಾಶಪಡಿಸಿ ಆರ್ಯ ಸಂಸ್ಕೃತಿಯನ್ನು ಪ್ರಧಾನವಾಗಿ ತರುವ ಪ್ರಯತ್ನ ಮಾಡಿದ ಆರ್ಯ ದ್ರಾವಿಡ ಪರಂಪರೆಯ ಮೂಲಕ ಮೈಲಾರನನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ.[೫೩] ಮಹಾರಾಷ್ಟ್ರದಲ್ಲಿ ಮೈಲಾರನನ್ನು ಖಂಡೋಬ ಅಥವಾ ಖಂಡೇರಾಯ ಎಂದು ಕರೆಯುತ್ತಾರೆ. ಈ ಪದದ ನಿಷ್ಪತ್ತಿಯನ್ನು ಖಡ್ಗ ಹಾಗೂ ಖಂಡೆ ಎಂಬ ಅರ್ಥವನ್ನು ನೀಡುತ್ತಾರೆ. ಖಂಡೋಬಾ ಒಬ್ಬ ವೀರದೇವತೆ ಅಲ್ಲದೇ ಅವನೊಬ್ಬ ಐತಿಹಾಸಿಕ ವ್ಯಕ್ತಿ ಎಂಬ ನಂಬಿಕೆಗಳಿವೆ. ಕ್ರಿ.ಶ. ೭ನೇ ಶತಮಾನದಲ್ಲಿ ಈ ವ್ಯಕ್ತಿ ಇದ್ದಿರಬಹುದಾದ ಸಾಧ್ಯತೆ ಇದೆ ಎಂಬ ವಿವರಗಳಿವೆ. ಅದೇ ವೇಳೆಗೆ ಅವನೊಬ್ಬ ಐತಿಹಾಸಿಕ ವ್ಯಕ್ತಿ ದೈವತ್ವವನ್ನು ಪಡೆದುದರ ಬಗೆಗೆ ಆಧಾರಗಳಿಲ್ಲ ಎಂಬ ನಂಬಿಕೆಗಳಿವೆ.[೫೪]

ಮೈಲಾರ ಸಂಬಂಧವನ್ನು ಗೋವಾ ಪ್ರದೇಶಗಳ ಮೂಲಕ ಎಲ್ಲಾ ಕಡೆ ಹರಡಿಕೊಂಡಿರುವ ಸಾಧ್ಯತೆ ಇದೆ ಎಂದು ವಿದ್ವಾಂಸರಾದ ಜಿ.ಎಚ್. ಖರೇ ಅವರು ಅಭಿಪ್ರಾಯಪಡುತ್ತಾರೆ. ಏಕೆಂದರೆ ಗೋವಾ ಪ್ರದೇಶಗಳಲ್ಲಿರುವ ಸಪ್ತಕೋಟೆಶ್ವರ ದೇವಾಲಯಗಳು ಕದಂಬರ ಕಾಲದಲ್ಲಿ ನಿರ್ಮಾಣವಾಗಿ ಆರಾಧನೆಗೊಳಪಟ್ಟಿವೆ. ಈ

ಪ್ರದೇಶದಲ್ಲಿ ಸಪ್ತ ಹಾಗೂ ಏಳುಕೋಟಿ ಎಂಬುದು ಮೈಲಾರನಿಗೆ ಸಂಬಂಧಪಟ್ಟಿರುವುದರಿಂದ ಗೋವಾದ ಕದಂಬರ ಕಾಲದಿಂದ ಈ ಪರಂಪರೆ ಹರಡಿರುವ ಸಾಧ್ಯತೆ ಇದೆ ಎಂದು ಜಿ.ಎಚ್. ಖರೇ ಅವರ ಅಭಿಪ್ರಾಯ. ಆದರೆ ಈ ಕಾಲಾವಧಿಯ ಮುಂಚೆಯೇ ಕರ್ನಾಟಕ ಹಾಗೂ ಕನ್ನಡ ಶಾಸನಗಳಲ್ಲಿ ಏಳುಕೋಟಿ, ಎಕ್ಕೋಟಿ, ಉಲ್ಲೇಖಗಳು ಕಂಡುಬರುವುದರಿಂದ ಗೋವಾ ಪ್ರದೇಶದಿಂದ ಹರಡಿರುವ ಸಾಧ್ಯತೆ ತೀರ ಕಡಿಮೆ ಎಂದು ವಿದ್ವಾಂಸರಾದ ರಾಂ.ಚಿ. ಢೇರೆಯವರ ಅಭಿಪ್ರಾಯವಾಗಿದೆ.[೫೫]

ವೇದ ಪೂರ್ವ ಕಾಲೀನ ಆಧಾರಗಳನ್ನು ಇಟ್ಟುಕೊಂಡು, ಮಧ್ಯಯುಗದಲ್ಲಿ ನಡೆದಿರುವ ಮಣಿಮಲ್ಲರ ಕಡೆಗೆ ತಮ್ಮ ಚರ್ಚೆಯನ್ನು ವಿದ್ವಾಂಸರಾದ ಶಂ.ಬಾ. ಜೋಶಿ ಹಾಗೂ ಪಾಂಡುರಂಗದೇಸಾಯಿಯವರು ಈ ರೀತಿಯ ಅಭಿಪ್ರಾಯಕ್ಕೆ ಬರುತ್ತಾರೆ. ಋಷಿಗಳ ಕರೆಗೆ ಓಗೊಟ್ಟು ಇಂದ್ರನು ಹೇಗೆ ಆರ್ಯ ಸಂಸ್ಕೃತಿಯನ್ನು ರಕ್ಷಿಸಿದ ಹಾಗೆ ಮಧ್ಯಯುಗದಲ್ಲಿ ಇಂದ್ರನು ಮೈಲಾರನ ರೂಪದಲ್ಲಿ ಅವತರಿಸಿ ಮಣಿಮಲ್ಲಸುರ ರಾಕ್ಷಸರನ್ನು ಸಂಹರಿಸಿದ.[೫೬] ಈ ಅಭಿಪ್ರಾಯಕ್ಕೆ ಉತ್ತರವಾಗಿ ವಿದ್ವಾಂಸರಾದ ಎಂ.ಎಂ. ಕಲಬುರ್ಗಿಯವರು ಮಲ್ಲಾರಿ ಮಹಾತ್ಮೆಯ ಉಲ್ಲೇಖ ಶಿವನ ವಾಹನ ನಂದಿಯೇ ಆಗಿತ್ತು. ಯುದ್ಧದಲ್ಲಿ ಸೋತ ಮಣಿ-ಮಲ್ಲರು ಶಿವನಲ್ಲಿ ಬೇಡಿಕೆಯ ಮೇರೆಗೆ ಕುದುರೆಯನ್ನಾಗಿ ಮಣಿಯನ್ನು ಮಾಡಿಕೊಳ್ಳುತ್ತಾನೆ. ಇದಕ್ಕಾಗಿ ಭೈರವ ಅಥವಾ ಮಾರ್ತಂಡ ಭೈರವ ಎಂದು ಕರೆಯುವ ಉಲ್ಲೇಖಗಳಿವೆ. ಅದಕ್ಕಾಗಿ ಮೈಲಾರ ವಾಹನಗಳು ಕುದುರೆ ಹಾಗೂ ನಾಯಿಗಳು ಕಂಡುಬರುತ್ತವೆ. ಆದ್ದರಿಂದ ಕುದುರೆ ಮತ್ತು ನಾಯಿ ಇಂದ್ರನಿಗೆ ಸಂಬಂಧವಿಲ್ಲ ಮೂಲತಃ ಪಶುಪಾಲಕರ ದೇವತೆಯಾಗಿರುವ ಮೈಲಾರನು ಪಶುಪಾಲಕರ ದೈವವಾಗಿ ಮಾರ್ತಂಡ ಭೈರವನಾಗಿ ಹಾಗೂ ಐತಿಹಾಸಿಕ ವೀರನಾಗಿ ಕಂಡುಬರುತ್ತಾನೆ.[೫೭] ಹಾಗಾಗಿ ಎಲ್ಲಾ ಜನಮನದಲ್ಲೂ ಜನಪದ ದೈವವಾಗಿ ಗುರುತಿಸಿಕೊಂಡು ಸಾಂಸ್ಕೃತಿಕವಾದ ಆಚರಣೆಗೆ ಒಳಪಟ್ಟಿದ್ದಾನೆ. ಮಧ್ಯಕಾಲೀನ ಮುಸ್ಲಿಂ ಆಳ್ವಿಕೆ ಕಾಲದ ಹೆಸರುಗಳಾದ ಮೈಲಾರನನ್ನು ಗುರುತಿಸಲಾಗುತ್ತದೆ. ಮೆಂಗನಾಥ, ಮಲ್ಲುಖಾನ ಮತ್ತು ಅಜಮತಖಾನ ಎಂದು ಕರೆಯುವುದರಿಂದ ಔರಂಗಜೇಬನು ಮಹಾರಾಷ್ಟ್ರದ ಜೆಜೂರಿಯ ಮೇಲೆ ಯುದ್ಧ ಮಾಡಿರುವ ಸಲುವಾಗಿ ಬಂದಿರಬಹುದು. ಮೈಲಾರ ಪ್ರಚಾರತೆಯನ್ನು ಕಂಡ ಔರಂಗಜೇಬನು ಈ ದೈವಕ್ಕೆ ಅಪಾರವಾದ ಧನವನ್ನು ನೀಡಿರಬಹುದು.[೫೮]

ಕ್ರಿ.ಶ. ೧೪ನೇ ಶತಮಾನದ ಆನಂದಗಿರಿಯ ಶಂಕರ ವಿಜಯದಲ್ಲಿರುವ ಮೈಲಾರ ದೈವದ ಬಗೆಗೆ ಉಲ್ಲೇಖವಿದೆ. ಈ ಸಾಹಿತ್ಯ ಕೃತಿಯಲ್ಲಿರುವ ಅಂಶವೆಂದರೆ ಅದ್ವೈತ ಸಿದ್ಧಾಂತ ಪ್ರತಿಪಾದಕ ಶಂಕರಾಚಾರ್ಯರು ಮೈಲಾರನ ಭಕ್ತರು ಸಲ್ಲಿಸುತ್ತಿದ್ದ ಹರಿಕೆಯನ್ನು ಬದಲಾವಣೆಯನ್ನು ಮಾಡಿಕೊಳ್ಳುವ ತಿಳಿವಳಿಕೆಯನ್ನು ಮೈಲಾರನ ಭಕ್ತ ಸಮುದಾಯಕ್ಕೆ

ಹೇಳಿದರು ಎಂಬ ಉಲ್ಲೇಖವಿದೆ. ಆದುದರಿಂದ ಈ ಸಾಹಿತ್ಯ ಕೃತಿ ಅಂಶವೆಂದರೆ, ಶಂಕರಾಚಾರ್ಯರ ಕಾಲಮಾನ ೮ನೇ ಶತಮಾನ ಮೈಲಾರನ ವ್ಯಾಪಕತೆಯು ೮ನೇ ಶತಮಾನದಿಂದ ನಾಡಿನಾದ್ಯಂತ ಹರಡಿರುವ ಸಾಧ್ಯತೆ ಇದೆ.[೫೯]

ಮೈಲಾರನ ಪ್ರಾಚೀನತೆಯನ್ನು ತಿಳಿಸುವ ಶಾಸನಗಳು ನಮಗೆ ಕ್ರಿ.ಶ. ೧೦ನೇ ಶತಮಾನದ ಅವಧಿಯಿಂದಲು ದೊರೆಯುತ್ತವೆ. ೧೦ನೇ ಶತಮಾನದಿಂದ ವಿಜಯನಗರೋತ್ತರ ಕಾಲದವರೆಗೆ ಮೈಲಾರನಿಗೆ ಸಂಬಂಧಿಸಿದ ಅನೇಕ ಶಾಸನಗಳು ಕರ್ನಾಟಕದ ಬಹು ಭಾಗಗಳಲ್ಲಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಮೈಲಾರ ಎಂಬ ಪದದಿಂದ ಆರಂಭವಾಗುವ ಸ್ಥಳನಾಮಗಳು, ವ್ಯಕ್ತಿನಾಮಗಳು, ನಮಗೆ ದೊರೆಯುತ್ತವೆ. ಈ ಉಲ್ಲೇಖಗಳು ನಮಗೆ ಸುಮಾರು ೧೦ನೇ ಶತಮಾನದಿಂದಲೇ ಕಾಣಬರುತ್ತವೆ. ಕರ್ನಾಟಕದಾದ್ಯಂತ ಇರುವ ಶಾಸನಗಳಲ್ಲಿ ಮಯಿಲ, ಮಯಿಲನಹಳ್ಳಿ, ಮಯಿಲಾರ, ಮಯ್ಲಾರ, ಮೈಲಾರ ಎಂದು ಸ್ಥಳನಾಮಗಳ ಉಲ್ಲೇಖವುಂಟು. ಮಯಿಲಸೆಟ್ಟಿ, ಮಯಿಲೆನಾಯಕ ಮಯಿಲಪ್ಪ, ಮೈಲಾರಸ, ಮೈಲಾರಭಟ್ಟ, ಮೈಲಾರ ಭಟ್ಟೋಪಾಧ್ಯಾಯ, ಮೈಲಾರಯ್ಯ, ಮೈಲಾರಾಧ್ಯ ಎಂಬ ಉಲ್ಲೇಖಗಳು ವ್ಯಕ್ತಿನಾಮಗಳನ್ನು ಸೂಚಿಸುತ್ತವೆ. ಇವೆಲ್ಲವೂ ಮೈಲಾರ ಅಥವಾ ಮೈಲಾ ಎಂಬ ಪದದ ಮೂಲವನ್ನು ಸೂಚಿಸುತ್ತವೆ. ಮೈಲಾರ ಎಂಬ ಶಬ್ದಕ್ಕೆ ಕನ್ನಡ ನಿಘಂಟುಗಳಲ್ಲಿ ಕಿಲುಬು, ಕಪ್ಪು ಎಂಬ ಅರ್ಥವುಂಟು.[೬೦] ಮೈಲಾರನಿಗೆ ಸಂಬಂಧಿಸಿದಂತೆ ಪ್ರಾಚೀನತೆಯನ್ನು ವ್ಯಕ್ತಿನಾಮಗಳಿಂದ ತಿಳಿಯಬಹುದು. ಪ್ರಾಚೀನವಾಗಿ ಮೈಲಾರನಿಗೆ ಸಂಬಂಧಿಸಿದ ವ್ಯಕ್ತಿನಾಮವೆಂದರೆ, ಕ್ರಿ.ಶ. ೧೧೦೭ರ ಮಹಾರಾಷ್ಟ್ರದ ಉಸ್ಮಾನ್‌ಬಾದ್ ಜಿಲ್ಲೆಯ ಉಮರ್ಗಾ ತಾಲ್ಲೂಕಿನ ದಾಳಿಂಬಾದ ಶಾಸನದಲ್ಲಿ 'ಮೈಲಾರ ಭಟ್ಟೋಪಾಧ್ಯಾಯ ಎಂಬ ಉಲ್ಲೇಖವೂ ದಾಖಲಾಗಿದೆ. ಇದು ಪ್ರಾಯಶಃ ಅತ್ಯಂತ ಪ್ರಾಚೀನ ಉಲ್ಲೇಖವಾಗಿದೆ.[೬೧] ಈ ಶಾಸನವು ಕಲ್ಯಾಣ ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದು, ಆತನ ಅಧಿಕಾರಿ ಮಹಾಮಂಡಳೇಶ್ವರ ಅಹವಮಲ್ಲರಸ ದಾಳಿಂಬಾದಿಂದ ರಾಜ್ಯಭಾರ ಮಾಡುತ್ತಿದ್ದ. ಆತ ದಾಳಿಂಬಾದಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ ದತ್ತಿ ನೀಡಿದ ಉಲ್ಲೇಖವನ್ನು ಕಾಣುತ್ತೇವೆ. ಇದೇ ರೀತಿಯ ವ್ಯಕ್ತಿನಾಮ ಉಲ್ಲೇಖವಿರುವ ಶಾಸನವೆಂದರೆ ಕ್ರಿ.ಶ. ೧೧೪೮ರ ಕರ್ನೂಲು ಜಿಲ್ಲೆ, ಆದೋನಿ ತಾಲೂಕಿನ ಕರಕಾಂತಪುರ ಶಾಸನದಲ್ಲಿ ಛಂದೋಗ ಮೈಲಾರ ಭಟ್ಟೋಪಾಧ್ಯಾಯರು ಹಾಗೂ ಮೈಲಾರ ಭಟ್ಟರ ಉಲ್ಲೇಖಗಳಿವೆ.[೬೨] ಈ ಶಾಸನಗಳಿಂದ ತಿಳಿದುಬರುವ ಅಂಶವೆಂದರೆ ಕ್ರಿ.ಶ. ೧೦-೧೧ನೇ ಶತಮಾನದ ವೇಳೆಗೆ ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡು ಮೈಲಾರಭಟ್ಟ, ಮೈಲಾರಾಧ್ಯ, ಮೈಲಾರ ಭಟ್ಟೋಪಾಧ್ಯಾಯ ವ್ಯಕ್ತಿನಾಮಗಳು ಬ್ರಾಹ್ಮಣರಲ್ಲೂ ಮೈಲಾರನ ಆರಾಧನೆ ಇತ್ತು ಎಂಬುದನ್ನು ಸೂಚಿಸುತ್ತದೆ. ಇನ್ನು ಕೆಲವು ಶಾಸನಗಳಲ್ಲಿ ಏಳುಕೋಟಿ[೬೩], ಏಳ್ಕೋಟಿ ತಪೋಧನರು[೬೪], ಏಳ್ಕೋಟಿ ಊಕ್ತ[೬೫], ಏಳ್ಕೋಟಿ

ಮಹಾದೇವ[೬೬] ಎಂಬ ಉಲ್ಲೇಖಗಳಿಂದ ಮೈಲಾರನ ಪ್ರಾಚೀನತೆಯನ್ನು ಗುರ್ತಿಸಬಹುದು. ಎಕ್ಕೋಟಿ ಜಿನಾಲಯ, ಎಕ್ಕೋಟಿ, ಏಳುಕೋಟಿ, ಸಪ್ತನಾಥದೇವ, ಉಲ್ಲೇಖಗಳು ದೊರೆಯುವುದರಿಂದ ಕ್ರಿ.ಶ. ೧೨ನೇ ಶತಮಾನದಲ್ಲಿ ಬ್ರಾಹ್ಮಣರು ಕಟ್ಟಿಸಿದ ಜಿನಾಲಯಗಳು ಎಂಬುದಾಗಿ ಕರೆಯಬಹುದು.[೬೭] ಬ್ರಾಹ್ಮಣರು ಈ ವೇಳೆಗಾಗಲೇ ಮೈಲಾರನಿಗೆ ಆರಾಧನೆ ಮಾಡುತ್ತಿದ್ದು ಅನೇಕ ಜಿನಾಲಯಗಳನ್ನು ಕಟ್ಟಿಸಿದ ಬಗೆಗೆ ಈ ಶಾಸನ ಉಲ್ಲೇಖಗಳು ಹೆಚ್ಚು ಪುಷ್ಠಿಯನ್ನು ನೀಡುತ್ತವೆ. ಮೈಲಾರನಿಗೆ ಸಂಬಂಧಿಸಿದಂತೆ ಅನೇಕ ಶಾಸನಗಳ ಉಲ್ಲೇಖಗಳು ನಮಗೆ ದೊರೆಯುತ್ತವೆ. ಉಲ್ಲೇಖಗಳಲ್ಲಿ ಮೈಲಾರ ದೇವಾಲಯ, ಮೈಲಾರ, ಮಾಳಚಿ, ಏಳುಕೋಟಿ ತಪೋಧನರು, ಮೈಲಾರಶಕ್ತಿ ಹಾಗೂ ಮೈಳಲದೇವಿ ಎಂಬ ಉಲ್ಲೇಖಗಳಿಂದ ಈ ದೈವದ ಪ್ರಾಚೀನತೆಯನ್ನು ಕ್ರಿ.ಶ. ೧೦ನೇ ಶತಮಾನಕ್ಕೆ ಕೊಂಡೊಯ್ಯಬಹುದು.

ಕ್ರಿ.ಶ. ನಾಲ್ಕನೆಯ ಶತಮಾನದ ಮರಾಠಿ ದಾಖಲೆಗಳಲ್ಲಿ ಮೈಲಾರ>ಖಂಡೋಬಾ ಮತ್ತು ಬೀರೋಬ ಆರಾಧನೆಯನ್ನು ದಾಖಲಿಸಲಾಗಿದೆ. ಶ್ರೀ ತ್ರ್ಯಂ.ಗಂ. ಧನೇಶ್ವರರು 'ವೆಳೂರಚಿ ಲೇಣಿ' ಎಂಬ ಕೃತಿಯಲ್ಲಿ ಖಂಡೇರಾಯ (ಮೈಲಾರ) ಎಂಬ ಉಲ್ಲೇಖ ಕ್ರಿ.ಶ. ೬೨೦ರಲ್ಲಿ ಇದ್ದದ್ದನ್ನು ಪ್ರಸ್ತಾಪಿಸುತ್ತಾರೆ. ಕ್ರಿ.ಶ. ೬೨೦ರ 'ವೆಳೂರಚಿ ಲೇಣಿ' ಕೃತಿಯ ಉಲ್ಲೇಖ ಬೌದ್ಧ ವಿರೋಧಿಯಾದ ಧನಗರ ವೀರನಿರಬಹುದು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೬೮] ಈ ರೀತಿಯ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದಾಗ ಕ್ರಿ.ಶ. ೧–೨ನೇ ಶತಮಾನದಿಂದಲೇ ಮೈಲಾರನ ಗುರುತು ಇದ್ದದ್ದು ಗೋಚರಿಸುತ್ತದೆ. ಹಲವಾರು ರಾಜಮನೆತನಗಳ ಆಳ್ವಿಕೆಯ ಕಾಲಾವಧಿಯಲ್ಲಿ ಮೈಲಾರನ ಸ್ಪಷ್ಟ ಉಲ್ಲೇಖಗಳು ದೊರೆಯದೇ ಇದ್ದರು ರಾಷ್ಟ್ರಕೂಟರ ಕಾಲದ ಹೊತ್ತಿಗೆ ಮೈಲಾರ ಹೆಚ್ಚು ಪ್ರಚಾರತೆಯನ್ನು ಪಡೆದುಕೊಂಡಿದೆ ಎಂದು ಊಹಿಸಬಹುದು. ಮೈಲಾರನಿಗೆ ಸಂಬಂಧಿಸಿದ ಚಾರಿತ್ರಿಕ ಅಂಶಗಳಾದ ಶಾಸನಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇಂತಹ ಶಾಸನಗಳನ್ನು ವಿವೇಚಿಸುವ, ವಿಮರ್ಶಿಸುವ ಹಾಗೂ ಆ ಶಾಸನಗಳಿಂದ ಈ ಪರಂಪರೆಯ ಚರಿತ್ರೆಯನ್ನು ಗುರ್ತಿಸುವಲ್ಲಿ ಅನೇಕ ವಿದ್ವಾಂಸರು ಕೆಲಸ ಮಾಡಿದ್ದಾರೆ. ಕರ್ನಾಟಕದಲ್ಲಿ ಕಂಡುಬರುವ ಮೈಲಾರನಿಗೆ ಸಂಬಂಧಿಸಿದ ಪ್ರಮುಖ ಶಾಸನಗಳ ಉಲ್ಲೇಖಗಳನ್ನು ಚರ್ಚಿಸುವ ಹಾಗೂ ಅದರಲ್ಲಿರುವ ಮಹತ್ವವಾದ ಅಂಶಗಳನ್ನು ತಿಳಿಸುವ ಪ್ರಯತ್ನ ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

ಮೈಲಾರ ಪರಂಪರೆ ಹಾಗೂ ಮೈಲಾರ ಉಲ್ಲೇಖಗಳು ಹೆಚ್ಚಾಗಿ ಕಂಡುಬರುವುದು ಕ್ರಿ.ಶ. ೧೦ನೇ ಶತಮಾನದಿಂದ. ಈ ಶಾಸನಗಳಿಂದ ಮೈಲಾರನ ಆರಾಧನೆಯು ೮–೯ನೇ ಶತಮಾನದಲ್ಲಿ ಇದ್ದಿರಬಹುದು ಎಂಬುದನ್ನು ಊಹಿಸುವುದಕ್ಕೆ ಅವಕಾಶಗಳಿವೆ. ಕಾಲಾನಂತರದಲ್ಲಿ ಅನೇಕ ಸಾಹಿತ್ಯಿಕ ಕೃತಿಗಳಲ್ಲಿ, ಶಾಸನಗಳಲ್ಲಿ, ದೇವಾಲಯ ಹಾಗೂ

ಮೂರ್ತಿಗಳ ರೂಪದಲ್ಲಿ ಅವು ಹೊಂದಿ ಆರಾಧನೆ ಸ್ವರೂಪ ಪಡೆದುಕೊಂಡು ಹೆಚ್ಚಿನ ಪ್ರಚಾರ ಪಡೆಯಿತು.

ಗದಗ ತಾಲ್ಲೂಕಿನ ಕೋಟವುಮುಚ್ಗಿಯ ಕಲ್ಲೇಶ್ವರ ದೇವಾಲಯದ ಮುಂದೆ ಇರುವ ಶಾಸನ ಕ್ರಿ.ಶ. ೧೦೧೨ರ ಶಾಸನವೂ ಕಲ್ಯಾಣ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯ ಆಳುತ್ತಿರುವಾಗ ಅವನ ಸಾಮಂತಾಧಿಪತಿ ದಂಡನಾಯಕ, ಕೇಶವಯ್ಯ ಬೆಳ್ವೊಲ-೩೦೦, ಪುಲಿಗೆರೆ-೨೦೦ ಆಳುತ್ತಿದ್ದನು. ಈ ಸಮಯದಲ್ಲಿ ತನ್ನ ಚಕ್ರವರ್ತಿ ವಿಕ್ರಮಾದಿತ್ಯನಿಗೆ ಪ್ರಾರ್ಥಿಸಿ ರೋಣದ ಮೌನರ ಶ್ರೀಧರಭಟ್ಟರಿಗೆ ಹನ್ನೆರಡು ಮತ್ತರ ಭೂಮಿಯನ್ನು ಉಮ್ಮಚಿಗೆಯನ್ನು ಅಗ್ರಹಾರವಾಗಿ ಪಡೆದು ಎಕ್ಕೋಟಿ ತಪೋಧನರ ಭೋಜನಕ್ಕಾಗಿ ಕೊಟ್ಟನೆಂದು ಉಲ್ಲೇಖಿಸುತ್ತದೆ.[೯] 'ಏಳುಕೋಟಿ' ಶಬ್ದವು ಮೈಲಾರನ ಉಪಾಸಕರಿಗೆ ಸಂಬಂಧಿಸಿದ್ದು. ಏಳುಕೋಟಿ ತಪೋಧನರೆಂದರೆ ಮೈಲಾರನ ಉಪಾಸಕರು ಎಂಬುದು ವಿದ್ವಾಂಸರಾದ ಖರೇ ಅವರ ತರ್ಕವಾಗಿದೆ.[೨೦] ಪ್ರಾಚೀನವಾಗಿ ಮೈಲಾರನಿಗೆ ಸಂಬಂಧಿಸಿದ ಶಾಸನ ಕೋಟವುಮುಚ್ಗಿ ಶಾಸನವಾಗಿದೆ. ಈ ಶಾಸನದಲ್ಲಿ ಏಳುಕೋಟಿ, ತಪೋಧನರು ಎಂಬ ಉಲ್ಲೇಖಗಳಿಂದ ಕಂಡುಬರುವ ಅಂಶಗಳೆಂದರೆ, ಮೈಲಾರನ ಆರಾಧನೆ ಹಾಗೂ ಪ್ರಚಾರತೆ ಈ ವೇಳೆಗಾಗಲೆ ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಳ್ಳುತ್ತಾ ಸಾಗಿತು ಎಂದು ಊಹಿಸಬಹುದು.

ತುಂಗಭದ್ರಾ ನದಿ ಪರಿಸರದಲ್ಲಿ ಪ್ರಾಚೀನವಾಗಿ ಮೈಲಾರ ಪರಂಪರೆಗೆ ಸಂಬಂಧಿಸಿದ ಶಾಸನ ತೆಕ್ಕಲಕೋಟೆಯ ಹರಿವಿನಮಲ್ಲಯ್ಯ ದೇವಾಲಯದಲ್ಲಿರುವ ಶಾಸನ. ಕ್ರಿ.ಶ. ೧೦೧೭ರಲ್ಲಿ ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲನು ಆಳುತ್ತಿರುವಾಗ ಅವನ ಸಾಮಂತ ಅರಸ ಇರುವ ನೊಳಂಬನು ನೊಳಂಬವಾಡಿ ೩೨,೦೦೦ವನ್ನು ಆಳುತ್ತಿರುವಾಗ ಬಲ್ಲಕುಂದೆ ಮೂರುನೂರರ ಹಗರೀಯತಡಿಯ ಸಿರಿಯನೂರನ್ನು ಶ್ರೀಮತ್ ಮೈಲಾರ ದೇವರಿಗೆ ದತ್ತಿ ಬಿಡಲಾಗಿದೆ.[೨೧] ಈ ಶಾಸನದಿಂದ ಪ್ರಾಚೀನವಾಗಿ ಮೈಲಾರನಿಗೆ ಹಾಗೂ ಮೈಲಾರ ದೇವರಿಗೆ ದತ್ತಿ ನೀಡಿದ ಉಲ್ಲೇಖ ಸಿಗುವ ಶಾಸನ ಇದಾಗಿದೆ. ಕಲ್ಯಾಣ ಚಾಲುಕ್ಯ ಸಾಮಂತ ಅರಸರಾದ ನೊಳಂಬರ ಕಾಲದಲ್ಲಿ ನಿರ್ಮಾಣವಾದ ತೆಕ್ಕಲಕೋಟೆ ಹರಿವಿನ ಮಲ್ಲಯ್ಯ ದೇವಾಲಯದ ಶಾಸನವನ್ನು ಕುರಿತಂತೆ ಅನೇಕ ಚರ್ಚೆಗಳು ನಡೆದಿವೆ. ಶಾಸನಗಳಲ್ಲಿ ಪ್ರಮುಖ ಪಾತ್ರ ವಹಿಸಿರುವ ಈ ಶಾಸನವು ಕ್ರಿ.ಶ. ೧೦ನೇ ಶತಮಾನದಲ್ಲಿಯೇ ಮೈಲಾರ ಸಂಪ್ರದಾಯ ಹಾಗೂ ದೈವತ್ವವೂ ಹೂವಿನ ಹಡಗಲಿ ಮೈಲಾರ ಸುತ್ತಮುತ್ತಲಿನ ವಿಸ್ತಾರ ಪರಿಸರದಲ್ಲಿ ವ್ಯಾಪಕಗೊಂಡಿರುವ ಸೂಚನೆಯನ್ನು ಮಲ್ಲಯ್ಯನ ಗುಡ್ಡದ ಶಾಸನದ ಹಿನ್ನೆಲೆಯಲ್ಲಿ ಗುರ್ತಿಸಬಹುದಾಗಿದೆ. ತೆಕ್ಕಲಕೋಟೆಯ ಮಲ್ಲಯ್ಯ ಗುಡ್ಡದ ಶಾಸನದ ವಿಷಯವು ಚರ್ಚಾ ವಿಷಯವಾಗಿದೆ. ಮಲ್ಲಯ್ಯ ಗುಡ್ಡದಲ್ಲಿರುವ ಮೈಲಾರ ದೇವರು

ಹೂವಿನಹಡಗಲಿ ಮೈಲಾರ ಗ್ರಾಮದಲ್ಲಿರುವ ಮೈಲಾರನಿಗಿಂತ ಪೂರ್ವದವನೇ? ಅಥವಾ ಮೈಲಾರ ಸಂಪ್ರದಾಯಕ್ಕಿಂತ ಮೊದಲೇ ಹುಟ್ಟಿಕೊಂಡಿರುವುದೇ ಎಂಬ ಸಂಶಯ ಹುಟ್ಟಿಕೊಳ್ಳುತ್ತದೆ. ಈ ಅಂಶವನ್ನು ಇಟ್ಟುಕೊಂಡು ವಿವೇಚಿಸುವುದಾದರೆ ಕ್ರಿ.ಶ. ೯-೧೦ನೇ ಶತಮಾನದಲ್ಲಿ ಹೂವಿನಹಡಗಲಿ ಮೈಲಾರ ಗ್ರಾಮದಲ್ಲಿಯೇ ಮೊದಲು ಈ ದೈವವೂ ವಿಸ್ತಾರವಾಗಿದೆ. ಕಾರಣಾಂತರಗಳಿಂದ ದಾಖಲಾಗದೆ ಹಾಗೇ ಉಳಿದಿದೆ. ನಂತರದ ಕಾಲಾವಧಿಯಲ್ಲಿ ಮಲ್ಲಯ್ಯಗುಡ್ಡದಲ್ಲಿ ಮೈಲಾರನನ್ನು ಸ್ಥಾಪಿಸುವ ಮೂಲಕ ಮೈಲಾರ ಪರಂಪರೆಯ ವ್ಯಾಪಕತೆಯನ್ನು ಹೆಚ್ಚಿಸಿರಬಹುದು.[೨] ತುಂಗಭದ್ರಾ ನದಿಯು ಹರಿಯುವ ದಿಕ್ಕಿನ ಕಡೆ ಈ ಪರಂಪರೆಯು ವಿಸ್ತಾರತೆಯನ್ನು ಪಡೆದುಕೊಂಡು ನಾಡಿನ ತುಂಬೆಲ್ಲಾ ಹರಡಿರುವ ಸಾಧ್ಯತೆ ಇದೆ ಎಂದು ವಿದ್ವಾಂಸರಾದ ರಮೇಶ ನಾಯಕ ಅವರ ಅಭಿಪ್ರಾಯವಾಗಿದೆ. ತುಂಗಭದ್ರಾ ತೀರದಲ್ಲಿ ಹಂಪಿ ಪ್ರಮುಖವಾದ ಧಾರ್ಮಿಕ ಕ್ಷೇತ್ರವಾಗಿದೆ. ಈ ಪರಿಸರದ ಪ್ರಮುಖ ಆರಾಧ್ಯ ದೈವ ವಿರೂಪಾಕ್ಷ. ಆದರೆ ಶಾಸನಗಳ ಉಲ್ಲೇಖದಂತೆ ಮೈಲಾರ ಅಥವಾ ಮಹಾಕಾಳದೇವ ಈ ಪರಿಸರದ ಪ್ರಮುಖ ದೇವತೆಯಾಗಿದ್ದು, ಕ್ರಿ.ಶ. ೧೦ಳಳರ ಹಂಪಿ ಹತ್ತಿರದಲ್ಲಿರುವ ಗೋನಹಾಳು ಶಾಸನ ಪಂಪಾತೀರ್ಥದ ಮಹಾಕಾಳ ದೇವರೆಂದು ಉಲ್ಲೇಖಿಸುತ್ತದೆ. ಕಲ್ಯಾಣ ಚಾಲುಕ್ಯ ಅರಸ ಐದನೆಯ ವಿಕ್ರಮಾದಿತ್ಯನ ಕಾಲದಲ್ಲಿ ಅವನ ಸಾಮಂತ ಅರಸ ಇರುವ ನೊಳಂಬ ಮತ್ತು ಅವನ ಪತ್ನಿಯು ಪಂಪತೀರ್ಥದ ಮಹಾಕಾಳ ದೇವರಿಗೆ ದಾನ ಬಿಟ್ಟಿದ್ದಾರೆ. ಇದರಿಂದ ನೊಳಂಬರ ಕಾಲದಲ್ಲಿ ಮಹಾಕಾಳ ಮತ್ತು ಮೈಲಾರನ ಆರಾಧನೆ ಈ ಪರಿಸರದಲ್ಲಿ ಪೂರ್ಣ ಸ್ವರೂಪವನ್ನು ಪಡೆದುಕೊಂಡಂತೆ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ನೊಳಂಬರ ಆರಾಧ್ಯ ದೈವವಾದ ಮಹಾಕಾಳ ದೇವರು ಮತ್ತು ಮೈಲಾರದೇವರು ಒಬ್ಬನೇಯಾಗಿರಬೇಕು. ಆದ್ದರಿಂದ ಮೈಲಾರನಿಗೆ ಮಾರ್ತಂಡ ಭೈರವನೆಂದು ಹೆಸರು ಪ್ರಾಪ್ತವಾಗಿದೆ. ಗೋನಹಾಳು ಶಾಸನ ಪಂಪಾತೀರ್ಥದ ಮಹಾಕಾಳ ದೇವರೆಂದು ಉಲ್ಲೇಖ ನೀಡುವುದರಿಂದ ನೊಳಂಬರ ಆಡಳಿತಕ್ಕೆ ಒಳಪಟ್ಟಿದ್ದ ಹಂಪಿಯಲ್ಲಿ ಮೈಲಾರನ ಆರಾಧನೆಯು ನಡೆದುಬಂದಿದೆ.[೭೩] ತುಂಗಭದ್ರಾ ನದಿಯ ವಿರುದ್ಧ ದಿಕ್ಕಿನಲ್ಲಿ ಈ ಪರಂಪರೆಯು ಹರಡಿಕೊಂಡು ಶ್ರೀಶೈಲದಿಂದ ಆರಂಭವಾದ ಕಾಳಭೈರವ ಅಥವಾ ಮೈಲಾರ ಪರಂಪರೆ ಹಾಗೂ ನಂಬಿಕೆ ಆಚರಣೆಗಳು ತುಂಗಭದ್ರಾ ನದಿಯುದ್ದಕ್ಕೂ ಕಾಣಿಸುತ್ತವೆ. ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ದಕ್ಷಿಣ ಭಾರತದ ಸ್ಥಳಗಳಲ್ಲಿ ಅನೇಕ ರೂಪಾಂತರಗಳಾದವು. ಶ್ರೀಶೈಲವು ಮಲ್ಲಯ್ಯನ ಪ್ರಮುಖವಾದ ಆರಾಧನಾ ಸ್ಥಳ. ಶ್ರೀಶೈಲ ಮೂಲದಿಂದ ಆರಂಭವಾದ ಭೈರವ, ವೀರಭದ್ರ ಹಾಗೂ ಮೈಲಾರ ಪರಂಪರೆಯ ಉಪಶಾಖೆಗಳು ಶ್ರೀಶೈಲದ ಉತ್ತರದ ಕಡೆಗೆ ಹರಡಿಕೊಂಡವು. ಶ್ರೀಶೈಲದಿಂದ ಆರಂಭವಾದ ಎರಡು ಶಾಖೆಗಳು ಬೀದರ್ ಮೂಲಕ ಗುಲ್ಬರ್ಗಾ ಸ್ಥಳಗಳಲ್ಲಿ

ನೆಲೆಗೊಂಡು ಮಹಾರಾಷ್ಟ್ರದ ಕಡೆಯ ಕೊಲ್ಲಾಪುರ ಹಾಗೂ ಪುಣೆಯವರೆಗೆ ಒಂದು ಶಾಖೆಯು ಮುಂದುವರಿದಿದೆ. ಇನ್ನೊಂದು ಶಾಖೆಯು ತುಂಗಭದ್ರ ನದಿಯ ವಿರುದ್ಧ ದಿಕ್ಕಿನಲ್ಲಿ ಅಂದರೆ ಕರ್ನಾಟಕ ತೆಕ್ಕಲಕೋಟೆ, ಕಂಪ್ಲಿ, ಹಂಪಿ, ಹೂವಿನಹಡಗಲಿ ಮೈಲಾರ, ದೇವರುಗುಡ್ಡ ಹಾಗೂ ದೇವಿಹೊಸೂರು ಸ್ಥಳಗಳಲ್ಲಿ ಹರಡಿಕೊಂಡಿದೆ. ಹೀಗೆ ಶ್ರೀಶೈಲದ ಎರಡು ಉಪಶಾಖೆಗಳು ಕರ್ನಾಟಕದಲ್ಲಿ ತಲೆ ಎತ್ತಿ ಮೈಲಾರನ ಕ್ಷೇತ್ರಗಳಾದವು[೭೪] ಎಂಬುದು ವಿದ್ವಾಂಸರಾದ ವಾಸುದೇವ ಬಡಿಗೇರ ಅವರ ಅಭಿಪ್ರಾಯವಾಗಿದೆ. ಇದಕ್ಕೆ ಪುಷ್ಟಿ ನೀಡುವಂತೆ ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಪೇಬೆಂರ ಸ್ಥಳದಲ್ಲಿ ಮೈಲಾರನ ದೇವಾಲಯವಿದೆ. ಕ್ರಿ.ಶ. ೧೧೩೮ರಲ್ಲಿ ಅಣಂದೂರು ಶಾಸನವು ಜಗದೇಕಮಲ್ಲನು ಪಟ್ಟ ಕಟ್ಟಿಸಿಕೊಂಡು ಮಹಾಭೈರವ, ಮೈಲಾರದೇವ, ಪಾದಗಳನ್ನು ದರ್ಶಿಸಿ ದೇವಾಲಯಕ್ಕೆ ಕಳಸವನ್ನು ಇಡಿಸಿ, ಆ ಸಮಯದಲ್ಲಿ ಅಣಂದೂರು ಶ್ರೀ ನಾಗೇಶ್ವರ ದೇವರ ಅಂಗಭೋಗ, ರಂಗಭೋಗ, ನೈವೇದ್ಯಕ್ಕೆ, ಬ್ರಾಹ್ಮಣ ತಪೋಧನರಿಗೆ ಅನ್ನದಾನಕ್ಕೆಂದು ಮಹಾಪ್ರಧಾನವಾದ ಮನವೆರ್ಗ್ಗಡೆ ಅಟ್ಟಳನಾಡ ಸಾಮಂತ ಬರ್ಮಣ್ಣಯ್ಯ ದಂಡನಾಯಕನಿಗೆ ಆ ನಾಡಿನ ಮಂನೆಯನಾದ ಮಂಡಳೇಶ್ವರನಾದ ಬಿದ್ದರಸನಿಗೆ ರಾಜನ ಸಮ್ಮುಖದಲ್ಲಿ ದತ್ತಿಯನ್ನು ಬಿಟ್ಟನು.[೭೫] ಈ ಶಾಸನದಿಂದ ತಿಳಿಯುವ ಆಧಾರವೆಂದರೆ ಈ ವೇಳೆಗಾಗಲೆ ಮೈಲಾರನು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿದ್ದು, ಬೀದರ್‌ನ ಗಡಿ ಭಾಗದಲ್ಲಿರುವ ಮಹಾರಾಷ್ಟ್ರಕ್ಕೆ ಕರ್ನಾಟಕದಿಂದ ಈ ಪರಂಪರೆ ಮುಂದುವರೆದಿದೆ ಎಂದು ಊಹಿಸಬಹುದು. ಈ ಶಾಸನದಲ್ಲಿ ಮಹಾಭೈರವ, ಮೈಲಾರದೇವ, ಮನೆವೆರ್ಗ್ಗಡೆ ಎಂಬ ಉಲ್ಲೇಖಗಳಿಂದ ಮೈಲಾರ ಪರಂಪರೆಯು ಶ್ರೀಶೈಲದಿಂದ ಆರಂಭವಾಗಿ ಯಾದಗಿರಿ, ಗುಲ್ಬರ್ಗಾ, ಬೀದರ್‌ನಿಂದ ಮಹಾರಾಷ್ಟ್ರಕ್ಕೆ ಮುಂದುವರೆದಿರುವ ಸಾಧ್ಯತೆ ಇದೆ ಎಂದು ಊಹಿಸಬಹುದಾಗಿದೆ.

ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ಕೆಲವು ಶಾಸನಗಳು ನಮಗೆ ದೊರೆಯುತ್ತವೆ. ಮೈಲಾರನ ಹೆಂಡತಿಯಾದ ಗಂಗೆಮಾಳಮ್ಮ (ಮಾಳಚಿ) ಉಲ್ಲೇಖ ಸಿಗುವ ಶಾಸನಗಳು ಸಹ ಇವೆ. ಈ ಶಾಸನಗಳ ಆಧಾರದಿಂದ ಮೈಲಾರನ ಪ್ರಾಚೀನತೆಯನ್ನು ತಿಳಿಯಬಹುದಾಗಿದೆ. ಕ್ರಿ.ಶ. ೧೦೬೩ರ ದೇವಿಹೊಸೂರು ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ಅರಸ ಒಂದನೆಯ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಇಂದಪ್ಪಯ್ಯ ಎಂಬ ಅಧಿಕಾರಿ ದೇವಾಲಯಕ್ಕೆ ಮಕರತೋರಣವನ್ನು ಕಟ್ಟಿಸಿಕೊಟ್ಟ ಉಲ್ಲೇಖವಿದೆ.[೭೬] ಹಾಗೂ ೨ನೇ ಶಾಸನದ ಕಾಲ ಕ್ರಿ.ಶ. ೧೧೪೮ರ ಶಾಸನವು ಮಹಾ ಸಾಮಂತಾಧಿಪತಿ ರೇಚರಸನು ಬನವಾಸಿ ಪ್ರಾಂತ್ಯವನ್ನು ಬಳ್ಳಿಗಾವೆ ರಾಜಧಾನಿಯಿಂದ ಆಳುತ್ತಿರುವಾಗ ದೆಯ್ವದ ಹೊಸವೂರು ಎಂದರೆ ದೇವಿಹೊಸೂರಿನ ಮಾಳಚಿದೇವಿಯ ದೇವಾಲಯದ ಮಹಾ ಜನಗಳ ಹಾಗೂ ಸ್ಥಾನಿಕ ಅಧಿಕಾರಿಗಳ ಸಮ್ಮುಖದಲ್ಲಿ ದೇವಿಯ ನೈವೇದ್ಯ ನಂದಾದೀವಿಗೆಂದು ದತ್ತಿ

ಬಿಟ್ಟಿದ್ದಾನೆ.[೭೭] ಈ ಎರಡು ಶಾಸನಗಳಿಂದ ತಿಳಿದುಬರುವ ಅಂಶಗಳೆಂದರೆ ಈ ವೇಳೆಗಾಗಲೆ ಹೆಚ್ಚು ಪ್ರಸಿದ್ಧಿಯನ್ನು ಪಡೆದ ಮೈಲಾರನಿಗೆ ದೇವಾಲಯಗಳು ಇದ್ದವು. ಮೂರ್ತಿಶಿಲ್ಪದ ಆರಾಧನೆಯು ಆರಂಭವಾಗಿತ್ತು. ದೇವಿಹೊಸೂರು ಸ್ಥಳದಲ್ಲಿ ಮೈಲಾರನ ಹೆಂಡತಿಯಾದ ಮಾಳಚಿಯ ದೇವಾಲಯದ ಮಕರ ತೋರಣ ಹಾಗೂ ನಂದಾದೀಪ, ನೈವೇದ್ಯಕ್ಕೆ ದತ್ತಿ ಬಿಟ್ಟ ಉಲ್ಲೇಖ ದೊರೆಯುವುದರಿಂದ ಪ್ರಾಚೀನವಾಗಿ ಮೈಲಾರನ ಹೆಂಡತಿಯಾದ ಮಾಳಚಿಗೆ ಸಂಬಂಧಿಸಿದ ಶಾಸನ ಇದಾಗಿದೆ. ಈ ವೇಳೆಗಾಗಲೆ ಮೈಲಾರ–ಮಾಳಚಿಯ ಸ್ಪಷ್ಟ ಕಲ್ಪನೆಯೊಂದಿಗೆ ರಾಜಮನೆತನಗಳು ಆರಾಧನೆಯಲ್ಲಿ ತೊಡಗಿರುವುದನ್ನು ಗುರ್ತಿಸಬಹುದಾಗಿದೆ.

ಚಾರಿತ್ರಿಕವಾಗಿ ಮೈಲಾರ–ಮಾಳಚಿಯರ ಅಧ್ಯಯನಗಳಿಂದ ಶಾಸನಗಳಲ್ಲಿ ಬರುವ ಮಾಳಚಿಯ ಉಲ್ಲೇಖಗಳಿಂದ 'ಸಿಂದ' ಕುಲದ ಅರಸರ ಮನೆ ದೇವತೆ ಎನಿಸುತ್ತಾಳೆ. ಸಿಂದರು 'ಸಿಂದ' ಮಾದಿಗ ವಂಶದವರಿರುವ ಶಕ್ಯತೆ ಇದೆ. ಮಾಳಚಿ ಮೂಲದಲ್ಲಿ ಹೊಲೆಯ ಮಾದಿಗ ಸಂಸ್ಕೃತಿಗೆ ಸೇರಿದವಳು ಈಕೆಯ ಮೂಲಕ ಮೈಲಾರ ಪಂಥ ಕೃಷಿಕ ಸಂಸ್ಕೃತಿ ಕಾರಣಗಳನ್ನು ತನ್ನಲ್ಲಿ ಸೇರಿಸಿಕೊಂಡಿದೆ.[೭೮]

ಕ್ರಿ.ಶ. ೧೩ನೇ ಶತಮಾನದ ನಂತರ ವಿಜಯನಗರ ಕಾಲಾವಧಿಯಲ್ಲಿ ಮೈಲಾರನಿಗೆ ಹೆಚ್ಚಿನ ಮನ್ನಣೆ ದೊರೆತು ಮೈಲಾರನ ದೇವಾಲಯಗಳು ನಿರ್ಮಾಣವಾದವು. ಕ್ರಿ.ಶ. ೧೪–೧೫ನೇ ಶತಮಾನದ ವೇಳೆಗೆ ಮೈಲಾರ ದೇವಾಲಯ ನಿರ್ಮಾಣವಾದ ಬಗೆಗೆ ಶಾಸನಗಳು ದೊರೆಯುತ್ತವೆ. ಕ್ರಿ.ಶ. ೧೫೦೦ ಆಂಧ್ರಪ್ರದೇಶದ ಪೆನುಗೊಂಡೆಯ ಶಾಸನದಲ್ಲಿ ತುಪ್ಪದ ಜಾಯನಾಯಕನ ಮಗ ಕೊಮರನಾಯಕನು ಪೆನುಗೊಂಡೆಗೆ ಬಂದು ಬೊಮ್ಮರಸನನ್ನು ಓಲೈಸಿ ಮೈಲಾರ ದೇವರಿಗೆ ಮಾಳಿಗೆಯನ್ನು ಮಾಡಿಸಿದ ಉಲ್ಲೇಖವಿದೆ.[೭೯] ಹಾಗೆಯೇ ಹಂಪೆಯ ಮಲಗು ಬಸವಣ್ಣ ದೇವಾಲಯದ ಉತ್ತರಕ್ಕೆ ಇರುವ ಬಂಡೆಯ ಮೇಲಿರುವ ಶಾಸನ ಶ್ರೀ ಮೈಲಾರದೇವರ ತೀರ್ಥ ಎಂದು ಉಲ್ಲೇಖಿಸುತ್ತದೆ.[೮೦] ಗಂಗಾವತಿಯ ಕ್ರಿ.ಶ. ೧೫೪೪ರ ಹಿರೇಜಂತಕಲ್ ಶಾಸನ ಸದಾಶಿವರಾಯನು ಆಳುತ್ತಿರುವಾಗ ಅವನ ಸಾಮಂತ ಮಹಾಮಂಡಳೇಶ್ವರ ರಾಮರಾಜನು ಮೈಲಾರ ದೇವರು, ಶಂಕರ ದೇವರು, ಬೆಟ್ಟದ ವೀರಭದ್ರ, ನಾಗಲಾಪುರದ ಬಸವ, ಹನುಮಂತ, ಹರಿಹರ ದೇವರಿಗೆ ಇಂತಿಷ್ಟು ಭೂಮಿಯನ್ನು ಹಂಚುತ್ತಾನೆ.[೮೧] ಲಿಂಗಸೂಗೂರು ತಾಲೂಕಿನ ಸಜ್ಜಲಗುಡ್ಡ, ಶ್ರೀರಂಗಪಟ್ಟಣದ ದೊಡ್ಡ ಕಿರಂಗೂರು ಇನ್ನಿತರ ಸ್ಥಳಗಳಲ್ಲಿ ಮೈಲಾರ ದೇವಾಲಯಗಳಿದ್ದ ಬಗೆಗೆ ಶಾಸನಗಳಿವೆ. ಕ್ರಿ.ಶ. ೧೪೧೨ರ ಹೊಸಪೇಟೆ ತಾಲೂಕಿನ ಮಲಪನಗುಡಿಯ ಶಾಸನದಲ್ಲಿ ಮೈಲಾರನನ್ನು ತಮ್ಮ ಕುಲದೇವರೆಂದು ಕರೆದುಕೊಂಡಿದ್ದಾರೆ. ಶಾಸನದಲ್ಲಿ ಬಾವಿಯನ್ನು ತೋಡಿಸಿದವನು

ತನ್ನ ತಂದೆ ಬುಳ್ಳಪ್ಪ ತಾಯಿ ತಿಮ್ಮಾಂಬಿಕ ಎಂದು ಕುಲದೈವ ಕುಲಸ್ವಾಮಿ ಮಯಿಲಾರ ಶಂಕರ ಎಂದು ಹೇಳಿಕೊಂಡಿದ್ದಾನೆ.[೮]

ಈ ಎಲ್ಲಾ ಶಾಸನಗಳಿಂದ ತಿಳಿದುಬರುವ ಪ್ರಮುಖ ಅಂಶವೆಂದರೆ ಕ್ರಿ.ಶ. ೧೦ನೇ ಶತಮಾನದಿಂದ ವಿಜಯನಗರೋತ್ತರ ಕಾಲದವರೆಗೆ ಮೈಲಾರ ಪರಂಪರೆ ನಿರಂತರವಾಗಿ ಇರುವ ಬಗೆಗೆ ಶಾಸನಗಳು ಪುಷ್ಠಿ ನೀಡುತ್ತವೆ. ಮೈಲಾರನಿಗೆ ಸಂಬಂಧಿಸಿದಂತೆ ಮೌಖಿಕ ಮಾಹಿತಿಗಳು ಅಗಣಿತ ಸಂಖ್ಯೆಯಲ್ಲಿದ್ದರೂ ಶಾಸನಗಳು ವಿರಳ ಸಂಖ್ಯೆಯಲ್ಲಿ ದೊರೆಯುತ್ತವೆ. ಹಾಗಾಗಿ ಇರುವ ಕೆಲವು ಶಾಸನಗಳ ಆಧಾರದಿಂದ ಮೈಲಾರನ ಪ್ರಾಚೀನತೆಯನ್ನು ಕ್ರಿ.ಶ. ೧೦ನೇ ಶತಮಾನದಲ್ಲಿ ಆಳ್ವಿಕೆ ಮಾಡಿದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹಾಗೂ ಅವರ ಸಾಮಂತ ಅರಸರಾದ ನೊಳಂಬರ ಕಾಲದಿಂದ ಅವರ ಹೆಜ್ಜೆ ಗುರುತು ಸ್ಪಷ್ಟವಾಗಿ ಗುರುತಿಸಬಹುದು. ರಾಷ್ಟ್ರಕೂಟ ಕಾಲದಲ್ಲಿದ್ದ ಈ ಪರಂಪರೆಯು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದಿದೆ. ಹಾಗೂ ನೊಳಂಬರ ಕಾಲದಲ್ಲಿ ದೇವಾಲಯಗಳು ನಿರ್ಮಾಣವಾಗಿ ಮೈಲಾರ ದೇವಾಲಯಗಳಿಗೆ ದತ್ತಿಯನ್ನು ಬಿಟ್ಟ ಉಲ್ಲೇಖಗಳು ದೊರೆಯುತ್ತವೆ. ಈಗಾಗಿ ಕರ್ನಾಟಕದ ತುಂಬಾ ಹರಡಿರುವ ಮೈಲಾರ ಪರಂಪರೆಯು ನಿರ್ದಿಷ್ಟವಾಗಿ ಎಲ್ಲಿಂದ ಆರಂಭವಾಯಿತು? ಆರಂಭವಾದ ಕಾಲಮಾನವನ್ನು ತಿಳಿಸುವುದು ಕಷ್ಟಕರವಾದ ಮಾತು. ಇನ್ನು ಹೆಚ್ಚಿನ ಆಕರಗಳ ಲಭ್ಯತೆಯಿಂದ ಮೈಲಾರ ಪರಂಪರೆಯನ್ನು ತಿಳಿಯಲು ಸಾಧ್ಯವಾಗುತ್ತದೆ.

ಮೈಲಾರ ಪರಂಪರೆಯು ಎಲ್ಲಿಂದ ಆರಂಭವಾಯಿತು? ಇದರ ಪ್ರಾಚೀನತೆಯನ್ನು ಗುರ್ತಿಸಲು ಅನೇಕ ವಿದ್ವಾಂಸರು ಶಾಸನ, ದೇವಾಲಯ, ಮೂರ್ತಿಶಿಲ್ಪ, ಜಾನಪದ ಬುಡಕಟ್ಟು ಇನ್ನಿತರ ಆಕರಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಿದ್ದಾರೆ. ಪ್ರಮುಖವಾಗಿ ಹೂವಿನ ಹಡಗಲಿ ಮೈಲಾರ ಗ್ರಾಮದ ಪರಿಸರಕ್ಕೆ ಸಮೀಪವಾಗಿರುವ ಗುತ್ತಲದ ಗುತ್ತರ ರಾಜಧಾನಿ ಗುತ್ತವೊಳಲು ಆಗಿತ್ತು. ಪ್ರಮುಖ ರಾಜಮನೆತನಗಳ ಸಾಮಂತ ಅರಸರಾಗಿ ಆಳ್ವಿಕೆ ಮಾಡಿದ ಇವರು ತಮ್ಮದೇ ಆದ ಚಾರಿತ್ರಿಕ ಅಂಶಗಳನ್ನು ಈ ಪರಿಸರದಲ್ಲಿ ಬಿಟ್ಟು ಹೋಗಿದ್ದಾರೆ. ಇವರ ಕಾಲಾವಧಿಯಲ್ಲಿ ಅನೇಕ ದೇವಾಲಯಗಳು, ಶಾಸನಗಳು ಇಂದಿಗೂ ಈ ಪರಿಸರದಲ್ಲಿ ದೊರೆಯುತ್ತವೆ. ಇವರ ಆಳ್ವಿಕೆ ಸಮಯದಲ್ಲಿ ಹೂವಿನ ಹಡಗಲಿ ಮೈಲಾರ ಗ್ರಾಮವೂ ಇವರ ಅಧೀನಕ್ಕೆ ಒಳಪಟ್ಟಿರುವ ಸಾಧ್ಯತೆಗಳಿವೆ. ಹಾಗೂ ಮೈಲಾರನಿಗೆ ಹೆಚ್ಚಿನ ಮಹತ್ವವನ್ನು ನೀಡಿರುವ ಅಂಶಗಳನ್ನು ಗಮನಿಸಬಹುದಾಗಿದೆ.[೯] ಗುತ್ತರಸರ ಆಳ್ವಿಕೆ ಸಮಯದಲ್ಲಿ ಮೈಲಾರ ದೈವತ್ವದ ವಿಸ್ತರಣೆಯ ಬಗೆಗೆ ಹಾಗೂ ದೈವಕ್ಕೆ ಸಂಬಂಧಿಸಿದ ಮಹಿಮೆಗೆ ಹೆಚ್ಚಿನ ಮಹತ್ವವನ್ನು ಪಡೆದುಕೊಂಡು ವ್ಯಾಪಕಗೊಳ್ಳುತ್ತ ಮುನ್ನಡೆಯುತ್ತಿರುವ ಬಗೆಗೆ ಆಕರಗಳಲ್ಲಿ ದಾಖಲಾಗಿವೆ. ಮೈಲಾರ ದೈವತ್ವಕ್ಕೆ ಸಂಬಂಧಿಸಿದ ಅನೇಕ

138302

ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬದಲಾವಣೆಗಳನ್ನು ಕ್ರಿ.ಶ. ೧೦ನೇ ಶತಮಾನದಿಂದ ೧೩ನೇ ಶತಮಾನದವರೆಗೆ ಅನೇಕ ಕವಿಗಳು, ದಾರ್ಶನಿಕರು, ಸಮಾಜ ಸುಧಾರಕರು ತಮ್ಮ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತ ಬಂದಿದ್ದಾರೆ. ಮೈಲಾರ ದೈವವು ರಾಜರ, ಅಧಿಕಾರಿಗಳ, ಮಾಂಡಳೀಕರ, ಮಹಾಮಂಡಳೀಕರ ಅಧೀನಕ್ಕೆ ಒಳಪಟ್ಟು ವಿಸ್ತಾರವಾಗಿ ಬೆಳವಣಿಗೆಯನ್ನು ಹೊಂದುತ್ತಾ ಸಾಗಿದೆ. ಎಲ್ಲಾ ಪ್ರದೇಶಗಳಲ್ಲಿ ಹರಡಿಕೊಳ್ಳುತ್ತ ಜನಮಾಸದಲ್ಲಿ ಗಟ್ಟಿಗೊಳ್ಳುತ್ತ ಜನರ ಮನಸ್ಸಿನಲ್ಲಿ ನೆಲೆಯೂರಿದೆ.[೮೪] ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೈಲಾರನಿಗೆ ಸಂಬಂಧಿಸಿದ ಎರಡು ಉಲ್ಲೇಖಗಳು ಪ್ರಮುಖವಾಗಿವೆ. ಕ್ರಿ.ಶ. ೧೧೧೨ರ ನಯಸೇನ ಧರ್ಮಾಮೃತದಲ್ಲಿ "ಮೈಲಾರದ ಗೊರವನಂತೆ ತಂತಮ್ಮನೆ ಬಡಿದುಕೊಳ್ವಚ್ಚುಳಾಯಿಲರುಮಂ" ಎಂಬ ಉಲ್ಲೇಖವಿದೆ. ಇದೇ ಸಮಯದಲ್ಲಿ ಕ್ರಿ.ಶ. ೧೧೦೦-೧೧೬೦ರ ಕಾಲಾವಧಿಯ ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಮೈಲಾರನನ್ನು ಅನುಸರಿಸುವ ಭಕ್ತ ಸಮುದಾಯವನ್ನು ಕಟುವಾಗಿ ಟೀಕೆ ಮಾಡುತ್ತಾನೆ. ತನ್ನ ನಿಜವಾದ ಜೈನ ಧರ್ಮವನ್ನು ಅನುಸರಿಸಿದ ಒಬ್ಬ ಸಾಮಾನ್ಯನು ಮೈಲಾರನಾಗಿ ರೂಪ ಪಡೆದಿರುವಂತವನು ಎಂದು ಅಸಮಾಧಾನ ವ್ಯಕ್ತಪಡಿಸುತ್ತಾನೆ.[೮೫] "ಮೈಲಾರ ಮತ್ತು ಮಾಳಚಿ ಮನೆವೆಗ್ಗಡೆ ಚಟ್ಟಪ್ಪನಿಂದ ನಿನ್ನೇ ತಾನದವರು ಎಂದು ಹೇಳುವ ಮೂಲಕ ಮೈಲಾರ ಸಂಪ್ರದಾಯದ ವಿಸ್ತರಣೆಯ ಬಗೆಗೆ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಈ ಎರಡು ಕನ್ನಡ ಸಾಹಿತ್ಯಿಕ ಕೃತಿಗಳ ಹಿನ್ನೆಲೆಯಲ್ಲಿ ಉಲ್ಲೇಖವಾದ ಮೈಲಾರನ ಅಂಶಗಳನ್ನು ಇಟ್ಟುಕೊಂಡು ಅನೇಕ ವಿದ್ವಾಂಸರು ಕ್ರಿ.ಶ. ೧೦ನೇ ಶತಮಾನದಿಂದ ಮೈಲಾರನು ಪ್ರಸಿದ್ಧಿಗೆ ಬಂದಿರಬಹುದು ಎಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ.[೮೬] ವಿದ್ವಾಂಸರ ಅಭಿಪ್ರಾಯಗಳು ಸೂಕ್ತವೆಂಬಂತೆ ಅನೇಕ ಶಾಸನಗಳು ಹಾಗೂ ದೇವಾಲಯಗಳು ಈ ವೇಳೆಗಾಗಲೆ ನಿರ್ಮಾಣಗೊಂಡಿರುವ ಬಗೆಗೆ ಆಕರಗಳು ದೊರೆಯುತ್ತವೆ.

ಬ್ರಹ್ಮಶಿವನ 'ಸಮಯ ಪರೀಕ್ಷೆ'ಯ ಉಲ್ಲೇಖದಲ್ಲಿ ಕಂಡುಬರುವ ಮನೆವೆರ್ಗ್ಗಡೆ ಚಟ್ಟಪ್ಪನನ್ನು ಕುರಿತು ಹಿರಿಯ ವಿದ್ವಾಂಸರಾದ ಎಂ. ಚಿದಾನಂದಮೂರ್ತಿ, ಕೆ.ವಿ. ರಮೇಶ್ ಹಾಗೂ ರಮೇಶ ನಾಯಕ ಅವರು ತಮ್ಮ ತಮ್ಮ ಅಭಿಪ್ರಾಯಗಳನ್ನು ಹಾಗೂ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬ್ರಹ್ಮಶಿವನು ಹೆಸರಿರುವ ಚಟ್ಟಪ್ಪ ಎಂಬ ಹೆಸರಿನ ಉಲ್ಲೇಖವಿರುವ ಶಾಸನವೊಂದನ್ನು ಎಂ. ಚಿದಾನಂದಮೂರ್ತಿಯವರು ನೀಡಿ ಈ ರೀತಿಯಾಗಿ ಅಭಿಪ್ರಾಯಪಡುತ್ತಾರೆ. ಕದಂಬ ವಂಶದ ದೊರೆ ಚಟ್ಟಯ್ಯ ದೇವನದ್ದು, ಅಲ್ಲದೇ ಇವನು ಮಹಾ ಸಾಮಂತನಾಗಿದ್ದನು. ಆದ್ದರಿಂದ ಬ್ರಹ್ಮಶಿವನು ಉಲ್ಲೇಖಿಸುವ ಮನೆವೆಗ್ಗಡೆ ಚಟ್ಟಪ್ಪನ ಉಲ್ಲೇಖ ಯಾವುದಾದರು ಶಾಸನವಿದ್ದು, ಆ ಶಾಸನದ ಕಾಲ ಖಚಿತವಾಗಿ ತಿಳಿದುಬರುವುದಾದರೆ ಆಗ ಮೈಲಾರನಿಗೆ ಸಂಬಂಧಿಸಿದ ಒಂದು ದೊಡ್ಡ ಸಮಸ್ಯೆ ಪರಿಹಾರವಾಗುತ್ತದೆ.[೮೭] ಎಂದು ಅಭಿಪ್ರಾಯಪಡುತ್ತಾರೆ. ಇವರ ಅಭಿಪ್ರಾಯವನ್ನು

ತಿರಸ್ಕರಿಸಿದ ವಿದ್ವಾಂಸರಾದ ಕೆ.ವಿ. ರಮೇಶ್ ಅವರು ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನ ಜಾವೂರಿನ ಕ್ರಿ.ಶ. ೧೦೧೬ ಹಾಗೂ ಕ್ರಿ.ಶ. ೧೦೩೮ರ ಶಾಸನವನ್ನು ತಿಳಿಸುತ್ತಾರೆ. ಧರ್ಮಕಾರ್ಯಗಳ ಜೊತೆಗೆ ಚಟ್ಟಪ್ಪ ಎಂಬ ಹೆಸರಿನ ಉಲ್ಲೇಖವಿರುವುದನ್ನು ವಿವರಿಸುತ್ತಾರೆ. ಚಿದಾನಂದಮೂರ್ತಿಯವರ ವಿವರಣೆಯನ್ನು ಸ್ಪಷ್ಟಪಡಿಸುವ ಮೂಲಕ ಚಟ್ಟಪ್ಪ ಹಾಗೂ ಮೈಲಾರ ಕಾಲಾವಧಿಯ ಬಗ್ಗೆ ಎದ್ದಿರುವ ಚರ್ಚೆಗೆ ಮಾಹಿತಿಯನ್ನು ಒದಗಿಸುತ್ತಾರೆ.

ಇಬ್ಬರು ವಿದ್ವಾಂಸರು ಚಟ್ಟಪ್ಪನ ಕುರಿತು ಚರ್ಚೆಗಳನ್ನು ಮಾಡುತ್ತಾ ಚಟ್ಟಪ್ಪ ಎಂಬ ಉಲ್ಲೇಖಗಳು ಶಾಸನಗಳಲ್ಲಿ ಇಲ್ಲಾ ಎಂದು ಚಿದಾನಂದಮೂರ್ತಿಯವರು ಹೇಳಿದರೆ, ಕೆ.ವಿ. ರಮೇಶ್‌ರವರು ಶಾಸನಗಳ ಉಲ್ಲೇಖಗಳನ್ನು ತಿಳಿಸುತ್ತಾರೆ. ಈ ಎರಡು ಚರ್ಚೆಗಳ ಹಿನ್ನೆಲೆಯಲ್ಲಿ ವಿದ್ವಾಂಸರಾದ ರಮೇಶ ನಾಯಕ ಅವರು ಹಲವು ಪ್ರಶ್ನೆಗಳನ್ನು ಎತ್ತುತ್ತಾರೆ. ವಿದ್ವಾಂಸರು ಚಟ್ಟಯ್ಯ, ಚಟ್ಟಪ್ಪ ಹೆಸರಿನ ಉಲ್ಲೇಖವಿರುವ ಶಾಸನಗಳ ಬಗೆಗೆ ತಮ್ಮ ಅಭಿಪ್ರಾಯಗಳನ್ನು ಕೇಂದ್ರೀಕರಿಸಿದ್ದಾರೆ. ಆದರೆ ಚಟ್ಟಯ್ಯ ವ್ಯಕ್ತಿಯ ಸ್ಥಳದ ಬಗೆಗೆ ಇರುವ ಜಿಜ್ಞಾಸೆಯನ್ನು ಪರಿಗಣಿಸಲಿಲ್ಲ. ಅಲ್ಲದೆ ಪ್ರಸಿದ್ಧ ಹೂವಿನಹಡಗಲಿಯ ಮೈಲಾರ ಪರಿಸರದ ಬಹುದೂರದ ಶಾಸನಗಳನ್ನು ಮಾನದಂಡವಾಗಿ ಬಳಸಿಕೊಂಡಿದ್ದಾರೆ ಹೊರೆತು ಮೈಲಾರ ಪರಿಸರದಲ್ಲಿ ಸಿಗುವ ಶಾಸನಗಳನ್ನು ಪರಿಶೀಲಿಸುವ ಗೋಜಿಗೆ ಹೋಗಲಿಲ್ಲ. ಹೂವಿನಹಡಗಲಿ ಮೈಲಾರ ಪರಿಸರದಲ್ಲಿ ಚಟ್ಟಯ್ಯ ವ್ಯಕ್ತಿಯು ಇದ್ದಿರಬಹುದು ಎಂಬ ಪ್ರಶ್ನೆ ಏಕೆ ಹುಟ್ಟಿಕೊಳ್ಳಲಿಲ್ಲ ಎಂಬ ಪ್ರಶ್ನೆಯನ್ನು ಎತ್ತುತ್ತಾರೆ. ವಿದ್ವಾಂಸರಾದ ಎಂ. ಚಿದಾನಂದಮೂರ್ತಿ ಹಾಗೂ ಕೆ.ವಿ. ರಮೇಶರವರ ಅಭಿಪ್ರಾಯಗಳನ್ನು ಇಟ್ಟುಕೊಂಡು ರಮೇಶ ನಾಯಕ ಅವರು ಚಟ್ಟಯ್ಯನ ಕುರಿತಾಗಿ ಈ ರೀತಿಯಾಗಿ ಚರ್ಚಿಸುತ್ತಾರೆ. ಬ್ರಹ್ಮಶಿವನ ಉಲ್ಲೇಖವಿರುವ ಚಟ್ಟಯ್ಯ ಎಂಬ ಉಲ್ಲೇಖಿತ ಶಾಸನ ಹೂವಿನಹಡಗಲಿ ಮೈಲಾರ ಪರಿಸರದಲ್ಲಿ ಕಂಡುಬಂದಿದೆ. ಕ್ರಿ.ಶ. ೧೦೪೫ರ ಮೋರಗೆರೆ ಶಾಸನದಲ್ಲಿ ಚಟ್ಟರಸನೆಂಬ ವ್ಯಕ್ತಿಯ ಹೆಸರನ್ನು ಉಲ್ಲೇಖಿಸುವುದು ಮಹತ್ವದ ಸಂಗತಿಯಾಗಿದೆ. ಈ ಶಾಸನದ ಆಧಾರದಿಂದ ಮೈಲಾರ ಹಾಗೂ ಚಟ್ಟಪ್ಪನ ಕಾಲಾವಧಿಗೆ ಪರಿಹಾರ ರೂಪದ ಆಧಾರವಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೧೦೪೫ರ ಮೋರಗೆರೆ ಶಾಸನವು ಸ್ವಸ್ತಿ ದುಷ್ಟವತಿ ಮನ್ನೆಯ ಮದಾಗನ್ದ ಗಜಸಿಂಹ ಸಾಹಸೋತ್ತಂಗನುಜ್ಜೆ(ನಿ) ಪುರವರೇಶ್ವರ ಗುತ್ತರ ಭೀಮಚಲದಂಕ ರಾಮ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ಬಲ್ಲಿವಾಡಿಯೆಪ್ಪತರ ಮನ್ನೆಯ ಚಟ್ಟರಸ ಪಾದ ಪೂಜೆಯಂ ಕೊಂಡಲ್ಲಿಯ ಮನ್ನೆಯ ಸಾಮ್ಯಮನಭ್ಯಂತರ ಸಿದ್ದಿಯಾಗೆ ಬಿಟ್ಟ ದಾನ ಎಂಬುದರ ಕುರಿತು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ.[೮೮] ಈ ಶಾಸನ ಆಧಾರದಿಂದ ಬ್ರಹ್ಮಶಿವನ ಕಾಲ ಕ್ರಿ.ಶ. ೧೧೦೦-೧೧೬೦ ಹಾಗಾಗಿ ಬ್ರಹ್ಮಶಿವನ ಪರೀಕ್ಷೆಯ ಉಲ್ಲೇಖವಾಗಿರುವ 'ಮನವೆಗ್ಗಡೆ ಚಟ್ಟಪ್ಪನಿಂದ ನಿನ್ನೆತಾನದ' ಎಂಬ ಉಲ್ಲೇಖಕ್ಕೂ ಹಾಗೂ ಮೊರಗೆರೆಯ

ಚಟ್ಟರಸ ಉಲ್ಲೇಖಕ್ಕೆ ಹೆಚ್ಚು ಸಾಮ್ಯತೆ ಇದೆ. ಏಕೆಂದರೆ ಬ್ರಹ್ಮಶಿವನು ಉಲ್ಲೇಖಿಸಿದ ಮನೆವೆಗ್ಗಡೆ ಎಂಬುವನು ಮೋರಿಗೆರೆ ಶಾಸನದಲ್ಲಿ ಉಲ್ಲೇಖಿಸಿದ ಮನ್ನೆಯ ಚಟ್ಟರಸನೇ ಆಗಿರಬಹುದಾದ ಸಾಧ್ಯತೆಗಳಿವೆ.[೮೯] ಏಕೆಂದರೆ ಬ್ರಹ್ಮಶಿವನ ಸಮಯ ಪರೀಕ್ಷೆಯ ಉಲ್ಲೇಖದಲ್ಲಿರುವಂತೆ ಚಟ್ಟಪ್ಪನು ಅಧಿಕಾರಿಯಾಗಿದ್ದ ಹಾಗೂ ಮೋರಿಗೆರೆಯ ಶಾಸನದಲ್ಲಿ ಚಟ್ಟರಸನು ಅಧಿಕಾರಿಯಾಗಿದ್ದಾನೆ. ಈ ಎರಡು ಹೋಲಿಕೆಗಳ ಹಿನ್ನೆಲೆಯಲ್ಲಿ ವಿದ್ವಾಂಸರಾದ ಕೆ.ವಿ. ರಮೇಶ್ ಅವರು ಹೇಳಿದ ಜಾವೂರಿನ ಚಟ್ಟಪ್ಪನು ಬ್ರಹ್ಮಶಿವನು ಉಲ್ಲೇಖಿಸಿದ ಚಟ್ಟರಸ ಅಲ್ಲ. ಹೂವಿನ ಹಡಗಲಿ ಮೈಲಾರ ಪರಿಸರ ಹೆಚ್ಚು ಸೂಕ್ತವಾಗಿದೆ ಎಂಬುದು ವಿದ್ವಾಂಸರಾದ ರಮೇಶ ನಾಯಕ ಅವರ ಅಭಿಪ್ರಾಯವಾಗಿದೆ.

ಹೂವಿನ ಹಡಗಲಿ ಮೈಲಾರ ಪರಿಸರದ ಮೋರಿಗೆರೆ ಪ್ರಾಚೀನ ಗ್ರಾಮವಾಗಿದೆ. ಶಾಸನಗಳಲ್ಲಿ ಉಲ್ಲೇಖವಾಗಿರುವ ಉಜ್ಜನಿ ಪುರವೇಶ್ವರ, ಬಲ್ಲವಾಡಿ ಎಪ್ಪತ್ತು ಹಾಗೂ ಗುತ್ತರ ಚಲದಂಕಮಲ್ಲ ಭೀಮ ಎಂಬ ಹೆಸರುಗಳು ಗುತ್ತಲದ ಗುತ್ತರಿಗೆ ಸಂಬಂಧಿಸಿವೆ. ಹಾಗಾಗಿ ಚಟ್ಟರಸನು ಸಹ ಗುತ್ತಲದ ಸಾಮಂತ ಅಧಿಕಾರಿಯಾಗಿ ತನ್ನ ಕಾರ್ಯನಿರ್ವಹಿಸಿರಬಹುದು. ಹೂವಿನಹಡಗಲಿ ರಾಣೆಬೆನ್ನೂರು ಪರಿಸರಗಳಲ್ಲಿ ಆಳ್ವಿಕೆ ಮಾಡಿದ ಆಧಾರಗಳು ದೊರೆತಿವೆ. ಚಟ್ಟರಸನು ಮೈಲಾರ ಪರಿಸರದ ಯಾವುದೋ ಒಂದು ಸ್ಥಳದಲ್ಲಿ ಆಳ್ವಿಕೆ ಮಾಡುತ್ತಿದ್ದಿರಬಹುದು. ಮೈಲಾರ ದೈವಕ್ಕೆ ಹೆಚ್ಚಿನ ಮನ್ನಣೆ ಪಡೆಯುತ್ತಿರುವ ಸಂದರ್ಭದಲ್ಲಿ ಚಟ್ಟರಸನನ್ನು ಸೆಳೆದಿರುವ ಸಾಧ್ಯತೆಗಳಿವೆ. ಹಾಗಾಗಿ ತನ್ನ ಭಕ್ತಿಪೂರ್ವಕ ಮನಸ್ಸಿನಿಂದ, ಅಧಿಕಾರದ ಬಲದಿಂದ ಮೈಲಾರ ದೈವತ್ಯವದ ಪ್ರಸಾರಕ್ಕೆ ಬೆನ್ನೆಲುಬಾಗಿ ನಿಂತಿರುವ ಸಾಧ್ಯತೆಗಳಿವೆ. ಎಲ್ಲಾ ಅಭಿಪ್ರಾಯಗಳನ್ನು ಚರ್ಚೆ ವಿಷಯಗಳನ್ನು ಗಮನಿಸಿ ಗುತ್ತಲದ ಗುತ್ತರಸರು ಹಾಗೂ ಅಧಿಕಾರಿಗಳು ಮೈಲಾರ ದೈವತ್ವದ ಪ್ರಸಾರವನ್ನು ಉನ್ನತವಾದ ಸ್ಥಾನಕ್ಕೆ ಕೊಂಡ್ಯೊಯ್ದ ಮೊದಲಿಗರು ಎಂಬುದು ಉಚಿತವಾದುದು.[೯೦] ಗುತ್ತರ ರಾಜಧಾನಿ ಗುತ್ತಲ ಪಟ್ಟಣವಾಗಿತ್ತು. ಈ ಸ್ಥಳದಿಂದ ಮೈಲಾರ ಗ್ರಾಮದ ಸಮೀಪವಾಗಿದೆ. ಮೈಲಾರ ಗ್ರಾಮದ ದೇವರ ಮಹತ್ವ ದಿನದಿಂದ ದಿನಕ್ಕೆ ಉನ್ನತವಾದ ಮಟ್ಟದಲ್ಲಿ ಬೆಳೆಯುತ್ತಿರುವ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದ ಗುತ್ತರಸರು ಹಾಗೂ ಶಾಸನ ಉಲ್ಲೇಖಿತವಾಗಿರುವ ಚಟ್ಟರಸನು ಅಧಿಕಾರಿಯಾಗಿ ಮೈಲಾರ ದೇವರ ಮಹತ್ವವನ್ನು ಉತ್ತುಂಗಕ್ಕೆ ಏರಿಸಿರುವ ಸಾಧ್ಯತೆಗಳಿವೆ.[೯೧]

ಹೀಗೆ ವಿದ್ವಾಂಸರಾದ ಎಂ. ಚಿದಾನಂದಮೂರ್ತಿಯವರು ಬ್ರಹ್ಮಶಿವನ ಸಮಯ ಪರೀಕ್ಷೆಯ ಉಲ್ಲೇಖಿತವಾಗಿರುವ ಚಟ್ಟಪ್ಪನನ್ನು ಕುರಿತು ಎತ್ತಿದ್ದ ಪ್ರಶ್ನೆಯನ್ನು ವಿದ್ವಾಂಸರಾದ ಕೆ.ವಿ. ರಮೇಶ್ ಅವರು ಜಾವೂರು ಶಾಸನವನ್ನು ನೀಡುತ್ತಾರೆ. ವಿದ್ವಾಂಸರಾದ ರಮೇಶ ನಾಯಕ ಅವರು ಮೈಲಾರ ಸಮೀಪದಲ್ಲಿರುವ ಮೋರಿಗೆರೆ ಶಾಸನದ ಚಟ್ಟರಸ ಉಲ್ಲೇಖವನ್ನು

ನೀಡಿ ಗುತ್ತಲದ ಗುತ್ತರಸರಿಂದ ಈ ಪ್ರದೇಶದಲ್ಲಿ ಮೈಲಾರ ದೈವವೂ ಹೆಚ್ಚಿನ ಪ್ರಚಾರವನ್ನು ಮೊದಲು ಪಡೆದುಕೊಂಡು ಎಲ್ಲಾ ಜನಮಾಸದಲ್ಲಿ ಉಳಿದಿದೆ ಎಂಬುದಾಗಿ ಚರ್ಚಿಸಲಾಗಿದೆ. ಈ ಎಲ್ಲಾ ಚರ್ಚೆಗಳನ್ನು ಗಮನಿಸಿದಾಗ ಗೋಚರಿಸುವ ಅಂಶವೆಂದರೆ, ಚಟ್ಟಪ್ಪ ಎಂಬ ಅಧಿಕಾರಿ ಮೈಲಾರ ದೈವತ್ವವನ್ನು ಉನ್ನತೀಕರಿಸಿದ ಹಾಗೂ ಮೈಲಾರ ದೈವದ ಕಾಲಾವಧಿಯಲ್ಲಿ ಅಧಿಕಾರಿಯಾಗಿದ್ದ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ವಿದ್ವಾಂಸರಾದ ರಮೇಶ್‌ನಾಯಕ ಅವರು ಊಹಿಸಿದ ಚಟ್ಟರಸ ಮೈಲಾರ ಪರಿಸರದಲ್ಲಿ ಗುತ್ತಲದ ಗುತ್ತರಸರಿಗೆ ಸಂಬಂಧಿದ ಅಧಿಕಾರಿ ಎಂಬ ಚರ್ಚಿತ ವಿಷಯಕ್ಕೆ ಪೂರಕವಾಗಿ ನೀಡುವ ಅಭಿಪ್ರಾಯವೆಂದರೆ, ಚಟ್ಟರಸ ಚಟ್ಟರ್ಸ, ಚಟ್ಟಪ್ಪ, ಮನೆವೆಗ್ಗಡೆ ಚಟ್ಟಯ್ಯ ಎಂಬ ಉಲ್ಲೇಖಗಳು ಅನೇಕ ಶಾಸನಗಳಲ್ಲಿ ಕಂಡುಬರುತ್ತವೆ. ಹಾಗಾಗಿ ಮೈಲಾರ ಪರಿಸರದಲ್ಲಿ ಮೋರಿಗೆರೆಯ ಕ್ರಿ.ಶ. ೧೧೪೫ರ ಶಾಸನದ ಉಲ್ಲೇಖವು ಹೆಚ್ಚು ಸೂಕ್ತವಾಗಿದೆ. ಏಕೆಂದರೆ ಚಟ್ಟಪ್ಪ ಎಂಬ ಅಧಿಕಾರಿಯ ಉಲ್ಲೇಖ ಹೂವಿನಹಡಗಲಿಯ ಮೈಲಾರ ಪರಿಸರದಲ್ಲಿ ದೊರೆಯುವುದರಿಂದ ಆ ವೇಳೆಗಾಗಲೆ ಹೆಚ್ಚು ಪ್ರಸಿದ್ಧಿಯನ್ನು ಪಡೆದ ಮೈಲಾರದಲ್ಲಿ ಚಟ್ಟರಸ ಎಂಬ ಉಲ್ಲೇಖವು ಮೈಲಾರನ ಚರಿತ್ರೆ ಹಾಗೂ ಪ್ರಾಚೀನತೆಯನ್ನು ತಿಳಿಯಲು ಪ್ರಮುಖವಾದ ಆಕರವಾಗಿದೆ.

ಕರ್ನಾಟಕದ ತುಂಬಾ ಹರಡಿರುವ ಮೈಲಾರ ಪರಂಪರೆಯ ಪ್ರಾಚೀನತೆಯನ್ನು ತಿಳಿಯಲು ದೇವಾಲಯಗಳು, ಮೂರ್ತಿಶಿಲ್ಪಗಳು, ಬುಡಕಟ್ಟು, ಜಾನಪದ ಹಾಗೂ ಪ್ರಸ್ತುತವಾಗಿ ಕಂಡುಬರುವ ನಂಬಿಕೆ–ಆಚರಣೆಗಳ ಮೂಲಕ ಗುರ್ತಿಸಬಹುದು.

ಕಲ್ಯಾಣ ಚಾಲುಕ್ಯ ಹಾಗೂ ನೊಳಂಬರ ಕಾಲಾವಧಿಯಲ್ಲಿ ಭೈರವ ಒಂದು ಕಡೆ ಆರಾಧನೆಗೊಳ್ಳುತ್ತಿತ್ತು. ಹಾಗೂ ಮೈಲಾರ ಒಂದು ಕಡೆ ಆರಾಧನೆಗೊಳ್ಳುತ್ತಿದ್ದು ಭೈರವನಿಂದಲೆ ವೀರಭದ್ರ ಹಾಗೂ ಮೈಲಾರ ಬಂದಿದೆ. ಇದು ನೊಳಂಬರ ಕಾಲದಲ್ಲಿ ಆರಂಭವಾಯಿತು. ಭೈರವ ರೂಪವು ಭೀಕರವಾಗಿದ್ದು, ಧ್ವನಿಯೂ ಸಹ ಭೀಕರವಾಗಿರುತ್ತದೆ. ಭೈರವರ ೬೪ ರೂಪಗಳಲ್ಲಿ ಆರಾಧನೆಗೊಳ್ಳುತ್ತಾರೆ. ಪ್ರಮುಖವಾಗಿ ಎಂಟು ಭೈರವನ ರೂಪಗಳೆಂದರೆ ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಾಪಲ, ಭೀಷಣ, ಸಂಹಾರ ಈ ಎಂಟು ರೂಪದ ಭೈರವರು ಮನುಷ್ಯರೇ.

ವೈದಿಕ ಕಾಲದಲ್ಲಿ ಸಾಹಿತಿಗಳು ರುದ್ರ ಭೈರವರನ್ನು ಹೀಗೆ ಹೇಳಿದ್ದಾರೆ. ರುದ್ರ ಭೈರವರು ಬಟ್ಟೆ ಹಾಕಿಕೊಳ್ಳುತ್ತಿರಲಿಲ್ಲ. ಬೂದಿಯನ್ನು ಬಳಿದುಕೊಂಡು ಸ್ಮಶಾನದಲ್ಲಿ ತಿರುಗಾಡುತ್ತಿದ್ದರು. ಇವರು ಹೆಂಡ ಕುಡಿಯುತ್ತಿದ್ದರು, ಮಾಂಸಹಾರಿಗಳಾಗಿದ್ದರು ಹಾಗೂ ಹುಚ್ಚರ ರೀತಿಯಾಗಿ ವರ್ತಿಸುತ್ತಿದ್ದರು. ಇವರೆಲ್ಲ ರುದ್ರ ಭೈರವರು. ಈ ರುದ್ರ ಭೈರವರು ಶಿವನ ಹಿಂಬಾಲಕರು. ಶಿವನನ್ನು ಆರಾಧನೆ ಮಾಡುವ ಶಿವ ಹೀಗೆ ಇರಬೇಕು, ಎಂಬುದನ್ನು

ಆಲೋಚನೆ ಮಾಡಿ ಶಿವನು ಹಿಂಬಾಲಕರಾದ ನಾವು ಶಿವನು ಸಹ ನಮ್ಮ ಹಾಗೆ ಇರಬೇಕು ಎಂದು ತಿಳಿಸಿದ್ದಾರೆ. ಅದಕ್ಕಾಗಿ ಶಿವನ ಸಂಕೇತಗಳನ್ನು ಅಳವಡಿಸಿಕೊಂಡರು. ಏಕೆಂದರೆ ಶಿವನ ಹಿಂಬಾಲಕರು ಅದೇ ತರಹ ರೂಪವನ್ನು ತೋರಿಸಿಕೊಟ್ಟರು. ಬೆತ್ತಲೆ ಇರುವ ಭೈರವನನ್ನು ತೆಗೆದು ಭೈರವನ ರೂಪ ನೀಡಿದರು. ಭೈರವನ ರೂಪ ಹೊಂದಿ ಕ್ಷೇತ್ರಪಾಲಕನಾಗಿ, ಭೌಗೋಳಿಕವಾಗಿ ಅಲೆದಾಡುವುದು ಭೈರವನ ರೂಪ. ಅದಕ್ಕಾಗಿಯೇ ನಾಯಿ ವಾಹನವಾಗಿ ಭೈರವನೊಂದಿಗೆ ಕ್ಷೇತ್ರಪಾಲಕನಾಗಿ ಇರುವುದು. ಪ್ರಸ್ತುತ ಯಾವುದೇ ಒಂದು ದೇವಿ ದೇವಸ್ಥಾನಗಳಲ್ಲಿ ಭೈರವ ಶಿಲ್ಪ ಇರುತ್ತದೆ. ಏಕೆಂದರೆ ಕ್ಷೇತ್ರಪಾಲಕನಾಗಿ ಇರಲೇಬೇಕು. ಇದು ಭೈರವನ ಸ್ವರೂಪ. ಈ ಭೈರವನ ಕಾಲಾವಧಿಯಲ್ಲಿ ಮೈಲಾರ ಹಾಗೂ ವೀರಭದ್ರರು ಜೊತೆ ಜೊತೆಯಲ್ಲಿ ಸಾಗುತ್ತಿರುತ್ತಾರೆ. ಭೈರವನಿಗೆ ನಾಯಿ ವಾಹನವಾದರೆ, ಮೈಲಾರನಿಗೆ ಕುದುರೆ ಹಾಗೂ ವೀರಭದ್ರನಿಗೆ ಟಗರಿನ ತಲೆಯು ಹೊಂದಿರುತ್ತದೆ. ಮೈಲಾರ ಹಾಗೂ ವೀರಭದ್ರನಿಗೆ ಮೂಲ ಯಾವುದೆಂದರೆ ಭೈರವ. ಶಿಲ್ಪಗಳಲ್ಲಿ ಕೆಲವೊಂದು ಲಕ್ಷಣಗಳನ್ನು ಹೊರತುಪಡಿಸಿದರೆ ಭೈರವ, ಮೈಲಾರ ಹಾಗೂ ವೀರಭದ್ರ ಒಂದೇ ತರಹದ ಲಕ್ಷಣಗಳನ್ನು ಹೊಂದಿರುತ್ತಾರೆ.

ಪ್ರಮುಖವಾಗಿ ಮೈಲಾರನನ್ನು ಮಲ್ಲಯ್ಯ ಎಂದು ಕರೆಯುತ್ತಾರೆ. ಮೈಲಾರ ಎಂಬ ಹೆಸರು ಪ್ರಾಚೀನವಾದುದು ಎಂಬುದರಲ್ಲಿ ಸಂದೇಹವಿಲ್ಲ. ಈ ಶಬ್ದವನ್ನು ಮೈಲ ಮತ್ತು ಅರ ಅಥವಾ ಆರ ಎಂದು ವಿಭಜಿಸಬಹುದು. ಇದು ಮಲೆ ಎಂಬ ಪದದಿಂದ ಉಂಟಾಗಿದೆ. ಮಲೆ ಎಂದರೆ ಗುಡ್ಡ, ಬೆಟ್ಟ, ಪರ್ವತ ಇದಕ್ಕಾಗಿ ಮಲೆ, ಮೈಲ ಎಂದಾಗಿ ಮೈಲಾರ ರೂಪವನ್ನು ತಾಳಿತು. ಮೈಲಾರ ಗುಡ್ಡದ ದೇವರು ಹಾಗೂ ಪವರ್ತದಿಂದ ಬಂದಿರಬಹುದು. ಇನ್ನು ಅರಣ್ಯ ಅರ್ಥವುಳ್ಳ ಮಾಲ, ಮಲಯ ಎಂಬ ಪದಗಳಿಂದ ಮೈಲಾರವು ಉಂಟಾಗಿದೆ. ಮೈಲಾರನಿಗೆ ಮಲ್ಲಯ್ಯ ಎಂದು ಕರೆಯುತ್ತಾರೆ.[೨] ಆಂಧ್ರಪ್ರದೇಶದ ಶ್ರೀಶೈಲವನ್ನು ಮಲ್ಲಯ್ಯ ಎಂದು ಕರೆಯುತ್ತಾರೆ. ಪ್ರಾಚೀನ ಕಾಲದಲ್ಲಿ ಬುಡಕಟ್ಟು ಜನರು ಬೆಟ್ಟ ಗುಡ್ಡವನ್ನು ಶಿವನೆಂದು ಪೂಜಿಸುತ್ತಿದ್ದರು. ಏಕೆಂದರೆ ಬೆಟ್ಟ ಗುಡ್ಡಗಳು ಲಿಂಗದ ರೂಪದಲ್ಲಿ ಇರುವುದರಿಂದ ಶಿವನೆಂದು ಆರಾಧಿಸುತ್ತಿದ್ದರು. ಬೆಟ್ಟ-ಗುಡ್ಡದಲ್ಲಿ ಒಬ್ಬ ವ್ಯಕ್ತಿಯನ್ನು ಆರಾಧನೆಗೆ ಬಿಡುತ್ತಿದ್ದರು. ಈ ಗುಡ್ಡನನ್ನೇ ಶಿವನೆಂದು ಬುಡಕಟ್ಟು ಜನರು ಪೂಜಿಸುತ್ತಿದ್ದರು. ಗುಡ್ಡನು ಸತ್ತ ನಂತರ ಮತ್ತೊಬ್ಬ ಗುಡ್ಡನನ್ನು ಬಿಡುವ ಪರಿಪಾಠವಿತ್ತು. ಅದಕ್ಕಾಗಿ ಬೆಟ್ಟಗುಡ್ಡದಲ್ಲಿ ವಾಸವಾಗಿ ಗುಡ್ಡನನ್ನು ಮೈಲಾರ ಎಂದು ತಿಳಿದುಕೊಂಡು ಪೂಜಿಸುತ್ತಿದ್ದರು. ಮಲಯ ಎಂದರೆ ಬೆಟ್ಟ, ಮಲಯ ಎಂದರೆ ಮೈಲಾರ. ಸಾಮಾನ್ಯವಾಗಿ ಮೈಲಾರನು ಬೆಟ್ಟದ ಮೇಲೆ ಇರುವವನು, ಕಾಡಿನ ಮನುಷ್ಯನಾಗಿ ಕಾಡಿನಿಂದ ಬೆಟ್ಟಕ್ಕೆ ಹೋಗಲು ಕುದುರೆಯನ್ನು ಉಪಯೋಗಿಸುತ್ತಿದ್ದ ಅದಕ್ಕಾಗಿ ಕುದುರೆಯು ಮೈಲಾರನ ವಾಹನವಾಗಿ ಕಂಡುಬರುತ್ತದೆ.

ಆದಿಮ ಜನರ ನಂಬಿಕೆಯ ಪ್ರಕಾರ ಮೈಲಾರನೆಂದರೆ ಬೆಟ್ಟ, ಕಾಡು ಅಷ್ಟೇ. ಗಂಗೆ ಹರಿಯುವ ಹಳ್ಳ ಅಥವಾ ಹೊಳೆಯ ಸಂಕೇತ ಮಾಳಮ್ಮ (ಮಾಳ, ಮೊರಡಿ) ದಿಬ್ಬದ ಸಂಕೇತ, ಬೇಟೆಗಾರಿಕೆ, ಪಶುಪಾಲನೆಗಳು ಈ ಪರಿಸರವನ್ನೇ ಅವಲಂಬಿಸಿದ್ದರಿಂದ ಇವೆಲ್ಲ ದೈವೀಕರಣಗೊಂಡವು. ಲಿಂಗವಂತೂ ಗುಡ್ಡದ ಸಂಕೇತವೇ. ಸ್ವಯಂಭು ಲಿಂಗಗಳು ಪಠಾರ (ಮರಾಠಿ), ಕುರುಗಳ (ದಿನ್ನೆ) ಬೆಟ್ಟಗಳ ಸಣ್ಣ ರೂಪಗಳು ಇದೇ ಮೈಲಾರಲಿಂಗ. ಮೈಲಾರ ಭಕ್ತರು 'ಗುಡ್ಡದಯ್ಯ' 'ಗುಡ್ಡದವ್ವ' 'ಬೆಟ್ಟಪ್ಪ' 'ಬೆಟ್ಟವ್ವ' ಗಿರಿಯಪ್ಪ ಎಂಬ ಹೆಸರುಗಳು ಇರುವುದನ್ನು ಕಾಣಬಹುದು.[೯೩]

ಪ್ರಾಚೀನ ಕಾಲದಲ್ಲಿ ಭೈರವ–ವೀರಭದ್ರ, ಮೈಲಾರ ದೇವತೆಗಳು ಜೊತೆ ಜೊತೆಯಲ್ಲಿ ಆರಾಧನೆಗೊಳ್ಳುತ್ತಿದ್ದವು. ಭೈರವನಿಗೆ ನಾಯಿ ಸಂಕೇತವಾದರೆ, ಮೈಲಾರನಿಗೆ ಕುದುರೆ ಸಂಕೇತವಾಗಿತ್ತು. ಭೈರವನಿಗೆ ಲಿಂಗ ರೂಪದ ಆರಾಧನೆ ಇಲ್ಲ. ಆದರೆ ಮೈಲಾರನಿಗೆ ಲಿಂಗ ರೂಪದ ಆರಾಧನೆ ಇತ್ತು. ಅದಕ್ಕಾಗಿ ಮೈಲಾರನನ್ನು ಲಿಂಗದ ರೂಪದಲ್ಲಿ ಬೆಟ್ಟ–ಗುಡ್ಡವನ್ನು ಆರಾಧನೆ ಮಾಡುತ್ತಿದ್ದರು. ಪ್ರಾಚೀನ ಕಾಲದಲ್ಲಿ ಬುಡಕಟ್ಟು ಜನರು ಬೆಟ್ಟವನ್ನೇ ಲಿಂಗವೆಂದು ತಿಳಿದುಕೊಂಡಿದ್ದರು. ಅದಕ್ಕಾಗಿ ಶಿವನ ಹುಟ್ಟು ಲಿಂಗದ ಆಕಾರದಲ್ಲಿ ಕಂಡುಬರುತ್ತದೆ. ಮುಂದುವರೆದು ಬೆಟ್ಟಕ್ಕೆ ಒಂದು ರೂಪವನ್ನು ಕೊಡಬೇಕು ಎಂದುಕೊಂಡು ಭೈರವನ ರೂಪದಲ್ಲಿ ಮೈಲಾರನ ಆರಾಧನೆಯನ್ನು ಮಾಡಿದರು. ಬೆಟ್ಟವೆ ಇದರ ರೂಪ, ಕ್ರಮೇಣವಾಗಿ ಇದಕ್ಕೆ ಮೂರ್ತಿ ಸ್ವರೂಪವನ್ನು ನೀಡಿದರು. ಲಿಂಗದ ರೂಪದಲ್ಲಿ ಹಾಗೂ ಮೂರ್ತಿ ರೂಪದಲ್ಲಿ ಮೈಲಾರನನ್ನು ಪೂಜೆ ಮಾಡುತ್ತಿದ್ದರು. ಮೂರ್ತಿ ರೂಪ ಹೇಗೆ ಎಂದರೆ ಕುದುರೆಯ ಮೇಲೆ ಕುಳಿತ ಮೈಲಾರನ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿರುವ ರೀತಿ ಇರುತ್ತದೆ.

ರಾಷ್ಟ್ರಕೂಟರ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮೈಲಾರ ಪರಂಪರೆಯು ಹೆಚ್ಚು ಪ್ರಸಿದ್ಧಿಗೆ ಬಂದು ನಾಡಿನ ತುಂಬೆಲ್ಲಾ ಹರಡುತ್ತಾ ಸಾಗಿತು. ಪ್ರಮುಖವಾಗಿ ಕಲ್ಯಾಣ ಚಾಲುಕ್ಯರ ಸಾಮಂತ ಅರಸರಾದ ನೊಳಂಬರು ತೆಕ್ಕಲಕೋಟೆಯ ಮೈಲಾರ ದೇವಾಲಯಕ್ಕೆ ಕ್ರಿ.ಶ. ೧೦೧೭ರಲ್ಲಿ ಮೈಲಾರ ದೇವಾಲಯಕ್ಕೆ ದತ್ತಿ ಬಿಡಲಾಗಿದೆ. ಪ್ರಾಚೀನವಾಗಿ ಕರ್ನಾಟಕದಲ್ಲಿ ಮೈಲಾರ ದೇವಾಲಯವಿರುವ ಶಾಸನ ಇದಾಗಿದೆ. ದೇವಾಲಯಗಳ ನಿರ್ಮಾಣವಾಗಿ ಹೆಚ್ಚು ಪ್ರಸಿದ್ಧಿಗೆ ಬಂದ ಮೇಲೆ ದಾನದತ್ತಿಗಳನ್ನು ರಾಜಮನೆತನಗಳು ನೀಡಲಾರಂಭಿಸಿದರು. ದೇವಾಲಯಗಳಿಗೆ ದಾನದತ್ತಿ ನೀಡಿದ ನಂತರ ಮೈಲಾರ ಶಿಲ್ಪ ಸ್ವರೂಪ ಆರಂಭವಾಗಿದೆ. ಏಕೆಂದರೆ ತೆಕ್ಕಲಕೋಟೆ ಮೈಲಾರ ದೇವಾಲಯದ ಹೊರ ಭಾಗದಲ್ಲಿ ಬಿದ್ದಿರುವ ಭಗ್ನಗೊಂಡ ಕುದುರೆಯ ಮೇಲೆ ಕುಳಿತ ಮೈಲಾರ ಶಿಲ್ಪವಿದೆ. ಪ್ರಾಚೀನವಾಗಿ ಮೈಲಾರನಿಗೆ ಸಂಬಂಧಿಸಿದ

ಮೂರ್ತಿಶಿಲ್ಪ ಇದಾಗಿದ್ದು ಈ ಮೊದಲು ಗರ್ಭಗೃಹದಲ್ಲಿ ಪೂಜೆಗೊಳ್ಳುತ್ತಿದ್ದು ಕಾಲಾನಂತರದಲ್ಲಿ ದೇವಾಲಯ ಹೊರಭಾಗದಲ್ಲಿ ತಂದಿಡಲಾಗಿದೆ ಎಂದು ಊಹಿಸಬಹುದು. ಇದೇ ದೇವಾಲಯದಲ್ಲಿ ದೊಡ್ಡ ಗಾತ್ರದ ನಂದಿ ಶಿಲ್ಪವೂ ಇರುವುದರಿಂದ ಶಿವಲಿಂಗವೂ ಇತ್ತೆಂಬ ಸಂಗತಿ ಗೋಚರಿಸುತ್ತದೆ. ಹಲವು ಶಾಸನಗಳಲ್ಲಿ ಮೈಲಾರ ಶಂಕರ, ಮೈಲಾರಾಖ್ಯಗಿರೀಶ, ಮಲ್ಲಾರಿಶಂಕರ, ಮೈಲಾರ ಪರಮೇಶ್ವರ ಎಂಬ ಉಲ್ಲೇಖಗಳಿಂದ ಮೈಲಾರ ಹಾಗೂ ಶಿವನಿಗೆ ಸಂಬಂಧವಿರುವುದನ್ನು ಶಾಸನಗಳು ಪುಷ್ಟೀಕರಿಸುತ್ತವೆ.[೬೪]

ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮೈಲಾರ ಪರಂಪರೆಯು ಹುಟ್ಟಿಕೊಂಡು, ಕಲ್ಯಾಣ ಚಾಲುಕ್ಯರ ಸಾಮಂತ ಅರಸರ ಕಾಲಾವಧಿಯಲ್ಲಿ ಮೂರ್ತಿ ಸ್ವರೂಪದಲ್ಲಿ ಈ ದೈವವನ್ನು ಆರಾಧನೆ ಮಾಡಿದರು. ನೊಳಂಬರು ರಾಜಧಾನಿ ಹೆಂಜೇರು, ಇವರ ಆರಾಧ್ಯ ದೈವ ಹೆಂಜೇರು ಸಿದ್ಧೇಶ್ವರ. ಅಂದರೆ ಭೈರವನ ಪ್ರತಿಬಿಂಬ. ತಮ್ಮ ಇಷ್ಟ ದೈವವಾದ ಭೈರವನನ್ನು ರಾಜಧಾನಿಯ ಬದಲಾವಣೆಯ ಸಮಯದಲ್ಲಿ ಉತ್ತರದ ಕಂಪ್ಲಿಗೆ ವರ್ಗಾಯಿಸುತ್ತಾರೆ. ಆಗ ತಮ್ಮ ಇಷ್ಟ ದೈವವನ್ನು ತಮ್ಮ ಜೊತೆಯಲ್ಲಿಯೇ ತೆಗೆದುಕೊಂಡು ಬಂದು ಕಂಪ್ಲಿಯಲ್ಲಿ ಸ್ಥಾಪಿಸುತ್ತಾರೆ. ಪ್ರಸ್ತುತ ಕಂಪ್ಲಿಯ ಸೋಮೇಶ್ವರ ದೇವಾಲಯ ಅಂತರಾಳದಲ್ಲಿರುವ ಭೈರವನ ಭಗ್ನಗೊಂಡ ಶಿಲ್ಪವು ಪ್ರಾಚೀನವಾಗಿ ಮೈಲಾರನ ಶಿಲ್ಪವಾಗಿದೆ.

ಸಾಮಾನ್ಯವಾಗಿ ಮೈಲಾರ ಎಂಬ ಸ್ಥಳಗಳಲ್ಲಿ ಪೂಜೆಗೊಳ್ಳುವುದು ಶಿವನ ಮೂರ್ತಿರೂಪವಾದ ಭೈರವ ದೇವರು. ಅನಂತಪುರ ಜಿಲ್ಲೆಯ ಕಂಬದೂರು ಶಾಸನದಲ್ಲಿ ಬ್ರಾಹ್ಮಣರನ್ನು 'ಮಯಿಲಪಾರ್ವರು' ಎಂದು ಕರೆದಿದೆ.[೬೫] ಈ ಮಯಿಲ ಪಾರ್ವರು ಭೈರವನ ಆರಾಧಕರಾಗಿರಬೇಕು. ಈ ಪ್ರದೇಶದಲ್ಲಿ ಅಂದರೆ ನೊಳಂಬವಾಡಿ ಪ್ರದೇಶದಲ್ಲಿ ನೊಳಂಬರ ಅಧಿದೇವತೆ ಹೆಂಜೇರು ಸಿದ್ಧೇಶ್ವರ. ಈ ಸಿದ್ಧೇಶ್ವರ ಬಿಂಬ ಅಸೀನ ಭೈರವನದ್ದು ಇದೇ ಕಾಲದ ಪ್ರಾಚೀನ ವಿಗ್ರಹ ಹಾಸನಾಂಬ ದೇವಾಲಯದ ಸಿದ್ಧೇಶ್ವರ ಬಿಂಬ. ಇದು ಸಹ ಆಸೀನ ಭೈರವನ ಬಿಂಬ ಈ ಮೂರ್ತಿಶಿಲ್ಪದಲ್ಲಿ ನಾಯಿಯ ಜೊತೆ ಕುದುರೆ ಇರುವುದು ವಿಶೇಷವಾಗಿದೆ. ಹೀಗಾಗಿ ಪ್ರಾಚೀನವಾದ ಮೈಲಾರ ಎಂಬುದು ತಿಳಿದುಬರುತ್ತದೆ.[೬೭]

ಹೀಗೆ ರಾಷ್ಟ್ರಕೂಟರ ಕಾಲದಲ್ಲಿದ್ದ ಮೈಲಾರ ಪರಂಪರೆಯು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದೇವಾಲಯಗಳು ನಿರ್ಮಾಣವಾದವು. ನಂತರ ಇವರ ಸಾಮಂತ ಅರಸರಾದ ನೊಳಂಬರ ಕಾಲಾವಧಿಯಲ್ಲಿ ಮೈಲಾರನಿಗೆ ಮೂರ್ತಿ ಸ್ವರೂಪವನ್ನು ನೀಡಿ ಆರಾಧನೆ ಮಾಡಿದರು. ನೊಳಂಬರ ಕಾಲದಲ್ಲಿ ಮೂರ್ತಿ ಸ್ವರೂಪದ ಲಕ್ಷಣ ಬದಲಾವಣೆಗಳಾದವು. ಹೆಚ್ಚು ಪ್ರಸಿದ್ಧಿಯನ್ನು ಈಗಾಗಲೇ ಪಡೆದಿದ್ದ ಭೈರವ ಶಿಲ್ಪಗಳಲ್ಲಿ ವೀರಭದ್ರ ಹಾಗೂ ಮೈಲಾರ ಶಿಲ್ಪಗಳು ಸೇರಿಕೊಂಡು ರಚನೆಯಾಗಲು ಪ್ರಾರಂಭವಾದವು. ಇದಕ್ಕೆ ಪುಷ್ಟಿ

ನೀಡುವಂತೆ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯದ ಮುಂದೆ ಇರುವ ಭೈರವ ಶಿಲ್ಪವು ಅಪರೂಪ ಶಿಲ್ಪವಾಗಿದೆ. ಈ ಶಿಲ್ಪದ ಲಕ್ಷಣಗಳು ಭೈರವ, ವೀರಭದ್ರ ಹಾಗೂ ಮೈಲಾರನ ವಾಹನಗಳಿಂದ ನಾಯಿ, ಟಗರು ಹಾಗೂ ಕುದುರೆಯ ಉಬ್ಬು ಶಿಲ್ಪಗಳನ್ನು ಕಾಣಬಹುದು. ಭೈರವನ ವಾಹನ ನಾಯಿಯಾದರೆ, ವೀರಭದ್ರನ ಕೈಯಲ್ಲಿ ಟಗರು ಹಾಗೂ ಮೈಲಾರ ವಾಹನ ಕುದುರೆ ಹೀಗೆ ನೊಳಂಬರ ಕಾಲದ ಮೂರ್ತಿಶಿಲ್ಪಗಳ ಪರಿವರ್ತನೆಯಾಗಿ ಮೂರ್ತಿಶಿಲ್ಪಗಳಲ್ಲಿ ಲೀನವಾಗಿರುವುದು ಗೋಚರಿಸುತ್ತದೆ.

ಇದೇ ತರಹ ಲಕ್ಷಣಗಳನ್ನು ಹೊಂದಿದ ಬೀದರ್ ಜಿಲ್ಲೆಯ ಪ್ರೇಮಪುರ ದೇವಾಲಯದ ಗರ್ಭಗೃಹದಲ್ಲಿ ಮೈಲಾರನೆಂದು ಪೂಜಿಸುವ ಶಿಲ್ಪವನ್ನು ಕಾಣಬಹುದು. ಈ ಶಿಲ್ಪದಲ್ಲಿ ನಂದಿ, ಕುದುರೆಯ ಉಬ್ಬು ಶಿಲ್ಪಗಳಿವೆ. ಅಂದರೆ ಶಿವನ ವಾಹನ ನಂದಿ, ಮೈಲಾರ ವಾಹನ ಕುದುರೆ, ಶಿವನನ್ನೆ ಮೈಲಾರನೆಂದು ಪೂಜಿಸುವ ಪರಿಪಾಠವನ್ನು ಇಲ್ಲಿ ಕಾಣಬಹುದಾಗಿದೆ. ಅಂದರೆ ಶಿವ ವಾಹನವಾದ ನಂದಿ, ಮುಂದುವರೆದು ಧಾರವಾಡದಲ್ಲಿ ವಿಜಯನಗರ ಕಾಲಾವಧಿಯಲ್ಲಿ ರಚನೆಯಾದ, ಮೈಲಾರನ ದೇವಾಲಯದ ಗರ್ಭಗೃಹದಲ್ಲಿ ಕುದುರೆ, ನಾಯಿ, ಶಿವಲಿಂಗ ಹೊಂದಿದ ಭೈರವನನ್ನು ಆರಾಧನೆ ಮಾಡಲಾಗುತ್ತಿದೆ. ಕಾಲಾನಂತರದಲ್ಲಿ ಮೂರ್ತಿಶಿಲ್ಪದ ಸ್ವರೂಪದಲ್ಲಿ ರೂಪಾಂತರವಾಗಿ ಮೈಲಾರನಿಗೆ ಸ್ಪಷ್ಟವಾದ ಮೂರ್ತಿ ಸ್ವರೂಪವನ್ನು ನೀಡಿ ಆರಾಧನೆ ಮಾಡಲು ಆರಂಭಿಸಿದರು.

ಚಾರಿತ್ರಿಕವಾಗಿ ಮಹತ್ವ ಅಂಶಗಳಾದ ದೇವಾಲಯ, ಶಾಸನ, ಮೂರ್ತಿಶಿಲ್ಪಗಳು ನಾಡಿನ ಉದ್ದಗಲಕ್ಕೂ ಕಂಡುಬರುತ್ತದೆ. ಮೈಲಾರ ಪರಂಪರೆ ಹೂವಿನ ಹಡಗಲಿಯ ಮೈಲಾರ ದೇವಾಲಯವು ಪ್ರಾಚೀನವಾಗಿದೆ. ಏಕೆಂದರೆ ಹೂವಿನಹಡಗಲಿಯ ದೇವಾಲಯದಲ್ಲಿ ಕಂಡುಬರುವ ನಾಲ್ಕು ಕಂಬಗಳು ಕಲ್ಯಾಣ ಚಾಲುಕ್ಯರ ಕಂಬಗಳನ್ನು ಹೋಲುತ್ತವೆ. ಹೂವಿನಹಡಗಲಿಯ ಮೈಲಾರ ದೇವಾಲಯವು ಕಂಪ್ಲಿ, ತೆಕ್ಕಲಕೋಟೆ ಹಾಗೂ ದೇವಿಹೊಸೂರು ದೇವಾಲಯಗಳ ನಿರ್ಮಾಣದ ನಂತರದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿದೆ ಎಂದು ನನ್ನ ಅಭಿಪ್ರಾಯವಾಗಿದೆ. ವಿಜಯನಗರ ಕಾಲದಲ್ಲಿ ಹೂವಿನಹಡಗಲಿಯ ಮೈಲಾರ ದೇವಾಲಯಕ್ಕೆ ದತ್ತಿ ಬಿಟ್ಟ ಉಲ್ಲೇಖಗಳು ಶಾಸನದಲ್ಲಿ ದೊರೆಯುವುದರಿಂದ ವಿಜಯನಗರ ಕಾಲದಲ್ಲಿ ಈ ಸ್ಥಳವು ಪ್ರಾಚೀನ ಮೈಲಾರ ನೆಲೆಗಳಲ್ಲಿ ಒಂದಾಗಿದೆ ಎಂದು ಊಹಿಸಬಹುದು. ಆದರೆ ಸೊಂತೇಮಿರ್ ಗುಂಥಾರ್‌ರವರ ಅಭಿಪ್ರಾಯದಲ್ಲಿ ಹೂವಿನಹಡಗಲಿಯ ಗರ್ಭಗೃಹದಲ್ಲಿರುವ ಮಣ್ಣಿನ ಮೈಲಾರ ಪ್ರಾಚೀನವಾದ ಮೈಲಾರ ಶಿಲ್ಪವಾಗಿದೆ ಎಂಬುದು ಅವರ ಅಭಿಪ್ರಾಯವಾಗಿದೆ. ಪ್ರಾಚೀನವಾದ ಮೈಲಾರನ ನೆಲೆ ಹಾಗೂ ಶಿಲ್ಪವಾಗಿದ್ದರೂ ಪ್ರಾಚೀನವಾದ ಶಾಸನೋಕ್ತ ಮೈಲಾರ ದೇವಾಲಯವಲ್ಲ. ವಿಜಯನಗರ ಕಾಲದಲ್ಲಿ ಈ ಸ್ಥಳವು ಹೆಚ್ಚು ಪ್ರಸಿದ್ಧಿಗೆ ಬಂದಿದೆ ಎನ್ನುವುದು ಕಂಡುಬರುವ ಅಂಶವಾಗಿದೆ.

ಶ್ರೀಶೈಲದಿಂದ ಆರಂಭವಾದ ಪರಂಪರೆಯು ತುಂಗಭದ್ರ ನದಿಯ ವಿರುದ್ಧ ದಿಕ್ಕಿನಲ್ಲಿ ಸಾಗಿ ಅಲ್ಲಲ್ಲಿ ತನ್ನ ಶಾಖೆಗಳನ್ನು ಉಪಕ್ಷೇತ್ರ ಬಿಟ್ಟು ಮುಂದುವರೆದಿದೆ. ಇದಕ್ಕೆ ಆಧಾರಗಳಾಗಿ ತೆಕ್ಕಲಕೋಟೆ, ಕಂಪ್ಲಿ ಹಾಗೂ ಹೂವಿನಹಡಗಲಿ ಮೈಲಾರ, ದೇವಿಹೊಸೂರು ಹಾಗೂ ದೇವರಗುಡ್ಡ ಸ್ಥಳಗಳನ್ನು ಕಾಣಬಹುದಾಗಿದೆ. ತಮಿಳುನಾಡು ಮುರುಗನಿದ್ದಂತೆ, ಕೇರಳದಲ್ಲಿ ಅಯ್ಯಪ್ಪನಿದ್ದಂತೆ ಮಹಾರಾಷ್ಟ್ರದಲ್ಲಿ ಖಂಡೋಬ ದೇವತೆ. ಇವನನ್ನು ಖಂಡೇರಾಯ, ಮಲ್ಲಾರಿ, ಮೈಲಾರ, ರಾವುಲನಾಥ ಎಂದು ಕರೆಯುತ್ತಾರೆ. ಮಹಾರಾಷ್ಟ್ರದಲ್ಲಿ ಈ ದೇವತೆಗೆ ಪ್ರಸಿದ್ಧ ಕ್ಷೇತ್ರವಾದ ಪುಣೆ ಜಿಲ್ಲೆಯಲ್ಲಿರುವ ಜೆಜೂರಿ ಗುಡಿಯಲ್ಲಿ ಗರ್ಭಗುಡಿ ಎದುರು ನಾಲ್ಕಡಿ ಉದ್ದ ಇರುವ ಕತ್ತಿಯೊಂದನ್ನು ಇರಸಿ ಅದಕ್ಕೆ ಪೂಜೆ ಸಲ್ಲಿಸುತ್ತಾರೆ. ವೀರಪೂಜೆಯ ನೆಲೆಯಲ್ಲಿ ಬೆಳೆದು ಬಂದ ಜಾನಪದ ದೇವತೆ ಇವನೆಂಬುದು ಸ್ಪಷ್ಟವಾಗಿದೆ. ತಮಿಳುನಾಡಿನಲ್ಲಿ ಮುರುಗನು ತಾರಕನನ್ನು, ಅಯ್ಯಪ್ಪನು ಮಣಿಕಂಠನನ್ನು ಕೊಂದಂತೆಯೇ ಮೈಲಾರನು ಮಣಿ ಮಲ್ಲರನ್ನು ಕೊಂದು ವೀರನಾದ ಕಥೆಯಿದೆ. ವಿಷ್ಣುವು ಸಂಹರಿಸಿದ ಮಧು ಕೈಟಭ ದೈತ್ಯರ ಅವಶೇಷಗಳಿಂದ ಮೈದಳಿದ ಮಣಿ ಮತ್ತು ಮಲ್ಲ ಎಂಬಿಬ್ಬರು ಸೋದರರು ವಿಷ್ಣುವಿನ ಮೇಲೆ ಸೇಡು ತೀರಿಸಿಕೊಳ್ಳಲು ಶಿವನನ್ನು ಒಲಿಸಿಕೊಂಡು ಲೋಕ ಕಂಟಕರಾದರಂತೆ. ಕಡೆಗೆ ಶಿವನು ಮಾರ್ತಂಡ ಭೈರವನಾಗಿ ಕಾಣಿಸಿಕೊಂಡು ಮಣಿಮಲ್ಲರನ್ನು ಕೊಂದು ಮಲ್ಲಾರಿಯಾದ[೭] ಎಂಬುದರ ಕುರಿತು ಪುರಾಣಗಳಲ್ಲಿ ಕಾಣಬಹುದು. ಶಿವನಂತೆ ಮೈಲಾರನಿಗೆ ಲಿಂಗಪೂಜೆಯು ಉಂಟು. ಜೆಜೂರಿಯ ಗರ್ಭಗುಡಿಯಲ್ಲಿ ಚಚ್ಚೌಕವಾದ ಯೋನಿಯೊಂದಿದ್ದು ಅದರಲ್ಲಿ ಎರಡು ಸ್ವಯಂಭು ಲಿಂಗಗಳಿವೆ. ಇವುಗಳಲ್ಲಿ ಒಂದು ಖಂಡೋಬನೆಂದು ಇನ್ನೊಂದು ಮಾಳಸಳೆಂದು ಪ್ರತೀತಿ ಇದೆ. ಅಂದರೆ ಮೈಲಾರನಿಗೆ ಲಿಂಗಪೂಜೆ ಹಾಗೂ ಮೂರ್ತಿಪೂಜೆ ಇದೆ ಎಂಬುದು ಸ್ಪಷ್ಟವಾಗುತ್ತದೆ.

ಮೈಲಾರನಿಗೂ ನಾಯಿ, ಕುದುರೆ ನಂಟು ಚಾರಿತ್ರಿಕವಾದ ಅಂಶಗಳಿಗೆ ಎಡೆಮಾಡಿಕೊಟ್ಟಿದೆ. ಕರ್ನಾಟಕದ ಹಲವು ಮೈಲಾರನ ಕ್ಷೇತ್ರಗಳಲ್ಲಿ ನಂಬಿಕೆ, ಆಚರಣೆ ಮಾಡಲಾಗುತ್ತದೆ. ಪ್ರತಿ ವರ್ಷ ನಡೆಯುವ ಜಾತ್ರೆಯ ಸಮಯದಲ್ಲಿ ನಾಯಿ ಗೊರವರು ನಾಯಿಯಂತೆ ನಡೆದುಕೊಳ್ಳುವ ಸಂಪ್ರದಾಯವಿದೆ. ಗೊರವರ ವೇಷಭೂಷಣ ವಿಶೇಷವಾದುದು. ಕಂಬಳಿಯನ್ನು ಹಾಕಿಕೊಂಡು, ಲಂಗೋಟಿ ಕಟ್ಟಿಕೊಂಡು, ತಲೆಗೆ ರುಮಾಲು ಸುತ್ತಿಕೊಂಡು, ಕವಡೆ ಸರ ಧರಿಸಿ, ನಡುವಿಗೆ ಹುಲಿಯ ಮತ್ತು ಕರಡಿಯ ಚರ್ಮದ ಚೂರುಗಳನ್ನು ಹಾಗೂ ಗಂಟೆಗಳನ್ನು ಕಟ್ಟಿಕೊಂಡಿರುತ್ತಾರೆ. ಬಗಲಿಗೆ ಭಂಡಾರದ ಚೀಲ, ಪಕ್ಕದಲ್ಲಿ ಜೋಳಿಗೆ, ಕೈಯಲ್ಲಿ ಮರದ ಬಟ್ಟಲನ್ನು ಹಿಡಿದಿರುತ್ತಾರೆ. ಈ ಎಲ್ಲಾ ವೇಷಭೂಷಣ ಧರಿಸಿಕೊಂಡ ಗೊರವರು ಮಣಿ-ಮಲ್ಲರನ್ನು ಕೊಲ್ಲಲು ಬೇಟೆ ನಾಯಿಗಳ ಗುಂಪಿನೊಂದಿಗೆ ಕಾಣುತ್ತಾರೆ. ಮಲ್ಲರನ್ನು ಕೊಂದ ನಂತರ ನಾಯಿಗಳು ಮನುಷ್ಯರಾಗಿ

ಮೈಲಾರ ಸೇವೆಗಾಗಿ ತೊಡಗಿದರಂತೆ. ಈ ರೀತಿಯ ಪರಿವರ್ತನೆಯನ್ನು ನೆನಸಿಕೊಳ್ಳಲು ನಾಯಿ ಗೊರವರು ಭಕ್ತರ ಎದುರು ನಾಯಿಯಂತೆ ಗಟ್ಟಿಯಾಗಿ ಬೊಗಳಿ ಭಕ್ತರಿಗೆ ಭಂಡಾರವನ್ನು ಕೊಟ್ಟು ಪ್ರತಿಯಾಗಿ ಕಾಣಿಕೆ ಪಡೆಯುತ್ತಾರೆ. ನಾಯಿ ಗೊರವರ ಬಟ್ಟಲಿನಲ್ಲಿ ಹಾಲು, ತುಪ್ಪ, ಬಾಳೆಹಣ್ಣು, ಸಕ್ಕರೆ ಹಾಕಿರುತ್ತಾರೆ. ನಾಯಿ ಗೊರವರು ನೆಲದ ಮೇಲೆ ಇರಿಸಿದ ಬಟ್ಟಲನ್ನು ಬೊಗಳಿಕೊಂಡು ಓಡಿಬಂದು ಕಚ್ಚಾಡಿ ಬಟ್ಟಲಿನಲ್ಲಿ ಇದ್ದ ಆಹಾರವನ್ನು ನಾಯಿಯಂತೆ ತಿನ್ನುತ್ತಾರೆ. ಜಾತ್ರೆಯ ಸಮಯದಲ್ಲಿ ಗೊರವರು ಕುದುರೆಕಾರರು ಆಗುತ್ತಾರೆ. ಕೈಯಲ್ಲಿ ಚಾಟಿ ಹಿಡಿದುಕೊಂಡು ಕುದುರೆಯಂತೆ ಓಡುತ್ತಾ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ.[೬೮] ಈ ರೀತಿಯ ಗೊರವರ ಆಚರಣೆಗಳು ಶಿವನಿಗೂ–ಮೈಲಾರನಿಗೂ ಇರುವ ಸಂಬಂಧವನ್ನು ಹಾಗೂ ಮಣಿ ಮಲ್ಲರೊಂದಿಗೆ ಹೋರಾಡಿದ ಯುದ್ಧವನ್ನು ಸೂಚಿಸುತ್ತದೆ.

ಮಲ್ಲಾರಿಗೆ ವೀರಪೂಜೆಯ ನೆಲೆಯು ಅಲ್ಲಿ ನಡೆಯುವ ಶಸ್ತ್ರ ಪವಾಡಗಳಿಂದ ಖಚಿತವಾಗುತ್ತದೆ. ಕಂಚಾವೀರರು ಮಾಡುವ ಪವಾಡಗಳಿಂದ ವೀರಪೂಜೆಯನ್ನು ಸ್ಪಷ್ಟಪಡಿಸಬಹುದಾಗಿದೆ. ಕಂಚಾವೀರರು ಜಾತ್ರೆಯ ಸಮಯದಲ್ಲಿ ನಾಲ್ಕಡಿ ಉದ್ದದ ಕಬ್ಬಿಣದ ಸರಳನ್ನು ಚಪ್ಪಟೆಯಾಗಿ ಬಡಿದು ತುದಿಯನ್ನು ಮೊನೆ ಮಾಡಿ, ಕಾಲಿನ ಒಂದು ಕಡೆಯಿಂದ ಇನ್ನೊಂದು ಕಡೆ ತೂರಿಸಿಕೊಂಡು ತೆಗೆಯುತ್ತಾರೆ. ಮರದಿಂದ ಮಾಡಿದ ಚೂಪಾದ ಬಗಣೆ ಗೂಟವನ್ನು ಹೊಡೆದುಕೊಳ್ಳುತ್ತಾರೆ. ಚೂಪಾದ ಸೂಜಿ ಆಕಾರದ ದೀಪವನ್ನು ಮುಂಗೈಗೆ ಚುಚ್ಚಿಕೊಂಡು ಮೈಲಾರನಿಗೆ ಆರತಿ ಮಾಡುತ್ತಾರೆ. ಉದ್ದವಾದ ಕಂಬಕ್ಕೆ ಕಟ್ಟಿದ ಕಬ್ಬಿಣದ ಸರಪಳಿಯನ್ನು ಎಳೆದು ತುಂಡರಿಸುತ್ತಾರೆ. ಈ ಎಲ್ಲಾ ಪವಾಡಗಳಾದ ಬಳಿಕ ಗಾಯಕ್ಕೆ ಭಂಡಾರವನ್ನು ಹಚ್ಚುತ್ತಾರೆ. ಭಂಡಾರವನ್ನು ಹಚ್ಚಿದರೆ ರಕ್ತ ಸುರಿಯುವುದಿಲ್ಲ ಎಂಬ ನಂಬಿಕೆ ಕಂಚಾವೀರರದು. ಈ ಎಲ್ಲಾ ಆಚರಣೆಗಳು ಗಮನಿಸಿದಾಗ ಪ್ರಾಚೀನವಾದ ವೀರಕಲ್ಪನೆಯ ಪ್ರಭಾವದಿಂದ ಮೂಡಿಬಂದವುಗಳಾಗಿವೆ ಎಂಬುದು ವಿದ್ವಾಂಸರುಗಳ ಅಭಿಪ್ರಾಯವಾಗಿದೆ.[೬೯] ಈ ರೀತಿಯಾಗಿ ಜನಸಾಮಾನ್ಯರಿಂದ ಪೂಜೆಗೊಳ್ಳುವ ದೇವತೆ ಮೈಲಾರ ನೀಲಗಿರಿಯ ಕುರುಬರು ಕುರಿ ಬಟ್ರಾಯ (ಹಿರಿಯ ದೇವ)ನನ್ನು, ಬಡಗರು ಮಲಯದೇವ (ಬೆಟ್ಟದದೇವ)ನನ್ನು, ಇಡೈಯ ಕುರುಬರು ವೀರಭದ್ರನನ್ನು, ತುಳುನಾಡಿನ ಬಾರಿಕೇರರು ತಳವಾರರು ಬ್ರಹ್ಮಭೂತವನ್ನು ಪೂಜಿಸುವಂತೆ ಕರ್ನಾಟಕದಲ್ಲಿ ಮೈಲಾರನು ವೀರಪೂಜೆಯ ನೆಲೆಯಲ್ಲಿ ವೀರನಾಗಿದ್ದವನು ಎಂಬುದು ಸೂಚಿಸುತ್ತದೆ.

ಕರ್ನಾಟಕದಲ್ಲಿ ಭೈರವನು ಮೈಲಾರ ಹಾಗೂ ವೀರಭದ್ರನು ಜೊತೆ ಬೆರೆಯುತ್ತಾನೆ. ಮೈಲಾರನಿಗೆ ಭೈರವನೆಂಬ ಹೆಸರು ಇದೆ. ಮಣಿ ಮಲ್ಲರನ್ನು ಕೊಲ್ಲಲು ಮಾರ್ತಂಡ

ಭೈರವನಾಗಿ ಶಿವನು ಎತ್ತಿದ ಅವತಾರವೇ ಮೈಲಾರ. ಶಿವನು ಭೈರವನಂತೆ ಸಂಹಾರ ಕಾರ್ಯಕ್ಕಾಗಿಯೇ ಹುಟ್ಟುತ್ತಾನೆ. ತ್ರಿಶೂಲ, ಡಮರು ನಾಯಿ, ಹಾಗೂ ಕಪಾಲವನ್ನು ಹೋಲುವ ಮರದ ದೋಣಿಗಳ ಆಚರಣೆಗಳಿರುವ ಮೈಲಾರನು ಭೈರವನ ಲಕ್ಷಣಗಳನ್ನು ಹೊಂದಿದ್ದಾನೆ. ಹೂವಿನ ಹಡಗಲಿ ಮೈಲಾರ ಹಾಗೂ ದೇವರಗುಡ್ಡ ಸ್ಥಳಗಳು ನಾಥಪಂಥೀಯವಲ್ಲ[೧೦೦] ಎಂಬುದನ್ನು ಗಮನಿಸಬಹುದಾಗಿದೆ.

ವಿಜಯನಗರ ಕಾಲದಲ್ಲಿ ಮೈಲಾರನ ಸ್ಪಷ್ಟ ಕಲ್ಪನೆ, ಮೂರ್ತಿ ಸ್ವರೂಪ, ದೇವಾಲಯಗಳು ಹಾಗೂ ನಂಬಿಕೆ ಆಚರಣೆ ಕಂಡುಬರುತ್ತವೆ. ವಿಜಯನಗರ ಕಾಲದಲ್ಲಿ ಲೋಹದಿಂದ ಮಾಡಿದ ಮೈಲಾರನ ಮೂರ್ತಿಶಿಲ್ಪಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಮೈಲಾರ ದೇವಾಲಯಗಳಲ್ಲಿ ಕಾಣಬಹುದು. ಇವರ ಕಾಲಾವಧಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ನಂಬಿಕೆ, ಆಚರಣೆಗಳು ಆರಂಭವಾಗಿ ನಾಡಿನ ಉದ್ದಗಲಕ್ಕೂ ವ್ಯಾಪಿಸಿರುವುದು ಪ್ರಮುಖವಾದ ಅಂಶವಾಗಿದೆ. ಮೈಲಾರನಿಗೆ ನರಬಲಿ ಆಚರಣೆ ಇತ್ತು ಎಂಬುದಕ್ಕೆ ಸಾಕ್ಷಿಯಾಗಿ ತೆಕ್ಕಲಕೋಟೆ, ಹೂವಿನಹಡಗಲಿ ಮೈಲಾರ ಹಾಗೂ ದೇವರಗುಡ್ಡಗಳಲ್ಲಿ ನರಬಲಿ ಶಿಲ್ಪಗಳು ಕಂಡುಬರುತ್ತವೆ. ವ್ಯಕ್ತಿಯು ಕತ್ತನ್ನು ಕತ್ತರಿಸಿಕೊಳ್ಳುವ ಮೈಲಾರನಿಗೆ ತಲೆಯನ್ನು ಕಡಿದು ಇಡುವ ಆಚರಣೆ ಇತ್ತು ಎಂದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಪ್ರಸ್ತುತ ದಿನಗಳ ನರಬಲಿ ಆಚರಣೆ ನಿಂತುಹೋಗಿ ಕೇವಲ ಶಸ್ತ್ರ ಪವಾಡ, ಕೈಕಾಲು ಪವಾಡಗಳು ಈ ಸ್ಥಳಗಳಲ್ಲಿ ಕಾಣಬಹುದಾಗಿದೆ. ಮೈಲಾರನ ಭಕ್ತರು ನಾಯಿಯಾಗಿ ಬೊಗಳುವುದು, ಕುದುರೆಯಾಗಿ ಕುಣಿಯುವುದು ಸಹ ಚಾರಿತ್ರಿಕವಾದ ಮಹತ್ವವನ್ನು ಪಡೆದುಕೊಂಡಿವೆ. ಏಕೆಂದರೆ ಭೈರವನ ವಾಹನ ನಾಯಿ, ಮೈಲಾರನ ವಾಹನ ಕುದುರೆ. ಈ ಎರಡು ದೈವಗಳ ಜೊತೆ ಜೊತೆಯಲ್ಲೇ ಪ್ರಸಿದ್ಧಿಯನ್ನು ಪಡೆದು ಸಂಕೇತಗಳಾಗಿ ಉಳಿದುಕೊಂಡಿವೆ.

ವಿದ್ವಾಂಸರಾದ ಪುರುಷೋತ್ತಮ ಬಿಳಿಮಲೆಯವರು ಮೈಲಾರನು ಮದುವೆಯಾದ ಮೂರು ಹೆಂಡತಿಯರನ್ನು ಕುರಿತು ದೀರ್ಘವಾದ ಲೇಖನವನ್ನು ಪ್ರಕಟಿಸಿದ್ದಾರೆ. ಲೇಖನದಲ್ಲಿರುವ ಪ್ರಮುಖ ಅಂಶಗಳೆಂದರೆ ವಾಸ್ತುಶಿಲ್ಪ, ಮೈಲಾರನ ಮದುವೆಗಳು ಹಾಗೂ ಜಾನಪದ ಹಿನ್ನೆಲೆಯಲ್ಲಿ ಪ್ರಮುಖವಾದ ಚಾರಿತ್ರಿಕ ಅಂಶಗಳನ್ನು ಗುರುತಿಸುತ್ತಾರೆ. ಮೈಲಾರನು ಮದುವೆಯಾದ ಗಂಗೆಮಾಳಮ್ಮ ದೇವಾಲಯ ಮೈಲಾರ ದೇವಾಲಯದ ಪಕ್ಕದಲ್ಲಿರುತ್ತದೆ. ಗಂಗೆ ಮಾಳಮ್ಮನಿಗೆ ದೇವಾಲಯವು ಇದ್ದು, ಮೂರ್ತಿಶಿಲ್ಪದ ಸ್ವರೂಪವನ್ನು ಕಾಣಬಹುದು. ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಗಂಗೆ ಮಾಳಮ್ಮ ಹೊಂದಿರುತ್ತಾಳೆ. ಇನ್ನು ಎರಡನೆ ಹೆಂಡತಿಯಾದ ಕುರುಬತ್ತೆವ್ವ (ಕುರುಬರ ಮಾಳವ್ವ)ನಿಗೆ ಮೈಲಾರ ದೇವಾಲಯಗಳ ಬಳಿ ಸ್ಥಾನಗಳನ್ನು ಕಲ್ಪಿಸಲಾಗಿಲ್ಲ. ಆದರೆ ಗಂಗೆಮಾಳಮ್ಮ

ದೇವಾಲಯದಿಂದ ಸಾಕಷ್ಟು ದೂರದಲ್ಲಿ ಸ್ಥಾನವನ್ನು ಕಲ್ಪಿಸಲಾಗಿದೆ. ಕುರುಬತ್ತೆವ್ವನಿಗೆ ಮೈಲಾರ ದೇವಾಲಯದಿಂದ ದೂರದಲ್ಲಿ ಚಿಕ್ಕದಾದ ಗುಡಿಗಳನ್ನು ಹೊಂದಿದ್ದು, ಕುರುಬತ್ತೆವ್ವನಿಗೆ ನಿರ್ದಿಷ್ಟವಾಗಿ ಹೋಲುವಂತ ಮೂರ್ತಿಶಿಲ್ಪವನ್ನು ಹೊಂದಿಲ್ಲ. ಆದರೆ ಚಪ್ಪಡಿ ಕಲ್ಲುಗಳು ಚೌಕಾಕಾರದ ಶಿಲಾಪಟ್ಟಿಕೆಗಳನ್ನೆ ಕುರುಬತ್ತೆವ್ವ ಎಂದು ಪೂಜಿಸುತ್ತಾರೆ. ಮೂರನೇ ಹೆಂಡತಿ ಕೋಮಾಲಿಗೆ ಮೈಲಾರ ದೇವಾಲಯದಿಂದ ಸಾಕಷ್ಟು ದೂರದಲ್ಲಿ ಸ್ಥಾನವನ್ನು ಕಲ್ಪಿಸಲಾಗಿದೆ. ಕೋಮಾಲಿಗೆ ಸಂಬಂಧಿಸಿದಂತೆ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಜನಪದರು ನಂಬಿಕೆಯಂತೆ ಕೋಮಾಲಿಗೆ ಸ್ಥಾನ ಇತ್ತೆಂದು ಹೇಳಲಾಗುತ್ತದೆ. ಆದರೆ ಅದರ ಯಾವ ಕುರುಹು ಕಾಣಸಿಗುವುದಿಲ್ಲ. ಪ್ರಮುಖವಾಗಿ ಗಮನಿಸಬೇಕಾದ ಅಂಶವೆಂದರೆ ಗಂಗೆಮಾಳಮ್ಮನಿಗೆ ದೇವಾಲಯವಿದೆ. ಮೂರ್ತಿಶಿಲ್ಪವೂ ಇದೆ. ಕುರುಬತ್ತೆವ್ವನಿಗೆ ಚಿಕ್ಕದಾದ ಗುಡಿ ಇದೆ. ಆದರೆ ಮೂರ್ತಿ ಸ್ವರೂಪವಿಲ್ಲ. ಕೋಮಾಲಿಗೆ ಗುಡಿಯು ಇಲ್ಲ. ಮೂರ್ತಿಶಿಲ್ಪವೂ ಇಲ್ಲ. ಅದಕ್ಕಾಗಿ ಮೈಲಾರನ ಕ್ಷೇತ್ರಗಳಲ್ಲಿ ಈ ರೀತಿಯ ಅಂಶಗಳಿಗೆ ಕಾರಣಗಳೇನೋ ಇರಬೇಕು.[೧೦೧] ಜನಪದರ ನಂಬಿಕೆಯಂತೆ ಕುರುಬತ್ತೆವ್ವ ಹಾಗೂ ಕೋಮಾಲಿಗೆ ಸ್ಥಾನಗಳನ್ನು ಕಲ್ಪಿಸಲಾಗಿದೆ ಹಾಗಾಗಿ ಕುರುಬತ್ತೆವ್ವ ಹಾಗೂ ಕೋಮಾಲಿಗೆ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳ ಕಾಣಸಿಗುವುದಿಲ್ಲ ಎಂದು ಊಹಿಸಬಹುದಾಗಿದೆ.

ಮೈಲಾರನ ಮದುವೆಗಳಿಗೆ ಸಂಬಂಧಿಸಿದಂತೆ ಚಾರಿತ್ರಿಕ ಅಂಶಗಳನ್ನು ಗುರ್ತಿಸಬಹುದಾಗಿದೆ. ಚರಿತ್ರೆ ವಿವಿಧ ಕಾಲಘಟ್ಟದಲ್ಲಿ ಮೈಲಾರ ಪರಂಪರೆ ಮುಂದುವರೆದಿದೆ. ಭಿನ್ನ ಭಿನ್ನ ಸಮುದಾಯಗಳೊಂದಿಗೆ ನಡೆಸಿದ ಸಂಘರ್ಷ ಹಾಗೂ ಸಮನ್ವಯವನ್ನು ಕಾಣಬಹುದು. ಭಿನ್ನ ಸಮುದಾಯಗಳೆಂದರೆ ಕೋಮಾಲಿಯ ಮೂಲಕವಾಗಿ ಮೂಲ ನಿವಾಸಿಗಳಾದ ದಲಿತವರ್ಗ, ಕುರುಬತ್ತೆವ್ವನ ಮೂಲಕ ವಲಸೆಗಾರ ಕುರುಬರ ವರ್ಗ ಹಾಗೂ ಗಂಗೆಮಾಳಮ್ಮನ ಮೂಲಕವಾಗಿ ಆರ್ಥಿಕಾಭಿವೃದ್ಧಿ ಸಾಧಿಸಿದ ವರ್ತಕವರ್ಗ. ಎಲ್ಲಾ ಅಂಶಗಳನ್ನು ಗಮನಿಸಿದಾಗ ಚಾರಿತ್ರಿಕವಾಗಿ ನೋಡಿದರೆ ಮೊದಲನೇ ಹಂತದಲ್ಲಿ ದಲಿತರೊಡನೆ ಏರ್ಪಟ್ಟ ಸಂಘರ್ಷ ಮತ್ತು ಸಮನ್ವಯ, ಎರಡನೇ ಹಂತದಲ್ಲಿ ಕುರುಬರೊಡನೆ ಏರ್ಪಟ್ಟ ಸಂಘರ್ಷ ಮತ್ತು ಸಮನ್ವಯಗಳು ಹಾಗೂ ಮೂರನೇ ಹಂತದಲ್ಲಿ ವರ್ತಕ ವರ್ಗದೊಡನೆ ಸಂಘರ್ಷ, ಸಮನ್ವಯಗಳು ನಡೆದಿವೆ. ಸಮಾಜದಲ್ಲಿ ಆರ್ಥಿಕವಾದ ವಿಕಾಸದಲ್ಲಿ ಬೇರೆ ಬೇರೆ ಹಂತದಲ್ಲಿ ಹೀಗಾಗುತ್ತದೆ. ಈ ಕಾರಣದಿಂದ ಮೈಲಾರ ಮದುವೆಗಳು ಧಾರ್ಮಿಕ ಅರ್ಥವುಳ್ಳದ್ದಲ್ಲ. ಬದಲು ಭಿನ್ನ ಭಿನ್ನ ಸಮುದಾಯಗಳು ನಿರ್ದಿಷ್ಟವಾದ ಕಾರಣಗಳಿಂದ ಬೆಳೆದುಬಂದುದ್ದರ ಪರಿಣಾಮವಾಗಿದೆ.[೧೦೨] ಕೋಮಲೆಯ ಜೊತೆಗಿನ ಮೈಲಾರ ಮದುವೆ ಅತ್ಯಂತ ಪ್ರಾಚೀನವಾಗಿದೆ. ಏಕೆಂದರೆ ಜಾನಪದ ಕಾವ್ಯಗಳಾದ

ಕೋಮಾಲಿ ಸಂದುವಿನಲ್ಲಿ ಉಲ್ಲೇಖವಾಗುವ ಗೊರವ ವಿರೋಧಿ ಅಸ್ಪೃಶ್ಯ ವರ್ಗಕ್ಕೆ ಸೇರಿದವನಾಗಿರಬೇಕು. ಸಂಸ್ಕೃತದ ಮಲ್ಲಾರಿ ಮಹಾತ್ಮೆಯ ಅನುಸಾರ 'ಅಸುರ' ಅಥವಾ ರಾಕ್ಷಸ ಅಸುರರೆಂದರೆ ಹೊಲೆ ಮಾದಿಗರು. ಇದನ್ನು ಸಮರ್ಥಿಸಲು ಮೈಲಾರನ ಜಾತ್ರೆ ಆಧಾರಗಳು ಸಿಗುತ್ತವೆ. ಜಾತ್ರೆಯಲ್ಲಿ ಮಲ್ಲಸುರನಂತೆ ನಟಿಸುವುದು, ಕಂಚಾವೀರರು ತಲೆಯನ್ನು ಕತ್ತರಿಸಿಕೊಂಡು ಮೈಲಾರನಿಗೆ ಒಪ್ಪಿಸುವುದು ನಾಟಕೀಯವಾಗಿ ದೇವರಗುಡ್ಡದ ಜಾತ್ರೆಯ ಸಮಯದಲ್ಲಿ ನಡೆಯುತ್ತದೆ. ಹಾಗೆಯೇ ಹೂವಿನಹಡಗಲಿಯ ಮೈಲಾರದಲ್ಲಿ ಡೆಂಕಣ ಮರಡಿಯಲ್ಲಿ ದಲಿತ ಹೆಣ್ಣು ಮಕ್ಕಳು ಮಣಿ–ಮಲ್ಲಾಸುರರ ಕಾವ್ಯಗಳನ್ನೆ ಹಾಡುತ್ತಾರೆ. ಹಾಗಾಗಿ ಮಲ್ಲಾಸುರನ ಸಾವಿಗೆ ಕಂಚಾವೀರರು ಕಾರಣರಾಗಿದ್ದಾರೆ. ಮೈಲಾರನಿಗೆ–ಮಲ್ಲನಿಗೆ ನಡೆದ ಸಂಘರ್ಷದಲ್ಲಿ ಮೈಲಾರನ ಪರವಾಗಿ ದಲಿತರು ಹೋರಾಡಿರಬೇಕೆಂದು ಕಾಣುತ್ತದೆ. ಕಂಚಾವೀರರು ಹೇಳುವ ಒಡಪುಗಳು, ಶಸ್ತ್ರ ಪವಾಡಗಳು ಯುದ್ಧದ ಸಂಕೇತವಾಗಿ ಸೂಚಿಸುತ್ತವೆ.[೧೦೩]

'ಮಾರ್ತಂಡ ವಿಜಯ'ದ ಕತೆಯಲ್ಲಿರುವಂತೆ ಮಲ್ಲನು ದನಗಳನ್ನು ಕೊಲ್ಲುತ್ತಿದ್ದ. ಮೈಲಾರನ ಕೈಯಲ್ಲಿ ಸಾಯುವ ಮಲ್ಲನು ಸತ್ತ ನಂತರ 'ಗುಡ್ಡವಾಗಿಬಿಟ್ಟ' ಎಂಬ ಹೇಳಿಕೆಯು ಇದೆ. ಮಲ್ಲನು ಜನವರ್ಗದ ಸಮುದಾಯವಾಗಿ ಪ್ರತಿನಿಧಿಸುತ್ತಾನೆ. ಮನುಸ್ಮೃತಿಯಲ್ಲಿರುವಂತೆ ಮಲ್ಲರು ಬ್ರಾಹ್ಮಣೇತರ ವರ್ಗಕ್ಕೆ ಸೇರಿದವರು. ಬ್ರಾಹ್ಮಣರ ವಿರೋಧಿಗಳಾಗಿದ್ದರು. ಜೈಮಿನಿಯ ಬ್ರಾಹ್ಮಣರ ಪ್ರಕಾರ ಮಲ್ಲರು ಇಂದ್ರನ ವಿರೋಧಿಗಳು. ಇದನೆಲ್ಲ ಗಮನಿಸಿದ ವಿದ್ವಾಂಸರಾದ ಹಿಸ್ಟರ್‌ಮನ್ ರವರು ಮಲ್ಲರು ಅಲೆಮಾರಿ ಸ್ವಭಾವದವರು, ಆಕ್ರಮಣಕಾರಿ ದೋರಣೆಯವರು, ವೇದದ ವಿರೋಧಿಗಳಾಗಿದ್ದವರು ಎಂದು ಹೇಳುತ್ತಾರೆ. ಕನ್ನಡದಲ್ಲಿ 'ಮಲ್ಲ' ಎಂಬ ಪದಕ್ಕೆ 'ನಿಪುಣ' ಎಂಬ ಅರ್ಥ ನೀಡುತ್ತದೆ. ಮೈಲಾರ ವಿರೋಧಿಯಾದ ಮಲ್ಲನು ಗುಡ್ಡದಲ್ಲಿರುವನು, ಗುಡ್ಡದ ಒಡೆಯನಾಗಿರುವನು, ವೈದಿಕ ವಿರೋಧಿಯಾಗಿರುವನು, ಆಕ್ರಮಣಕಾರಿಯಾಗಿರುವನು ಹಾಗಾಗಿ ನವಶಿಲಾಯುಗ ಪೂರ್ವದ ಜೀವನ ವಿಧಾನವಾಗಿದೆ ಎಂದು ವಿದ್ವಾಂಸರಾದ ಸೊಂತೈಮೀರ್‌ರವರ ಅಭಿಪ್ರಾಯವಾಗಿದೆ.

ಮೈಲಾರನು ಕೋಮಾಲಿಯನ್ನು ಮದುವೆಯಾಗುತ್ತಾನೆ. ಕೊಮಾಲಿಯನ್ನು ಕುದುರೆಯ ಮೇಲೆ ಕೂರಿಸಿಕೊಂಡು ಹೋಗುವ ವಿವರಗಳು ಕೋಮಾಲಿ ಸಂದುವಿನ ಕಾವ್ಯಗಳಲ್ಲಿ ದೊರೆಯುತ್ತದೆ. ದಕ್ಷಿಣ ಪ್ರಸ್ಥಭೂಮಿಯ ನವಶಿಲಾಯುಗದ ಪೂರ್ವದ ಜೀವನಕ್ರಮದಲ್ಲಿ ಕುದುರೆಗೆ ವಿಶೇಷವಾದ ಸ್ಥಾನವಿದೆ. ಮೈಲಾರ ದೇವಾಲಯಗಳಲ್ಲಿ ಕುದುರೆಗೆ ವಿಶೇಷವಾದ ಸ್ಥಾನಮಾನವಿದೆ. ಕುದುರೆಗೆ ಪೂಜಾ ವಿಧಾನಗಳನ್ನು ಸಹ ಮೈಲಾರನ ಕ್ಷೇತ್ರಗಳಲ್ಲಿ

ಕಾಣಬಹುದಾಗಿದೆ. ಮೈಲಾರನ ಭಕ್ತರಾದ ಗೊರವರು ಕುದುರೆಕಾರರಾಗಿ, ಕುದುರೆಗಳಾಗಿ ಪರಿವರ್ತನೆ ಹೊಂದಿ ಮೈಲಾರನ ಆರಾಧನೆ ಮಾಡುವುದನ್ನು ಇಂದಿಗೂ ಕಾಣಬಹುದು. ಈ ಆಧಾರಗಳಿಂದ ಕ್ರಿ.ಪೂ. ೭ನೇ ಶತಮಾನದ ಬೃಹತ್ ಶಿಲಾಯುಗದ ಕಾಲದ ಗೋರಿಗಳಲ್ಲಿ ಕುದುರೆಯ ಹಾಗೂ ನಾಯಿ ಅಸ್ಥಿಪಂಜರಗಳನ್ನು ಪುರಾತತ್ವಶಾಸ್ತ್ರಜ್ಞರು ಪತ್ತೆ ಹಚ್ಚಿದ್ದಾರೆ. ಹಾಗಾಗಿ ಆ ಕಾಲದಲ್ಲಿ ಕುದುರೆ-ನಾಯಿಗಳೊಂದಿಗೆ ವಲಸೆ ಹೋಗುತ್ತಿದ್ದ ಗುಂಪುಗಳು ತಮ್ಮ ಕೈಗಳಲ್ಲಿ ಬಿಲ್ಲು ಬಾಣಗಳಿಂದ ಕೃಷಿಕರ ಮೇಲೆ ವಿಜಯವನ್ನು ಸಾಧಿಸುತ್ತಿದ್ದರು. ಕುದುರೆಗಳ ಸಹಾಯದಿಂದಲೇ ಹಲವು ಬುಡಕಟ್ಟುಗಳ ರಾಜ್ಯಭಾರ ಮಾಡಲು ಸಹಾಯಕವಾಗಿದೆ. ರುದ್ರನು ಬೃಹತ್ ಶಿಲಾಯುಗದ ಕಲ್ಪನೆಯಾಗಿದ್ದಾನೆ. ಮೈಲಾರನನ್ನು ರುದ್ರನೆಂದು ಗುರುತಿಸಿ, ರುದ್ರನಿಗೆ ನಾಯಿ-ಕುದುರೆಯ ಅಗತ್ಯವಿದೆ. ಬಿಲ್ಲು ಬಾಣ ಹಿಡಿದು ಕುದುರೆಯ ಮೇಲೆ ಬರುತ್ತಿದ್ದ ಗುಂಪನ್ನು, ಮಲ್ಲನ ಮೇಲೆ ಸಾಧಿಸಿದ ಸಂಘರ್ಷವಾಗಿದೆ. ಎರಡು ಗುಂಪುಗಳ ನಡುವೆ ಆರ್ಥಿಕವಾದ ಚಟುವಟಿಕೆಯ ಸಂಘರ್ಷವಾಗಿದೆ.[೧೦೪] ಇದಕ್ಕೆ ಆಧಾರವೆಂಬಂತೆ ಪ್ರಸ್ತುತ ಮೈಲಾರನ ಜಾತ್ರೆಯಲ್ಲಿ ಮೈಲಾರನು ಮಲ್ಲನನ್ನು ಕೊಂದನಂತರ ವಿಜಯೋತ್ಸವ ಸಂಕೇತವಾಗಿದೆ. ಮೈಲಾರನ ಜಾತ್ರೆಯಲ್ಲಿ ಕಾರಣಿಕದ ಗೊರವ ಬಿಲ್ಲೇರಿ ಕಾರಣಿಕ ಹೇಳುವುದು ವಿಜಯದ ಸಂಕೇತವಾಗಿದೆ. ಕೋಮಾಲಿಯ ಕಾವ್ಯವು ಸಂಘರ್ಷವನ್ನೇ ಹೇಳದೆ, ಮೈಲಾರ ಕೋಮಾಲಿಯ ಮದುವೆಯಿಂದ ಎರಡು ಭಿನ್ನ ಸಂಪ್ರದಾಯಗಳ ನಡುವೆ ಇರುವ ಹೊಂದಾಣಿಕೆ ಹಾಗೂ ಆರ್ಥಿಕ ಚಟುವಟಿಕೆಯಿಂದ ಕೂಡಿದ ಹೊಂದಾಣಿಕೆಯಾಗಿದೆ. ಕೋಮಾಲಿ ಸಂದು ವಲಸೆಗಾರ ಕುರುಬರ ಹಾಗೂ ಮೂಲ ನಿವಾಸಿ ಮಾದಿಗರ ಮೇಲೆ ನಡೆಸಿದ ದಿಗ್ವಿಜಯ ಕಥನವೇ ಆಗಿದೆ. ಇದು ಯಾವಾಗ ನಡೆದಿದೆ ಎಂದು ಖಚಿತವಾಗಿ ಹೇಳಲಾಗುವುದಿಲ್ಲ. ಆದರೆ ನವಶಿಲಾಯುಗ ಪೂರ್ವದ ಜೀವನ ಕತೆಯೇ ಆಗಿದೆ.[೧೦೫]

ಮೈಲಾರನ ಮೂರನೆಯ ಮದುವೆಯು ಶ್ರೀಮಂತನಾದ ತಿರುಪತಿ ತಿಮ್ಮಪ್ಪನ ಮಗಳಾದ ಗಂಗೆಮಾಳಮ್ಮನೊಡನೆ ನಡೆಯುತ್ತದೆ. ಮಹಾರಾಷ್ಟ್ರದ ಜನಪದ ಬಾಯಲ್ಲಿ ತಿಮ್ಮಶೆಟ್ಟಿ ಎಂಬ ಲಿಂಗಾಯತ ಬಣಜಿಗರ ಮಗಳು. ಅತಿಯಾದ ಹಣದ ಆಸೆಯನ್ನು ಹೊಂದಿದ್ದ ತಿರುಪತಿ ತಿಮ್ಮಪ್ಪ ಮೈಲಾರನನ್ನು ವಂಚಿಸುತ್ತಾನೆ. ಮೈಲಾರ ಹಾಗೂ ಗಂಗೆಮಾಳಮ್ಮನ ಕಾವ್ಯದಲ್ಲಿ ಬರುವ ಪ್ರಮುಖ ಅಂಶಗಳೆಂದರೆ ಏಳು ಅಂತಸ್ತಿನ ಮನೆ, ಏಳುಕೋಟಿ ಹೊನ್ನು, ಲಗ್ನದ ಖರ್ಚು, ಊಟ-ಉಪಚಾರ, ಅಸಲು, ಬಡ್ಡಿ, ಸಾಲ, ಅಡವು ಮುಂತಾದ ಪದಗಳು ಬರುವುದರಿಂದ ವ್ಯವಹಾರಿಕ ವಿವರಗಳಿವೆ. ತಿರುಪತಿ ತಿಮ್ಮಪ್ಪ ಇನ್ನು ಶ್ರೀಮಂತನಾಗುವ ಆಸೆಯಿದ್ದರೆ, ಮೈಲಾರನಿಗೆ ತಿಮ್ಮಪ್ಪನಿಗೆ ಬುದ್ಧಿ ಕಲಿಸುವ ಆಸೆ ಇರುತ್ತದೆ. ಈಗೆ ಎರಡು ಸಮುದಾಯಗಳ ನಡುವೆ ನಡೆದ ಸಂಘರ್ಷವಾಗಿದೆ.[೧೦೬] ಈ ವ್ಯವಹಾರಿಕ

ಅಂಶಗಳಿಂದ ಊಹಿಸುವ ಅಂಶಗಳೆಂದರೆ ವ್ಯವಹಾರವು ಕರ್ನಾಟಕದಲ್ಲಿ ಕಂಡುಬಂದಿದ್ದು ಹಾಗೂ ಜನಪ್ರಿಯವಾಗಿದ್ದು ಶಾತವಾಹನರ ಕಾಲದಲ್ಲಿ. ಶಾತವಾಹನರು ಕರ್ನಾಟಕದಲ್ಲಿ ಕ್ರಿ.ಪೂ. ೧೨೧ ರಿಂದ ಕ್ರಿ.ಶ. ೧೭೮ರವರೆಗೆ ಆಳ್ವಿಕೆ ಮಾಡಿದ್ದಾರೆ. ಶಾತವಾಹನರು ಹೂವಿನಹಡಗಲಿ ಮೈಲಾರದ ಹತ್ತಿರ ಇರುವ ಹಿರೇಹಡಗಲಿಯ ಶಾಸನಗಳಲ್ಲಿ ಈ ಪ್ರದೇಶವು ಒಳಪಟ್ಟಿತ್ತು. ಶಾತವಾಹನರ ಕಾಲದ ಸಾಂಸ್ಕೃತಿಕ ಚರಿತ್ರೆಯು ಸ್ಥಳೀಯ ವೈಶಿಷ್ಟ್ಯಗಳನ್ನು ಹೊಂದಿ ಹರಡುತ್ತಿದ್ದ ಆರ್ಯ ಸಂಸ್ಕೃತಿಯ ಅಭಿವೃದ್ಧಿಯ ನಿರ್ಣಯವಾಗಿದೆ.

ಶಾತವಾಹನರ ಕಾಲದಲ್ಲಿ ಭೂಮಿ, ಹಸು ದಾನ ಮಾಡಿದ ಉಲ್ಲೇಖಗಳನ್ನು ಗಮನಿಸಿದಾಗ ಕೃಷಿ ಹಾಗೂ ಪಶುಪಾಲನೆ ಮಹತ್ತರವಾದ ಸ್ಥಾನ ಪಡೆದಿತ್ತು. ವ್ಯವಸಾಯವನ್ನು ಆಧರಿಸಿ ಜೀವನ ನಡೆಸುತ್ತಿದ್ದರು. ಬುಡಕಟ್ಟುಗಳಲ್ಲಿ ಸಮಾಜದ ಸ್ಥಿತಿಗೆ ಬದಲಾಗಿರುವ ಬಗೆಗೆ ಶಾಸನಗಳು ಹೆಚ್ಚು ಪುಷ್ಟಿ ನೀಡುತ್ತವೆ. ಆಯಾಗಾರಿಕೆ ಪದ್ಧತಿಯು ಆರಂಭ ಹಾಗೂ ಹೆಚ್ಚು ಪ್ರಸರಣಗೊಂಡು ತಮ್ಮ ಸಂಘಗಳನ್ನು ಸ್ಥಾಪಿಸಿಕೊಂಡಿದ್ದರೆಂದು ಹೇಳಲಾಗಿದೆ. ಈ ಎಲ್ಲಾ ವಿವರಣೆಗಳ ಹಿನ್ನೆಲೆಯಲ್ಲಿ ಮೈಲಾರನ ಮೂರನೇ ಮದುವೆಯು ವ್ಯಾಪಾರಿ ವರ್ಗದೊಡನೆ ನಡೆದ ಸಂಘರ್ಷವಾಗಿದೆ. ಕಾಲಾನಂತರದಲ್ಲಿ ಏರ್ಪಡಿಸಿಕೊಂಡ ಸಮನ್ವಯತೆಯಂತೆ ತೋರುತ್ತದೆ. ಇದು ಆರ್ಥಿಕ ಅಭಿವೃದ್ಧಿಯ ಸಂಕೇತವೇ ಆಗಿದೆ. ಎಲ್ಲಾ ಕಡೆಗಳಲ್ಲಿ ಗಂಗೆಮಾಳಮ್ಮನಿಗೆ ದೇವಾಲಯಗಳು, ಮೂರ್ತಿಶಿಲ್ಪಗಳು ಹಾಗೂ ಚಿನ್ನಾಭರಣ ಹಾಕಿ ಸಿಂಗರ ಮಾಡಿರುವುದು ಅತ್ಯಂತ ಸಹಜವಾದ ಪ್ರಕ್ರಿಯೆಯಾಗಿದ್ದು ಚಾರಿತ್ರಿಕ ಯುಗಕ್ಕೆ ಕೊಡುಗೆಯಾಗಿದೆ.[೧೦೭]

ಹೀಗೆ ದೇವಾಲಯ, ಮೂರ್ತಿಶಿಲ್ಪ, ಕಾವ್ಯಗಳು, ಬುಡಕಟ್ಟು ಆಚರಣೆಗಳು, ಶಾಸನಗಳು, ಪುರಾತತ್ವ ಆಕರಗಳು, ಮೈಲಾರನ ಮದುವೆಗಳು ಪ್ರಸ್ತುತ ಮೈಲಾರ ಜಾತ್ರೆಗಳಲ್ಲಿ ಹೊಂದಿರುವ ನಂಬಿಕೆ ಆಚರಣೆಗಳನ್ನು ಹೊಂದಿ ಚಾರಿತ್ರಿಕ ಅಂಶಗಳನ್ನು ಹೊಂದಿದೆ. ಮೈಲಾರ ಪರಂಪರೆಯು ವಿವಿಧ ಚಾರಿತ್ರಿಕ ಕಾಲಘಟ್ಟದಲ್ಲಿ ಹಲವು ಬೇರೆ ಬೇರೆ ಸಮುದಾಯಗಳ ನಡುವೆ ನಡೆದ ಸಂಘರ್ಷವಾಗಿದೆ. ಹಾಗೂ ಸಮುದಾಯಗಳ ಮಧ್ಯೆ ಮಾಡಿಕೊಂಡ ಹೊಂದಾಣಿಕೆಯಾಗಿದೆ. ಪ್ರಮುಖವಾಗಿ ಕುರುಬರು, ದಲಿತರು ಹಾಗೂ ವರ್ತಕರ ಮಧ್ಯೆ ನಡೆದ ಸಂಘರ್ಷವಾಗಿದೆ. ಈ ಎಲ್ಲಾ ಸಂಘರ್ಷಗಳು ಮದುವೆಯಿಂದ ಮುಕ್ತಾಯವಾಗಿ ಹೊಂದಾಣಿಕೆ ಆಗಿದೆ. ಆರ್ಥಿಕ ವಿಕಾಸದ ಕ್ರಮದಲ್ಲಿ ಕೋಮಾಲಿಯಾಗಿ ಮುಂದಿನ ಹಂತದಲ್ಲಿ ಕುರುಬತ್ತೆವ್ವನಾಗಿ, ನಂತರ ಹಂತದಲ್ಲಿ ಗಂಗೆಮಾಳಮ್ಮಳಾಗಿ ಅವತರಿಸಿರುವ ಸಾಧ್ಯತೆ ಇದೆ. ಎಲ್ಲಾ ಚರ್ಚೆಗಳು ಪ್ರಮುಖವಾಗಿ ಮೈಲಾರ ಮದುವೆಯ ಹಿನ್ನೆಲೆಯ ಕಾವ್ಯಗಳ ಮೂಲಕ ಲಭ್ಯವಿರು ಆಕರಗಳನ್ನು ಇಟ್ಟುಕೊಂಡು ಚರ್ಚಿಸಲಾಗಿದೆ.

ಮೈಲಾರ ಮದುವೆಗಳ ಬಗೆಗೆ ಚಾರಿತ್ರಿಕವಾಗಿ ಸಂಘರ್ಷಗಳಾಗಿವೆ ಎಂಬುದಕ್ಕೆ ಪ್ರಮುಖವಾಗಿ ಹೂವಿನಹಡಗಲಿ ಮೈಲಾರದಲ್ಲಿರುವ ಸೋಮಲಿಂಗನ ಸಮುದಾಯದವರು ಕುತೂಹಲಕಾರಿಯಾದ ಅಂಶಗಳನ್ನು ಹೊಂದಿದ್ದಾರೆ. ಮೈಲಾರ ಸಂಪ್ರದಾಯದಲ್ಲಿರುವ ಹಲವಾರು ಆಚರಣೆಗಳು ಸೋಮಲಿಂಗ ಪಂಥದಲ್ಲೂ ಇವೆ. ಮೈಲಾರ ಜಾತ್ರೆಯು ನಡೆಯುವ ಸಮಯದಲ್ಲಿ ಸೋಮಲಿಂಗನ ಭಕ್ತರು ಮೈಲಾರಕ್ಕೂ, ಮೈಲಾರದ ಭಕ್ತರು ಸೋಮಲಿಂಗನ ಜಾತ್ರೆಗೆ ಬರುವುದಿಲ್ಲ.[೧೦೮] ಎರಡು ಸಮುದಾಯಗಳಲ್ಲಿ ಇಂದಿಗೂ ಅನೇಕ ಸಂಘರ್ಷಗಳಿವೆ. ಮೈಲಾರನ ಸೇವೆ ಮಾಡುವವರು, ಗೊರವರು, ಗೊರವಿಯರು ಹಾಗೂ ಕಂಚಾವೀರರನ್ನು ಸೋಮಲಿಂಗನ ಭಕ್ತರ ಜೊತೆ ಬೆರೆಯುವುದಿಲ್ಲ. ಹಾಗೂ ಒಂದೇ ಸಮುದಾಯದವರಾಗಿದ್ದರು ಸಹ ಯಾವುದೇ ಮದುವೆ ಹಾಗೂ ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳುವುದಿಲ್ಲ. ಇದಕ್ಕಾಗಿ ಎರಡು ಸಮುದಾಯಗಳ ಮಧ್ಯೆ ಇರುವ ಭಿನ್ನ ಸಂಘರ್ಷವೂ ಇದಕ್ಕೆ ಕಾರಣವಾಗಿದೆ ಎಂಬುದನ್ನು ತಿಳಿಯಬಹುದು.

ಹೀಗೆ ಚಾರಿತ್ರಿಕವಾಗಿ ಮಹತ್ವವಾದ ಸ್ಥಾನವನ್ನು ಪಡೆದ ಮೈಲಾರನು ವಿವಿಧ ಕಾಲಘಟ್ಟದಲ್ಲಿ ಉಗಮಗೊಂಡು ಚಾರಿತ್ರಿಕವಾದ ಆಕರಗಳನ್ನು ಬಿಟ್ಟು ಮುಂದುವರೆದಿದ್ದಾನೆ. ಈ ಪರಂಪರೆ ಅರಿಯಲು ವಿದ್ವಾಂಸರು ಶಾಸನ, ದೇವಾಲಯ, ಮೂರ್ತಿಶಿಲ್ಪ, ಜಾನಪದ, ಬುಡಕಟ್ಟು, ಭಾಷಾ ವಿಜ್ಞಾನ ಹಾಗೂ ನಂಬಿಕೆ ಆಚರಣೆಗಳನ್ನು ಇಟ್ಟುಕೊಂಡು ಚರ್ಚಿಸಿದ್ದಾರೆ. ಚರಿತ್ರೆಯಲ್ಲಿ ಕಂಡುಬರುವ ಮೈಲಾರ ವಿವಿಧ ಜನಸಮುದಾಯಗಳಲ್ಲಿ ಆರಾಧನೆಗೊಳಪಟ್ಟಿದ್ದು, ಐತಿಹಾಸಿಕ ವ್ಯಕ್ತಿಯಾಗಿ, ಚಾರಿತ್ರಿಕ ಸಾಂಸ್ಕೃತಿಕ ಪುರುಷನಾಗಿ ಕಾಣಿಸಿಕೊಂಡು ಎಲ್ಲರ ಆರಾಧ್ಯ ದೈವನಾಗಿದ್ದಾನೆ. ಬುಡಕಟ್ಟು ದೈವನಾಗಿ ಕಾಣಿಸಿಕೊಂಡ ಮೈಲಾರನು ಕಾಲನಂತರದಲ್ಲಿ ಲಿಂಗರೂಪದಲ್ಲಿ ಆರಾಧನೆಗೊಳಗಾಗಿದ್ದಾನೆ. ರಾಜಮನೆತನಗಳ ಆಳ್ವಿಕೆಯ ಕಾಲಾವಧಿಯಲ್ಲಿ ನಿರ್ದಿಷ್ಟವಾದ ಮೂರ್ತಿ ಸ್ವರೂಪದ ಲಕ್ಷಣವನ್ನು ಹೊಂದಿ ಪೂಜಿಸಲ್ಪಟ್ಟಿದ್ದಾನೆ. ಚಾರಿತ್ರಿಕ ಅಂಶಗಳನ್ನು ಹೊಂದಿರುವ ಮೈಲಾರ ಕರ್ನಾಟಕದ ಕುಲದೇವರು ಹಾಗೂ ಕರ್ನಾಟಕದ ಹಲವು ಸ್ಥಳಗಳಲ್ಲಿ ವಿವಿಧ ಚಾರಿತ್ರಿಕ ಕಾಲಘಟ್ಟದಲ್ಲಿ ಮೈಲಾರನು ಗೋಚರಿಸುತ್ತಾನೆ. ಈ ಪರಂಪರೆಯನ್ನು ತಿಳಿಯಲು ಶಾಸನಗಳು ತೀರ ವಿರಳವಾಗಿದೆ. ಲಭ್ಯವಿರುವ ಶಾಸನಗಳನ್ನು ಇಟ್ಟುಕೊಂಡು ಪರಂಪರೆ ನಡೆದು ಬಂದ ದಾರಿಯನ್ನು ಊಹಿಸಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮೈಲಾರನಿಗೆ ದೇವಾಲಯಗಳು ನಿರ್ಮಾಣಗೊಂಡಿರುವ ಸಾಧ್ಯತೆ ಇದೆ.

ಕಲ್ಯಾಣ ಚಾಲುಕ್ಯರ ಸಾಮಂತ ಅರಸರಾದ ನೊಳಂಬರ ಕಾಲದಲ್ಲಿ ಮೂರ್ತಿ ಸ್ವರೂಪವನ್ನು ಹೊಂದಿ, ಚಟ್ಟರಸನ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದು, ವಿಜಯನಗರ ಕಾಲದಲ್ಲಿ ದೇವಾಲಯಗಳ ನಿರ್ಮಾಣಗೊಂಡು ಹೆಚ್ಚು ದಾನದತ್ತಿಗಳು ನಂಬಿಕೆ ಆಚರಣೆಗಳು

ಮುಂದುವರೆದು ಕೊಂಡು ಬಂದಿವೆ. ಪ್ರಾಚೀನ ಕಾಲದಿಂದಲೂ ಮಾನವನ ಬದುಕಿನ ಹಲವಾರು ವಿಕಾಸ ಕ್ರಮ ಹಾಗೂ ಮೈಲಾರ ಪರಂಪರೆಯಲ್ಲಿ ಕಂಡುಬರುವ ವಿವಿಧ ನಂಬಿಕೆ ಆಚರಣೆಗಳನ್ನು ಚಾರಿತ್ರಿಕವಾದ ದೃಷ್ಟಿಯಿಂದ ನೋಡಲಾಗಿದೆ. ಅನೇಕ ವಿದ್ವಾಂಸರ ಅಭಿಪ್ರಾಯಗಳು, ವಿಮರ್ಶೆಗಳು, ಸಂಶೋಧನೆಯ ಹಾದಿಯಿಂದ ಚಾರಿತ್ರಿಕವಾದ ಅಂಶಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಕರ್ನಾಟಕ ಪರಂಪರೆ ಸಂಪುಟ ೦೧, ೨೦೧೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು.೧

೨. ಕರ್ನಾಟಕ ಕೈಪಿಡಿ ೨೦೧೨, ಕರ್ನಾಟಕ ಗ್ಯಾಜಿಟಿಯರ್ ಪು.೧

೩. ಕರ್ನಾಟಕ ಪರಂಪರೆ ಸಂಪುಟ ೧, ಪೂರ್ವೋಕ್ತ, ಪು.೧ ಮತ್ತು ೨

೪. ಕರ್ನಾಟಕ ಕೈಪಿಡಿ, ಪೂರ್ವೋಕ್ತ ಪು.೩

೫. ಅದೇ, ಪು.೩

೬. ಅದೇ, ಪು.೫

೭. ಷೇಕ್‌ಅಲಿ ಬಿ. ಹಾಗೂ ಅ. ಸುಂದರ (ಸಂ), ೧೯೯೭, ಕರ್ನಾಟಕ ಚರಿತ್ರೆ ಸಂಪುಟ, ಪು.೩

೮. ಶಿವತಾರಕ್, ಕೆ.ಬಿ., ೨೦೦೧, ಕರ್ನಾಟಕ ಪುರಾತತ್ವ ನೆಲೆಗಳು, ಪು.೬೩

೯. ಅದೇ, ಪು.೬೯

೧೦. ಅದೇ, ಪು.೩೫೯

೧೧. ಅದೇ, ಪು.೩೫೯

೧೨. ವಿವೇಕ ರೈ. ೧೯೯೭, ಅನ್ವಯಕ ಜಾನಪದ, ಪು.೧೦೪. ೧೦೫

೧೩. ಬಾಲಸುಬ್ರಮಣ್ಯ(ಸಂ), ೧೯೯೯, ಕುರುಗೋಡು ಗಂಗಾಧರ ದೈವಜ್ಞ(ಲೇ) ಮೌಖಿಕ ಆಕರ, ಪು.೧೩೫

೧೪. ದೇವೇಂದ್ರಕುಮಾರ ಹಕಾರಿ (ಲೇ), ೧೯೮೮, ದೇವರಗುಡ್ಡದ ಮೈಲಾರಲಿಂಗ, ವೃಷಭೇಂದ್ರಸ್ವಾಮಿ. ಎಸ್.ಎಂ. (ಪ್ರಸಂ.), ಜಾನಪದ ಸಾಹಿತ್ಯ ದರ್ಶನ–೯ ಪು.೧೩೩

೧೫. ಅದೇ, ಪು.೧೩೩

೧೬. ಅಂಗಡಿ ಎಸ್.ಎಸ್. (ಲೇ), ೨೦೧೮, ಮೌಖಿಕ ಆಕರಗಳು, ಹಳ್ಳಿಕೇರಿ ಎಫ್.ಟಿ (ಸಂ), ಮೈಲಾರಲಿಂಗ ಪರಂಪರೆ, ಪು.೩೭

೧೭. ಅದೇ, ಪು.೩೭

೧೮. ಚಿದಾನಂದಮೂರ್ತಿ ಎಂ., ೧೯೭೦, ಸಂಶೋಧನಾ ತರಂಗ-೨, ಪು.೨೫೪

೧೯. ರವೀಂದ್ರನಾಥ ಕೆ. (ಲೇ), ೨೦೧೮, ಕಾವ್ಯ ಪುರಾಣಗಳು, ಹಳ್ಳಿಕೇರಿ ಎಫ್.ಟಿ. (ಸಂ), ಮೈಲಾರಲಿಂಗ ಪರಂಪರೆ, ಪು.೨೨

೨೦. ಅದೇ, ಪು.೨೨,೨೩

೨೧. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೦೭, ೨೦೯, ೨೧೦

೨೨. ಅದೇ, ಪು.೨೧೧

೨೩. ಅದೇ, ಪು.೨೧೨.

೨೪. ಅದೇ, ಪು.೨೬೦

೨೫. ಅದೇ, ಪು.೨೧೪, ೨೧೫

೨೬. ಅದೇ, ಪು.೨೧೮.

೨೭. ರವೀಂದ್ರನಾಥ ಕೆ. (ಲೇ), ಪೂರ್ವೋಕ್ತ, ಪು.೨೭

೨೮. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೧೯

೨೯. ಅದೇ, ಪು.೨೧೯

೩೦. ಅದೇ, ಪು.೨೧೯

೩೧. ಅದೇ, ಪು.೨೧೯

೩೨. ರವೀಂದ್ರನಾಥ ಕೆ. (ಲೇ), ಪೂರ್ವೋಕ್ತ, ಪು.೨೭

೩೩. ಅದೇ, ಪು.೨೬,೨೭

೩೪. ಅದೇ, ಪು.೨೬

೩೫. ಅದೇ, ಪು.೨೯

೩೬. ಬಸವನಾಳ (ಸಂ), ೧೯೫೧, ಬಸವಣ್ಣನವರ ವಚನಗಳು, ಪು.೫೭೦

೩೭. ಅದೇ, ಪು.೫೬೮

೩೮. ಕನ್ನಡನುಡಿ (ಸೆಪ್ಟಂಬರ್ ೧೯೫೩)

೩೯. ಕಲಬುರ್ಗಿ ಎಂ.ಎಂ., ೨೦೧೦, ಮಾರ್ಗ ಸಂಪುಟ ೨. ಪು.೩೦೭

೪೦. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೫೯

೪೧. ಅದೇ, ಪು.೨೧೩-೨೧೪

೪೨. ಅದೇ, ಪು.೨೬೦

೪೩. ಅದೇ, ಪು.೨೬೩

೪೪. ಅದೇ, ಪು.೨೧೯

೪೫.. ಅದೇ, ಪು.೨೧೩

೪೬. ರವೀಂದ್ರನಾಥ ಕೆ. (ಲೇ), ಪೂರ್ವೋಕ್ತ, ಪು.೨೯

೪೭. ಅದೇ, ಪು.೨೯

೪೮. ಅದೇ, ಪು.೩೦.

೪೯. ರಮೇಶ ನಾಯಕ (ಲೇ), ೨೦೧೨, ಚರಿತ್ರೆ, ಮಹದೇವ ಸಿ. (ಸಂ), ಮೈಲಾರ, ಪು.೩೫

೫೦. ಅದೇ ಪು.ಸಂ. ೬೫

೫೧. ಶ್ರೀನಿವಾಸ ರಿತ್ತಿ, ೧೯೭೦, ಮೈಲಾರ ದೇವರು, ಪು.೧೦

೫೨. ಅದೇ, ಪು.೧೧

೫೩. ಅದೇ, ಪು.೧೪

೫೪. ಅದೇ, ಪು.೧೬

೫೫. ರಾಂ.ಚಿ. ಢೇರೆ (ಮರಾಠಿ ಮೂಲ) ಪೂರ್ವೋಕ್ತ, ಪು.೧೯-೨೦

೫೬. ಪಾಂಡುರಂಗರಾವ್ ದೇಸಾಯಿ, ಪೂರ್ವೋಕ್ತ, ಪು.೧೨೨

೫೭. ಕಲಬುರ್ಗಿ ಎಂ.ಎಂ., ೨೦೧೦, ಮಾರ್ಗಸಂಪುಟ-೨, ಪು.೩೦೩-೩೦೪

೫೮. ರಾಂ.ಚಿ. ಢೇರೆ, ಪೂರ್ವೋಕ್ತ, ಪು.೪೧

೫೯. ಪಾಂಡುರಂಗರಾವ್ ದೇಸಾಯಿ, ಪೂರ್ವೋಕ್ತ, ಪು.೧೨೪

೬೦. ಅದೇ, ಪು.೬೫

೫೧. ಶ್ರೀನಿವಾಸ ರಿತ್ತಿ, ೧೯೭೦, ಮೈಲಾರ ದೇವರು, ಪು.೧೦

೫೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ೧೯೯೮, ಬಳ್ಳಾರಿ ಜಿಲ್ಲೆ, ಪು. ೧೩೪, ೬೪೮

೫೩. ಅದೇ, ಪು.೩೭

೫೪. ಅದೇ ಪು.೩೬

೫೫. ರಾ.ಚಿಂ. ಢೇರೆ (ಮರಾಠಿ ಮೂಲ), ೨೦೦೩, ರಾಮಕೃಷ್ಣ ಮರಾಠಿ (ಕನ್ನಡಕ್ಕೆ), ಪು.೧೬

೫೬. ಪಾಂಡುರಂಗರಾವ್ ದೇಸಾಯಿ, ೧೯೫೯, ಮೈಲಾರಲಿಂಗ ಐತಿಹಾಸಿಕ ವಿಮರ್ಶೆ, ಪು.೧೨೨

೫೭. ಕಲಬುರ್ಗಿ ಎಂ.ಎಂ., ಪೂರ್ವೋಕ್ತ, ಪು.೩೦೩-೩೦೪

೫೮. ರಾ.ಚಿಂ. ಢೇರೆ, ಪೂರ್ವೋಕ್ತ, ಪು.೧೨೨

೫೯. ಪಾಂಡುರಂಗರಾವ್ ದೇಸಾಯಿ, ಪೂರ್ವೋಕ್ತ, ಪು.೧೨೪

೬೦. ದೇವರಕೊಂಡಾರೆಡ್ಡಿ (ಲೇ), ೨೦೧೨, ಶಾಸನಗಳು, ಮಹದೇವ ಸಿ. (ಸಂ), ಪು.೨೮

೬೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೬, ೨೦೦೧, ಮಹಾರಾಷ್ಟ್ರದ ಕನ್ನಡ ಶಾಸನಗಳು, ಪು.೫

೬೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೫, ೨೦೦೧, ಆಂಧ್ರಪ್ರದೇಶದ ಕನ್ನಡ ಶಾಸನಗಳು, ಭಾಗ-೧, ಪು.೩೦೦

೬೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ೧೯೯೮, ಬಳ್ಳಾರಿ ಜಿಲ್ಲೆ, ಪು.೧೩೪, ೬೪೮

೬೪. ಅದೇ, ಪು.೩೭

೬೫. ಅದೇ, ಪು.೩೬

೬೬. ಅದೇ, ಪು.೫೧

೬೭. ದೇವರಕೊಂಡಾರೆಡ್ಡಿ (ಲೇ), ಪೂರ್ವೋಕ್ತ, ಪು.೩೨

೬೮. ರಾ.ಚಿಂ.ಢೇರೆ (ಮರಾಠಿ ಮೂಲ), ಪೂರ್ವೋಕ್ತ, ಪು.೧೬

೬೯. ಕಲ್ಯಾಣ ಚಾಲುಕ್ಯರ ಶಾಸನಗಳು ಸಂಪುಟ-೧, ೨೦೧೧, ಪು.೧೪೫

೭೦. ರಾ.ಚಿಂ. ಢೇರೆ, ಪೂರ್ವೋಕ್ತ, ಪು.೯

೭೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಪೂರ್ವೋಕ್ತ, ಪು.೧೩೨

೭೨. ರಮೇಶ ನಾಯಕ (ಲೇ), ಪೂರ್ವೋಕ್ತ, ಪು.೫೪

೭೩. ವಾಸುದೇವ ಬಡಿಗೇರ (ಲೇ), ೨೦೧೧, ತುಂಗಭದ್ರಾ ನದಿ ಪರಿಸರದ ಮೈಲಾರ ಪರಂಪರೆ, ಗೋವಿಂದರಾಜು ಸಿ.ಆರ್. (ಸಂ), ಚರಿತ್ರೆ ಅಧ್ಯಯನ, ಪು.೭೯-೮೦

೭೪. ಅದೇ, ಪು.೮೧

೭೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೮, ೨೦೦೬, ಬೀದರ್ ಜಿಲ್ಲೆ, ಪು.೧೭೨-೧೭೬

೭೬. ಪಾಂಡುರಂಗರಾವ್ ದೇಸಾಯಿ, ಪೂರ್ವೋಕ್ತ, ಪು.೧೧೭

೭೭. ಅದೇ, ಪು.೧೧೮

೭೮. ಹಿರೇಮಠ ಎಸ್.ಎಸ್., ೨೦೦೫, ಜನಪದ-ಸಮಾಜ ಸಂಸ್ಕೃತಿ (ವಿಮರ್ಶೆ), ಪು.೨೮

೭೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೫, ಪೂರ್ವೋಕ್ತ, ಪು.೨೧೧

೮೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ೨೦೦೦, ಪು.೮೭

೮೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ೧೯೯೯, ಕೊಪ್ಪಳ ಜಿಲ್ಲೆ, ಪು.೩೧೬

೮೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಪೂರ್ವೋಕ್ತ, ಪು.೧೭೦-೧೭೧

೮೩. ರಮೇಶನಾಯಕ (ಲೇ), ಪೂರ್ವೋಕ್ತ, ಪು.೪೨

೮೪. ಅದೇ, ಪು.೪೩

೮೫. ಅದೇ, ಪು.೪೪

೮೬. ಅದೇ, ಪು.೪೪

೮೭. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೨೬

೮೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಪೂರ್ವೋಕ್ತ, ಪು.೨೮೨

೮೯. ರಮೇಶ ನಾಯಕ (ಲೇ), ಪೂರ್ವೋಕ್ತ, ಪು.೪೬

೯೦. ಅದೇ, ಪು.೪೭

೯೧. ಅದೇ, ಪು.೪೭–೪೮

೯೨. ಶ್ರೀನಿವಾಸ ರಿತ್ತಿ, ಪೂರ್ವೋಕ್ತ, ಪು.೧೦

೯೩. ಹಿರೇಮಠ ಎಸ್.ಎಸ್. ಪೂರ್ವೋಕ್ತ, ಪು.೧೫

೯೪. ದೇವರಕೊಂಡಾರೆಡ್ಡಿ (ಲೇ), ಪೂರ್ವೋಕ್ತ, ಪು.೨೯

೯೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೫, ಭಾಗ–೧, ಪೂರ್ವೋಕ್ತ, ಪು.೧೮೯

೯೬. ದೇವರಕೊಂಡಾರೆಡ್ಡಿ (ಲೇ), ಪೂರ್ವೋಕ್ತ, ಪು.೨೯

೯೭. ರಾಮಚಂದ್ರರಾವ್ ಎಸ್.ಕೆ., ೨೦೧೨, ಮೂರ್ತಿಶಿಲ್ಪದ ನೆಲೆ ಹಿನ್ನೆಲೆ, ಪು.೨೦೬

೯೮. ಅದೇ, ಪು.೨೦೭

೯೯. ಅದೇ, ಪು.೨೦೮

೧೦೦.ರಹಮತ್ ತರೀಕೆರೆ, ೨೦೧೩, ಕರ್ನಾಟಕದಲ್ಲಿ ನಾಥಪಂಥ, ಪು.೬೩

೧೦೧.ಪುರುಷೋತ್ತಮ ಬಿಳಿಮಲೆ, ೧೯೯೭, ಕೂಡುಕಟ್ಟು, ಪು.೧೦–೧೧

೧೦೨.ಅದೇ, ಪು.೧೭

೧೦೩.ಅದೇ, ಪು.೨೫

೧೦೪.ಅದೇ, ಪು.೨೬

೧೦೫.ಅದೇ, ಪು.೨೭

೧೦೬.ಅದೇ, ಪು.೨೯

೧೦೭.ಅದೇ, ಪು.೩೧

೧೦೮.ಹಿರೇಮಠ ಎಸ್.ಎಸ್., ಪೂರ್ವೋಕ್ತ, ಪು.೮



# ಅಧ್ಯಾಯ : ಮೂರು

## ದೇವಾಲಯಗಳು

೩.೧. ಕರ್ನಾಟಕದಲ್ಲಿ ಮೈಲಾರನ ಪ್ರಮುಖ ದೇವಾಲಯಗಳು

೩.೨. ಮೈಲಾರನಿಗೆ ಸಂಬಂಧಿಸಿದ ಇತರೆ ದೇವಾಲಯಗಳು

# ಅಧ್ಯಾಯ: ಮೂರು

# ದೇವಾಲಯಗಳು

ಭಾರತದ ತುಂಬಾ ಸುತ್ತಾಡಿದ ಯಾವುದೇ ವ್ಯಕ್ತಿಗೆ ಪ್ರತಿ ಹಳ್ಳಿ ಹಳ್ಳಿಯಲ್ಲಿ, ನದಿ ದಡದಲ್ಲೂ, ಬೆಟ್ಟದ ಮೇಲೆ, ಊರ ಮಧ್ಯದಲ್ಲಿ ಊರಿನ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಹೀಗೆ ಒಂದಲ್ಲಾ ಒಂದು ಕಡೆ ದೇವಾಲಯಗಳು ಕಾಣಬರುತ್ತವೆ. ಆ ದೇವಸ್ಥಾನದಲ್ಲಿರುವ ದೇವತೆ ಗ್ರಾಮದ ದೇವತೆಯಾಗಿರಬಹುದು, ಗ್ರಾಮದ ಒಂದು ಪಂಗಡದ ಅಧಿದೇವತೆ ಯಾಗಿರಬಹುದು. ದೇವತೆ ಯಾವುದಾದರೂ ಅದರ ಆರಾಧನೆಯ ಉದ್ದೇಶ, ಹಿನ್ನೆಲೆ ಎಲ್ಲರಿಗೂ ಒಂದೇ. ಈ ಕಾರಣದಿಂದಲೇ ರಾಜರ, ಅಧಿಕಾರಿಗಳ ಆಶ್ರಯದೊಂದಿಗೆ ಊರಿನ ಜನರ ಪೋಷಣೆಯಲ್ಲಿ ದೇವಾಲಯಗಳು ಬೆಳೆದು ಬಂದಿವೆ.[೧] ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆಯಾಗಿ ನಿಲ್ಲಬೇಕೆಂದು ತನ್ನ ಸುರಕ್ಷತೆಗಾಗಿ ಒಂದು ಸ್ಥಳದಲ್ಲಿ ವಾಸಮಾಡಬೇಕಾಗಿ ಎಂದಿನಿಂದ ಬಯಸಿದನೋ ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ ಸುತ್ತ ಗೋಡೆ, ಅದರ ಮೇಲೆ ವಿವಿಧ ಆಕಾರದ ಮುಚ್ಚಿಗೆ ಮುಂಭಾಗದಲ್ಲಿ ಬಾಗಿಲು, ಅದರ ಮೇಲೆ ಗಾಳಿ-ಬೆಳಕು ಬರಲು ಕಮಾನೂತರವು ಹೀಗೆ ವ್ಯಕ್ತಿಯ ಮನೆ ರೂಪಗೊಂಡಿತು. ಪ್ರಾಥಮಿಕವಾಗಿ ವಾಸ್ತುಶಿಲ್ಪ ಪ್ರಥಮ ಹೆಜ್ಜೆ ಇದಾಗಿದೆ.[೨]

ಮಾನವನು ಅನಾದಿ ಕಾಲದಿಂದಲೂ ದೈವಿಶಕ್ತಿಯೊಂದನ್ನು ರೂಪಿಸಿಕೊಂಡನು. ಅದರಲ್ಲಿ ನಂಬಿಕೆ, ಭಕ್ತಿ, ಭಯ ಹೀಗೆ ಹಲವು ಭಾವನೆಗಳನ್ನು ಉಳ್ಳವನಾಗಿ ಬಾಳುತ್ತಾ ಬಂದಿದ್ದಾನೆ. ಪ್ರಪಂಚದ ಎಲ್ಲಾ ನಾಗರೀಕತೆಗಳು ತಮ್ಮದೇ ಆದ ದೇವತಾ ಪರಿಕಲ್ಪನೆಯನ್ನು ಹೊಂದಿ, ತಮ್ಮದೇ ಆದ ರೀತಿಯಲ್ಲಿ ಉಪಾಸಿಸುತ್ತಾ ಬಂದಿವೆ. ಭರತ ಖಂಡವು ಇದಕ್ಕೆ ಹೊರತಾಗಿಲ್ಲ. ಜೊತೆಗೆ ಭಾರತವು ಇಡೀ ಜಗತ್ತಿನಲ್ಲಿ ಆಧ್ಯಾತ್ಮಭೂಮಿ, ಯೋಗಭೂಮಿ ಎಂಬ ಕೀರ್ತಿಗೆ ಪಾತ್ರವಾಗಿದೆ. ಭಾರತದ ಬಹುಮುಖ ಸಂಸ್ಕೃತಿ ಬೆಳವಣಿಗೆಗೆ ಮೂಲ ಕಾರಣ. ಈ ಆಧ್ಯಾತ್ಮ ಪ್ರವೃತ್ತಿಯೆಂದರೆ ಅತಿಶಯೋಕ್ತಿ ಆಗಲಾರದು.[೩]

'ದೇವಸ್ಯ ಆಲಯಂ ದೇವಾಲಯಂ' ದೇವಾಲಯವೆಂದರೆ ದೇವರ ವಾಸಸ್ಥಾನ. ದೇವಾಲಯವನ್ನು ಆಯತನವೆನ್ನುವುದು ಉಂಟು. ಆಯತನವೆಂದರೆ ದೇವತಾ ಶಕ್ತಿ ಆಗಮಿಸುವ ಪವಿತ್ರ ಸ್ಥಳ. ಇದು ದೇವತೆಗಳಿಗೆ ವಿಶ್ರಾಂತಿ ಸ್ಥಳವೂ ಹೌದು. ದೇವಾಲಯಗಳಲ್ಲಿ ದೇವತೆಗಳು ವಾಸವಾಗಿರುವುದರಿಂದ ವಿಶೇಷವಾಗಿಯೂ, ಅಲಂಕೃತವಾಗಿಯೂ, ವೈಭವಪೂರಿತವಾಗಿ ಹೊಂದಿರಬೇಕು ಎನ್ನುವುದು ಅಂದಿನ ಜನರ ನಂಬಿಕೆ ದೇವಾಲಯಗಳನ್ನು ತಳಪಾಯದಿಂದ ಶಿಖರದವರೆಗೆ ಎಲ್ಲಾ ಅಂಗಗಳನ್ನು ಕಲಾತ್ಮಕವಾಗಿ ಶೃಂಗರಿಸುತ್ತಿದ್ದರು. ಕಟ್ಟಡಗಳಲ್ಲಿ ಶಿಖರಗಳನ್ನು ವೈವಿಧ್ಯಮಯವಾಗಿ ಶಿಖರಗಳನ್ನು ರೂಪಿಸಲಾಗುತ್ತಿದ್ದವು.[೪]

ಕ್ರಿಸ್ತ ಶಕಕ್ಕೆ ಮುನ್ನ ದೇವಾಲಯಗಳು ರಚನೆಗೊಂಡವು ಎಂದು ಹೇಳಲು ಸಾಧ್ಯವಿಲ್ಲದ್ದರೂ ಅವುಗಳ ಸ್ವರೂಪ ವ್ಯಕ್ತವಾಗುವುದಿಲ್ಲ. ಹರಪ್ಪ ಮೆಹೆಂದಜೋದಾರೋ ಉತ್ಖನನಗಳಲ್ಲಿ ಕಟ್ಟಡಗಳನ್ನು ಗುರುತಿಸಬಹುದೇ ಹೊರತು, ದೇವಾಲಯಗಳೆಂದು ಗುರುತಿಸಲಾಗುವ ರಚನೆಗಳಲ್ಲಿ ಕ್ರಿಸ್ತಪೂರ್ವ ಎರಡನೆಯ ಶತಮಾನದಲ್ಲಿ ಡೆಲಿಯೋಡರಸ್ ಸ್ಥಾಪಿಸಿದ ಗರುಡಸ್ತಂಭದ ಉಲ್ಲೇಖ ವಾಸುದೇವನ ದೇವಾಲಯಕ್ಕೆ ಸಂಬಂದಿಸಿದ್ದು, ಇದು ದೇವಾಲಯಕ್ಕೆ ಸಂಬಂದಿಸಿದ ಪ್ರಾಚೀನ ಮಾಹಿತಿಯಾಗಿದೆ ಎಂದು ತಿಳಿಯಬಹುದು.[೫]

ಕರ್ನಾಟಕದಲ್ಲಿ ದೇವಾಲಯ ವಾಸ್ತುಶಿಲ್ಪ ಬೆಳೆದುಬಂದ ದಾರಿಯನ್ನು ಗುರುತಿಸಲು ಯತ್ನಿಸಿದರೆ, ಮೊದಲಿಗೆ ಶಾತವಾಹನರ ಕಾಲದಲ್ಲಿ ಬೌದ್ಧಧರ್ಮದ ಚೈತ್ಯ, ಸ್ತೂಪ, ವಿಹಾರಗಳು ಕಂಡುಬರುತ್ತದೆ. ಶಾತವಾಹನರ ಕಾಲದಲ್ಲಿ ಬೌದ್ಧ ಸ್ತೂಪಗಳು ಚೈತ್ಯಗಳೊಂದಿಗೆ ವೈದಿಕ ಧರ್ಮದ ರಚನೆಯಾಗಿರಬಹುದೆಂದು ಶಾಸನಗಳಿಂದ ತಿಳಿಯುತ್ತದೆ.[೬] ನಂತರದಲ್ಲಿ ಕದಂಬ ಗಂಗರ ಕಾಲದಲ್ಲಿ ದೇವಾಲಯಗಳು ನಿರ್ಮಾಣವಾದವು. ಇವರ ಕಾಲದಲ್ಲಿ ದೇವಾಲಯಗಳು ಇಟ್ಟಿಗೆಯಿಂದ ನಿರ್ಮಾಣವಾಗಿದೆ. ಆದರೆ ಹೆಚ್ಚಾಗಿ ಕಂಡುಬರುವುದಿಲ್ಲ. ಬಾದಾಮಿ ಚಾಲುಕ್ಯರ ಕಾಲದಲ್ಲಿ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಭರದಿಂದ ಸಾಗಿತ್ತೆಂದು ಹೇಳಬಹುದು. ಇವರ ಕಾಲದಲ್ಲಿ ದೇವಾಲಯಗಳು ಕಲ್ಲಿನಿಂದ ಕಟ್ಟಲಾಗಿದ್ದು ಬಾದಾಮಿ, ಐಹೊಳೆ, ಪಟ್ಟದಕಲ್ಲಿನಲ್ಲಿ ಈ ದೇವಾಲಯಗಳನ್ನು ಕಾಣಬಹುದಾಗಿದೆ. ಇವರ ನಂತರದ ಅವಧಿಯಲ್ಲಿ ರಾಷ್ಟ್ರಕೂಟ, ಗಂಗರು, ನೊಳಂಬರು ಹಾಗೂ ವಿಜಯನಗರ ಕಾಲದವರೆಗೆ ದೇವಾಲಯಗಳು ನಿರ್ಮಾಣವಾದುದರ ಬಗ್ಗೆ ಅನೇಕ ಪ್ರಾಚ್ಯಾವಶೇಷಗಳು ಇಂದಿಗೂ ಕಾಣಬಹುದು. ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ದೇವಾಲಯಗಳು ಹಲವು ಭಿನ್ನತೆಗಳಿಂದ ಕೂಡಿದ ದೇವಾಲಯಗಳಾಗಿವೆ. ಹೊಯ್ಸಳ ಕಾಲಾವಧಿಯಲ್ಲಿ ಹೊಸ ಹೊಸ ಪ್ರಯೋಗಗಳು ಹಾಗೂ ಸೂಕ್ಷ್ಮ ಕೆತ್ತನೆಗಳಿಂದ ದೇವಾಲಯಗಳು ನಿರ್ಮಾಣವಾಗಿದೆ ಎಂಬುದನ್ನು ಗಮನಾರ್ಹವಾಗಿದೆ.[೭]

ಕಾಲ ನಂತರದಲ್ಲಿ ಕರ್ನಾಟಕದ ವಿವಿಧ ಸ್ಥಳಗಳಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ಅಪರಿಮಿತವಾದ ದೇವಾಲಯಗಳು ನಿರ್ಮಾಣಗೊಂಡವು. ಬಾದಾಮಿ ಚಾಲುಕ್ಯರ ಕಾಲದ ದೇವಾಲಯಗಳು ಐಹೊಳೆ, ಬಾದಾಮಿ, ಪಟ್ಟದಕಲ್ಲಿನಲ್ಲಿ ನಿರ್ಮಾಣಗೊಂಡರೆ, ರಾಷ್ಟ್ರಕೂಟರ ಕಾಲದ ದೇವಾಲಯಗಳು ಎಲ್ಲೋರಾ ಹಾಗೂ ಕರ್ನಾಟಕದ ಕೆಲವು ಭಾಗಗಳಲ್ಲಿ ನಿರ್ಮಾಣವಾಗಿವೆ. ಚಾಲುಕ್ಯ ಕಾಲದ ದೇವಾಲಯಗಳು ಕುರುವತ್ತಿ, ಗದಗ, ಲಕ್ಕುಂಡಿಗಳಲ್ಲಿ ನಿರ್ಮಾಣಗೊಂಡರೆ ಹೊಯ್ಸಳರ ಕಾಲದ ದೇವಾಲಯಗಳು ಬೇಲೂರು, ಹಳೆಬೀಡು, ಸೋಮನಾಥಪುರಗಳಲ್ಲಿ ನಿರ್ಮಾಣವಾಗಿವೆ.[೮]

ನೊಳಂಬರ ಕಾಲದಲ್ಲಿ ದೇವಾಲಯಗಳು ಹೇಮಾವತಿಯಲ್ಲಿ ವಿಜಯನಗರದ ಕಾಲದ ದೇವಾಲಯಗಳು ಹಂಪಿಯಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಹೀಗೆ ಒಂದು ಕಾಲದ ಸಾಮ್ರಾಜ್ಯದಲ್ಲಿ ದೇವಾಲಯಗಳು ಒಂದು ಕೇಂದ್ರೀಕೃತವಾದ ಪ್ರದೇಶದಲ್ಲಿ ಮಾತ್ರವಲ್ಲದೆ ಬೇರೆಡೆಗಳಲ್ಲಿಯೂ ನಿರ್ಮಾಣವಾಗಿವೆ. ಒಂದು ಕಾಲದ ದೇವಾಲಯ ರಚನಾ ಶೈಲಿ ಆಯಾ ರಾಜವಂಶದ ರಾಜಧಾನಿ ಮತ್ತು ಆ ಪ್ರದೇಶದ ಸುತ್ತಲಿನ ಪ್ರದೇಶಗಳ ಪ್ರಮುಖ ದೇವಾಲಯಗಳು ನಿಖರವಾಗಿ ಪೂರ್ಣವಾಗಿ ನಿರ್ಮಾಣಗೊಂಡಿರುತ್ತವೆ.

ಹೀಗೆ ವಿವಿಧ ರಾಜವಂಶಗಳ ಕಾಲಾವಧಿಯಲ್ಲಿ ದೇವಾಲಯಗಳು ನಿರ್ಮಾಣವಾಗಿವೆ. ಪ್ರತಿಯೊಂದು ರಾಜವಂಶಗಳ ಕಾಲಾವಧಿಯಲ್ಲಿ ತಮ್ಮದೇ ಆದ ದೈವಗಳಿವೆ ವಿಶೇಷವಾದ ದೇವಾಲಯಗಳ ನಿರ್ಮಾಣ ಮಾಡಿ ಪೂಜಿಸುತ್ತಿದ್ದರು. ಪ್ರಮುಖವಾಗಿ ವಿವಿಧ ಹೆಸರುಗಳಿಂದ ಕರೆಯಲ್ಪಡುವ ಹಾಗೂ ವಿವಿಧ ಧರ್ಮದ ಹಿನ್ನೆಲೆಯಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಲಾಗುತ್ತದೆ. ಕರ್ನಾಟಕದ ವಿವಿಧ ಚಾರಿತ್ರಿಕ ಕಾಲಘಟ್ಟದಲ್ಲಿ ದೇವಾಲಯಗಳು ನಿರ್ಮಾಣವಾಗಿವೆ. ಪ್ರಾಚೀನ ಕಾಲದಿಂದಲೂ ದೇವಾಲಯಗಳಿಗೆ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಕರ್ನಾಟಕದಲ್ಲಿ ಮೈಲಾರನಿಗೆ ಸಂಬಂಧಿಸಿದ ಅನೇಕ ದೇವಾಲಯಗಳನ್ನು ಕಾಣಬಹುದಾಗಿದೆ. ಈ ದೇವಾಲಯಗಳು ಇಂದಿಗೂ ಸುಸ್ಥಿತಿಯಲ್ಲಿದ್ದು ಅನೇಕ ಭಕ್ತ ಸಮುದಾಯವನ್ನು ತನ್ನೆಡೆಗೆ ಸೆಳೆಯುವಲ್ಲಿ ತನ್ನದೇ ಆದ ಪಾತ್ರವನ್ನು ಹೊಂದಿದೆ. ಕರ್ನಾಟಕದಲ್ಲಿರುವ ಪ್ರಮುಖವಾದ ಮೈಲಾರನ ದೇವಾಲಯಗಳನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಛಾಯಾಚಿತ್ರ, ಶಾಸನ, ವಾಸ್ತುಶಿಲ್ಪ, ಹಾಗೂ ಸ್ಥಳೀಯರ ಮಾಹಿತಿಯಿಂದ ಈ ದೇವಾಲಯದ ಸ್ವರೂಪವನ್ನು ತಿಳಿಸುವ ಉದ್ದೇಶ ಈ ಅಧ್ಯಾಯವು ಹೊಂದಿದೆ.

ದಕ್ಷಿಣಭಾರತದಲ್ಲಿ ಪ್ರಮುಖವಾಗಿ ಆರಾಧನೆಗೆ ಒಳಪಡುವ ದೇವರು ಮೈಲಾರ. ಈ ಪರಂಪರೆಯು ಅಥವಾ ದೇವಾಲಯಗಳು ಎಲ್ಲೆಲ್ಲಿ ನಿರ್ಮಾಣವಾದವು ಎಂಬುದನ್ನು ತಿಳಿಯಲು ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು ಹಾಗೂ ಮೌಖಿಕ ಸಾಹಿತ್ಯವನ್ನು

ಗಮನಿಸುವುದು ಅವಶ್ಯವಾಗಿದೆ. ಪ್ರಮುಖವಾಗಿ ಮೈಲಾರ ದೇವರು ಆಂಧ್ರಪ್ರದೇಶ, ಕರ್ನಾಟಕ, ಮಹಾರಾಷ್ಟ್ರಗಳಲ್ಲಿ ಈ ದೈವಕ್ಕೆ ಸಂಬಂಧಿಸಿದಂತೆ ಅನೇಕ ಕುರುಹುಗಳು ಕಾಣಸಿಗುತ್ತವೆ. ಅದರಲ್ಲಿ ಪ್ರಮುಖವಾದ ಸ್ಥಾನಮಾನವನ್ನು ಪಡೆಯುತ್ತವೆ. ಮಹಾರಾಷ್ಟ್ರದಲ್ಲಿ ಖಂಡೋಬಾ (ಮೈಲಾರನಿಗೆ)ಗೆ ಸಂಬಂಧಿಸಿದಂತೆ ಪಾಲಿ, ನಳದುರ್ಗ, ಜೆಜೂರಿ, ಮಾಲೇಗಾಂವ, ಆರೋಥಮಲ್ಲಿ, ದಾಮಣಟೇಕ, ನೇವಾಸ, ಔರಂಗಾಬಾದ್ ಜಿಲ್ಲೆಯ ಸಾತರಗಳಲ್ಲಿ ಖಂಡೋಬಾನ ದೇವಾಲಯಗಳಿವೆ. ಈ ದೇವಾಲಯಗಳು ನಿರ್ಮಾಣದ ಹಿನ್ನೆಲೆಯೂ ಕರ್ನಾಟಕ, ಆಂಧ್ರಪ್ರದೇಶದ ದೇವಾಲಯ ನಿರ್ಮಾಣದ ನಂತರದಲ್ಲಿ ಹೆಚ್ಚಿನ ಸ್ಥಾನಮಾನ ನಿರ್ಮಾಣದ ಬಗ್ಗೆ ಆಕರಗಳು ದೊರೆಯುತ್ತದೆ. ಮುಂದುವರೆದು ಆಂಧ್ರಪ್ರದೇಶದಲ್ಲೂ ಮೈಲಾರನಿಗೆ ಸಂಬಂಧಿಸಿದಂತೆ ಐನವೋಲು, ಮೈಲಾರಂ, ಕೋಮರಾಳಿ, ಹಾಗೂ ವೆಲುಪಗೊಂಡ ಸ್ಥಳಗಳಲ್ಲಿ ಮೈಲಾರ ದೇವಾಲಯಗಳಿವೆ. ಆಂಧ್ರದ ರಂಗಾರೆಡ್ಡಿ ಜಿಲ್ಲೆಯ ವೆಲುಪಗೊಂಡ ಮೈಲಾರ ದೇವಾಲಯವಿದ್ದ ಬಗೆಗೆ ಶಾಸನವೊಂದು ಕ್ರಿ.ಶ ೧೦೧೯ ನೆಯ ಶತಮಾನದಲ್ಲಿ ಉಲ್ಲೇಖವಿದೆ.[೯] ಕರ್ನಾಟಕದಲ್ಲಿ ಮೈಲಾರನಿಗೆ ಸಂಬಂಧಿಸಿದಂತೆ ರಾಜ್ಯದ ತುಂಬಾ ದೇವಾಲಯಗಳು ಹರಡಿಕೊಂಡಿವೆ. ಈ ದೇವಾಲಯಗಳ ಪ್ರಾಚೀನತೆಗೆ ಸಂಬಂಧಿಸಿದಂತೆ ಅನೇಕ ಕುರುಹುಗಳು ದೊರೆಯುತ್ತದೆ. ಕೆಲವು ದೇವಾಲಯಗಳು ಶಾಸನೋಕ್ತ ದೇವಾಲಯಗಳಾದರೆ ಇನ್ನೂ ಕೆಲವು ದೇವಾಲಯಗಳು ವಾಸ್ತುಶಿಲ್ಪ ರಚನೆಯ ಹಿನ್ನೆಲೆಯಲ್ಲಿ ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ. ಕರ್ನಾಟಕದಲ್ಲಿ ಹೂವಿನಹಡಗಲಿ ಮೈಲಾರ, ತೆಕ್ಕಲಕೋಟೆಯ ಮಲ್ಲಯ್ಯ, ಕಂಪ್ಲಿಯ ಸೋಮೇಶ್ವರ, ದೇವರಗುಡ್ಡದ ಮಾಲತೇಶ, ದೇವಿಹೊಸೂರಿನ ಬನಶಂಕರಿ ಕಾರೀಮನಿ, ಗುಡೂರು, ಪ್ರೇಮಪುರ, ಧಾರವಾಡ, ಕುಬಟೂರು, ಯಾದಗಿರಿ, ದೇವರಹಿಪ್ಪರಗಿ, ಹನುಮಸಾಗರದ ಚಂದ್ರಗಿರಿ, ಮೈಲಾರಪುರ, ಮುಡುಕತೊರೆ, ದೇವರಬೆಳಕೆರೆ, ಚಿಕ್ಕನಾಯಕನಹಳ್ಳಿ ಹಾಗೂ ಇನ್ನಿತರ ಸ್ಥಳಗಳಲ್ಲಿ ದೇವಾಲಯಗಳಿವೆ. ಕರ್ನಾಟಕದಲ್ಲಿ ಪ್ರಾಚೀನವಾಗಿ ಮೈಲಾರನ ದೇವಾಲಯ ನಿರ್ಮಾಣವಾದುದರ ಉಲ್ಲೇಖ ಸಿಗುವುದು ತೆಕ್ಕಲಕೋಟೆಯ ಹರವಿನ ಮಲ್ಲಯ್ಯ ದೇವಾಲಯದಲ್ಲಿ ಕ್ರಿ.ಶ. ೧೦೧೭ ರ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಅರಸ ಜಗದೇಕ ಮಲ್ಲನ ಮಹಾಮಂಡಳೇಶ್ವರ ಇರುವ ನೊಳಂಬನು ನೊಳಂಬವಾಡಿ ೩೨ ಸಾವಿರವನ್ನು ಆಳುತ್ತಿರುವಾಗ ಬಲ್ಲಕುಂದೆ ಮುನ್ನೂರೊಳಗಿನ ಹಗರೆಯ ತಡೆಯ ಸಿರಯನೂರನ್ನು ಶ್ರೀಮತ್ ಮೈಲಾರ ದೇವರಿಗೆ ದಾನಬಿಟ್ಟ ಉಲ್ಲೇಖವಿದೆ.[೧೦] ಈ ಶಾಸನದ ಆಧಾರದಿಂದ ಪ್ರಾಚೀನವಾಗಿ ಮೈಲಾರ ದೇವಾಲಯಕ್ಕೆ ದತ್ತಿ ಬಿಟ್ಟ ಉಲ್ಲೇಖ ಶಾಸನದಿಂದ ಖಚಿತವಾಗುತ್ತದೆ. ಮೈಲಾರನ ಹೆಂಡತಿಯಾದ ಗಂಗೆಮಾಳಮ್ಮ, ಅಥವಾ ಮಾಳಚಿ ದೇವಾಲಯದ ಪ್ರಾಚೀನತೆಯೂ ಸಹ ೧೧ನೇ ಶತಮಾನಕ್ಕೆ ಸೇರುತ್ತದೆ. ಹಾವೇರಿ ಜಿಲ್ಲೆಯ ದೇವಿಹೊಸೂರು ಗ್ರಾಮದಲ್ಲಿ

ಮೈಲಾರನ ಹೆಂಡತಿಯಾದ ಮಾಳಚಿಯ ಉಲ್ಲೇಖಗಳಿರುವ ಎರಡು ಶಾಸನಗಳಿವೆ. ಕ್ರಿ.ಶ. ೧೦೬೩ ರ ಶಾಸನದಲ್ಲಿ ಚಾಲುಕ್ಯ ಅರಸ ೧ನೆಯ ಸೋಮೇಶ್ವರ ಆಳ್ವಿಕೆಯಲ್ಲಿ ಇಂದಪ್ಪಯ್ಯ ಎಂಬ ಅಧಿಕಾರಿ ಮಾಳಚಿ ದೇವಿಯ ಮಂದಿರಕ್ಕೆ ಮಕರ ತೋರಣವನ್ನು ಕಟ್ಟಿಸಿಕೊಟ್ಟ ವಿಷಯವನ್ನು ವಿವರಿಸಿದೆ.[೧೧] ಎರಡನೆ ಶಾಸನದ ಕಾಲ ಅದೇ ಚಾಲುಕ್ಯವಂಶದ ಚಕ್ರವರ್ತಿ ಜಗದೇಕಮಲ್ಲನ ಆಳ್ವಿಕೆಯ ಕಾಲದಲ್ಲಿ ಕ್ರಿಶ ೧೧೪೮ ರಲ್ಲಿ ಮಹಾಸಾಮಂತಾಧಿಪತಿ, ಸೇನಾಧಿಪತಿ ರೇಚರಸನು ಬನವಾಸಿ ಪ್ರಾಂತ್ಯವನ್ನು ಬಳ್ಳಿಗಾವೆ ರಾಜಧಾನಿಯಿಂದ ಆಳುತ್ತಿದ್ದನು. 'ದೇಯ್ವದ ಹೊಸವೂರು' ಎಂದರೆ ದೇವಿಹೊಸೂರಿನ ಮಾಳಚಿ ದೇವಾಲಯ ಭಕ್ತನಾಗಿದ್ದ ಈತನು ತಾನು ಆ ದೇವಿಗೆ ಬೇಡಿಕೊಂಡಿದ್ದ ಹರಕೆಯನ್ನು ಸಲ್ಲಿಸಲು ಆ ಗ್ರಾಮಕ್ಕೆ ಬಂದವನಾಗಿ, ಮಾಳಚಿ ದೇವಿಯ ಪ್ರಸಾದಕ್ಕೆ ಪಾತ್ರರಾದ ಅಲ್ಲಿಯ ಒಂದು ಸಾವಿರ ಮಹಾಜನಗಳ ಹಾಗೂ ಸ್ಥಾನಿಕ ಅಧಿಕಾರಿಗಳ ಸಮ್ಮುಖದಲ್ಲಿ ಆ ದೇವಿಯ ನೈವೇದ್ಯ ನಂದಾದೀಪಕ್ಕೆ ದತ್ತಿ ಬಿಟ್ಟಿದ್ದಾನೆ.[೧೨] ಈ ಪ್ರದೇಶದ ವರ್ತಕ ಸಮೂಹದವರು ನೆರೆದು ದೇವಿಯ ಉತ್ಸವಕ್ಕಾಗಿ ೪೦ ಮತ್ತರು ಭೂಮಿಯನ್ನು ದೇವಿಯ ಉಯ್ಯಾಲೆ ಸಮಾರಂಭಕ್ಕಾಗಿ ಸುಂಕದ ಉತ್ಪನ್ನವನ್ನು ಬಿಟ್ಟಂತೆ ಶಾಸನದಲ್ಲಿ ಹೇಳಿದೆ. ಹೀಗೆ ಮೈಲಾರ ಮಾಳಚಿದೇವಿಯ ಇದ್ದ ಬಗೆಗೆ ಹಾಗೂ ದೇವಾಲಯ ನಿರ್ಮಾಣವಾದುದರ ಬಗೆಗೆ ಈ ಶಾಸನಗಳು ಉಲ್ಲೇಖಗಳನ್ನು ನೀಡುತ್ತವೆ. ಕರ್ನಾಟಕದಲ್ಲಿ ಪ್ರಮುಖವಾಗಿರುವ ದೇವಾಲಯಗಳಲ್ಲಿ ಹೂವಿನಹಡಗಲಿಯ ಮೈಲಾರ ದೇವಾಲಯವಾಗಿದೆ. ಈ ದೇವಾಲಯದ ನಿರ್ಮಾಣದ ಬಗ್ಗೆ ಕ್ರಿ.ಶ. ೧೪ ನೇ ಶತಮಾನದ ನಂತರ ಅವಧಿಯಲ್ಲಿ ಶಾಸನಗಳಿಂದ ದೃಢೀಕರಿಸುತ್ತವೆ. ಕ್ರಿ.ಶ ೧೪೧೨ ರಲ್ಲಿ ಮೈಲಾರ ದೇವರ ಭಂಡಾರಿಯಾದ ನಾಗರಸನ ಮಗ ಗಂಗರಸನು ಮಾಳಲದೇವಿಗೆ ಸುಖನಾಸಿ, ನವರಂಗವನ್ನು ಕಟ್ಟಿಸಿದರೆ,[೧೩] ಕ್ರಿ.ಶ ೧೪೧೩ ರಲ್ಲಿ ಗಂಗರಸನು ಶ್ರೀ ಹೆಗ್ಗಡೆ ಪ್ರಧಾನಿಯ ಶಿಲಾಮಂಟಪವನ್ನು ಕಟ್ಟಿಸುತ್ತಾನೆ.[೧೪] ಕ್ರಿ.ಶ ೧೪೪೬ ರಲ್ಲಿ ಪ್ರೌಢದೇವರಾಯನ ನಿರೂಪದಂತೆ ಗಂಗರಸ ಶಿಲಾರಂಗ ಮಂಟಪವನ್ನು ಕಟ್ಟಿಸುತ್ತಾನೆ.[೧೫] ಕ್ರಿ.ಶ ೧೫೫೧ ರ ಮೈಲಾರದ ಶಾಸನ ಮೈಲಾರದ ಉತ್ಸವವನ್ನು ಉಲ್ಲೇಖಿಸುತ್ತದೆ.[೧೬] ಈ ರೀತಿಯಾಗಿ ಹೂವಿನಹಡಗಲಿಯ ಮೈಲಾರನ ಬಗೆಗೆ ೧೪ ನೇ ಶತಮಾನ ನಂತರದಲ್ಲಿ ಹೆಚ್ಚು ಪ್ರಸಿದ್ಧಿಗೆ ಹಾಗೂ ವಿಜಯನಗರ ಅರಸರ ಕಾಲಾವಧಿಯಲ್ಲಿ ದಾನದತ್ತಿಗಳನ್ನು ಬಿಡಲಾಗಿದೆ. ಕರ್ನಾಟಕದಲ್ಲಿ ಮೈಲಾರನಿಗೆ ಸಂಬಂಧಿಸಿದ ದೇವಾಯಲಗಳ ವಾಸ್ತುರಚನೆ, ಶಾಸನ ಹಾಗೂ ಪ್ರಾಚೀನತೆಯನ್ನು ತಿಳಿಸುವುದು ಈ ಅಧ್ಯಾಯದ ಪ್ರಮುಖವಾದ ನಿಲುವಾಗಿದೆ.

## ೩.೧. ಕರ್ನಾಟಕದಲ್ಲಿನ ಮೈಲಾರನ ಪ್ರಮುಖ ದೇವಾಲಯಗಳು

### ಮೈಲಾರ ಹೂವಿನಹಡಗಲಿ

ಸ್ಮಾರಕದ ಹೆಸರು : ಶ್ರೀ ಮೈಲಾರಲಿಂಗ ದೇವಾಲಯ

ಸ್ಥಳ : ಮೈಲಾರ ಗ್ರಾಮದ ಮಧ್ಯಭಾಗದಲ್ಲಿ

ತಾಲೂಕು : ಹೂವಿನಹಡಗಲಿ

ಕಾಲಮಾನ : ಕ್ರಿ.ಶ. ಸುಮಾರು ೧೪ನೇ ಶತಮಾನ

ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ಕರ್ನಾಟಕದಲ್ಲಿನ ಪ್ರಮುಖವಾದ ಮೈಲಾರನ ನೆಲೆಗಳಲ್ಲಿ ಬಳ್ಳಾರಿ ಜಿಲ್ಲೆಯ ಗಡಿಭಾಗದಲ್ಲಿ ಕಂಡುಬರುವ ಹೂವಿನಹಡಗಲಿ ತಾಲ್ಲೂಕಿನ ಗ್ರಾಮ ಮೈಲಾರ. ಮೈಲಾರ ಎಂಬುದು ದೈವದ ಹೆಸರೂ ಹೌದು, ಊರ ಹೆಸರು ಹೌದು. ಊರಿನಿಂದ ದೇವತೆಗೆ ಹೆಸರು ಬಂದಿತೋ, ದೇವತೆಯಿಂದ ಊರಿಗೆ ಹೆಸರು ಬಂದಿತೋ ಎಂಬುದನ್ನು ಹುಡುಕಲು ಹೋದರೆ ಊರಿಗೆ ದೇವತೆಯಿಂದಲೇ ಹೆಸರು ಬಂದಿರಬಹುದು ಎಂಬುವುದು ನನ್ನ ಊಹೆಯಾಗಿದೆ. ಮೈಲಾರ ದೇವಾಲಯವು ಮೈಲಾರ ಗ್ರಾಮದ ಮಧ್ಯಭಾಗದಲ್ಲಿದೆ. ಹಾವೇರಿ ತಾಲೂಕಿನಿಂದ ೨೫ ಕಿ.ಮೀ ದೂರದಲ್ಲಿದೆ. ಈ ಗ್ರಾಮದಿಂದ ಸುಮಾರು ಐದು ಕಿ.ಮೀ ದೂರದಲ್ಲಿ ಕಪ್ಪತಗುಡ್ಡದ ಶಾಖೆಗಳಿವೆ. ಮೈಲಾರ ಗ್ರಾಮದ ಸುತ್ತಮುತ್ತಲಿನ ಗ್ರಾಮಗಳು ಚಾರಿತ್ರಿಕವಾದ ಮಹತ್ವವನ್ನು ಪಡೆದ ಸ್ಥಳಗಳಾಗಿವೆ. ದೇವರಗುಡ್ಡ, ಐರಾಣಿ, ಹೊನ್ನತ್ತಿ, ಚೌಡದಾನಪುರ, ಗುತ್ತಲ, ಹಾವನೂರು, ಕುರುವತ್ತಿ, ಹೊಳಲು, ನೀಲಗುಂದ, ಹಿರೇಹಡಗಲಿ ಹಾಗೂ ಹೂವಿನಹಡಗಲಿ ಪ್ರದೇಶಗಳು ಐತಿಹಾಸಿಕ ಶ್ರೀಮಂತಿಕೆಯನ್ನು ಹೊಂದಿದ ಪ್ರದೇಶಗಳಾಗಿವೆ. ಮೈಲಾರ ಗ್ರಾಮದ ಸ್ವಲ್ಪ ದೂರದಲ್ಲಿ ಕಪ್ಪತಗುಡ್ಡ ಶಾಖೆಗಳಲ್ಲಿ ತುಂಗಭದ್ರ ನದಿಯು ಹರಿಯುತ್ತದೆ. ಈ ನದಿಯು ಉಂಗುರಾಕಾರವಾಗಿ ಹರಿಯುತ್ತದೆ. ಕ್ರಿ.ಶ ೧೪೪೬ ರ ಶಾಸನದಲ್ಲಿ ಮೈಲಾರವನ್ನು ಉಂಗುರಾಲವೆಂದು ಕರೆಯಲಾಗಿದೆ.[೧೭]

ಪ್ರಮುಖವಾಗಿ ಶಾಸನದಿಂದ ಉಲ್ಲೇಖವಾಗುವಂತೆ ಈ ನದಿಯು ಉಂಗುರಾಕಾರವಾಗಿ ಹರಿಯುತ್ತದೆ. ಪಶ್ಚಿಮಾಭಿಮುಖವಾಗಿ ಹರಿಯುವ ಈ ನದಿಯು ಉತ್ತರಾಭಿಮುಖವಾಗಿ ಹರಿದು ನಂತರ ಪೂರ್ವಾಭಿಮುಖವಾಗಿ ಹರಿಯುತ್ತದೆ. ಅದಕ್ಕಾಗಿ ಈ ನದಿಯು ವಿಶೇಷವಾಗಿ ಹರಿಯುವುದರಿಂದ ಈ ಸ್ಥಳಕ್ಕೆ ಶಾಸನಗಳಿಂದ ಮಹತ್ವವೆನಿಸಿದೆ. ಮೈಲಾರ ಗ್ರಾಮದಲ್ಲಿ ಕ್ರಿ.ಶ. ೧೩ ನೇ ಶತಮಾನದ ನಂತರದಲ್ಲಿ ಅನೇಕ ಶಾಸನ ಕಾಣಸಿಗುತ್ತವೆ. ಕ್ರಿ.ಶ ೧೩೬೮

ರ ಹೆಗ್ಗಪ್ಪ ದೇವಾಲಯದ ರಂಗಮಂಟಪದಲ್ಲಿರುವ ಶಾಸನದಲ್ಲಿ ಪ್ರೌಢದೇವರಾಯನ ಕಾಲದಲ್ಲಿ ದಂಡನಾಯಕ ಸಿಂಗಣ್ಣನ ಆದೇಶದ ಮೇರೆಗೆ ನಾಗಪ್ಪಯ್ಯನ ಮಗ ಮತ್ತು ಹೆಗ್ಗಡೆ ದೇವರಸನ ಸಹೋದರ ಗಂಗರಸನು ಈ ದೇವಾಲಯಕ್ಕೆ ಶಿಲಾರಂಗ ಮಂಟಪವನ್ನು ಕಟ್ಟಿಸಿದ ಉಲ್ಲೇಖವಿದೆ.[೧೮] ಕ್ರಿ.ಶ ೧೫೧೮ ಮೈಲಾರ ದೇವಾಲಯದ ಪ್ರಕಾರದಲ್ಲಿರುವ ಶಾಸನದಲ್ಲಿ ಮೈಲಾರನ ಉತ್ಸವ ಕುರಿತು ಉಲ್ಲೇಖಿಸುತ್ತದೆ.[೧೯] ಕ್ರಿ.ಶ ೧೪೧೨ ರ ಮೈಲಾರ ದೇವಾಲಯದ ಪ್ರಕಾರ ಗೋಡೆಯ ಈಶಾನ್ಯ ದಿಕ್ಕಿನಲ್ಲಿರುವ ಶಾಸನ ಮೈಲಾರ ದೇವರ ಭಂಡಾರಿಯಾದ ನಾಗರಸನ ಮಗನಾದ ಗಂಗರಸನು ಮಾಳಲದೇವಿಗೆ ಸುಖನಾಸಿ ಮತ್ತು ನವರಂಗವನ್ನು ಕಟ್ಟಿಸಿದ ಉಲ್ಲೇಖವಿದೆ.[೨೦] ಕ್ರಿ.ಶ ೧೪೪೩ ರ ಹೆಗ್ಗಪ್ಪ ದೇವಾಲಯದ ರಂಗಮಂಟಪದ ಪೂರ್ವ ತೊಲೆಯ ಮೇಲಿನ ಶಾಸನದಲ್ಲಿ ಮೈಲಾರ ದೇವರ ಭಂಡಾರದ ಅಧಿಕಾರಿ ನಾಗಣ್ಣನ ಮಗ ಗಂಗಯ್ಯನು ಹೆಗ್ಗಡೆ ದೇವರಿಗೆ ಕಲ್ಲಿನಮಂಟಪನ್ನು ಕಟ್ಟಿಸಿದ ಉಲ್ಲೇಖವಿದೆ.[೨೧] ಕ್ರಿ.ಶ ೧೩೬೮ ರ ಹೆಗ್ಗಪ್ಪ ದೇವಾಲಯದ ದಕ್ಷಿಣ ಕಂಬದ ಶಾಸನ ಮೈಲಾರನನ್ನು ಮೈಲಾರಶಂಕರನೆಂದು ಕರೆಯಲಾಗಿದೆ.[೨೨] ಕ್ರಿ.ಶ ೧೩ನೇ ಶತಮಾನದಿಂದ ೧೫ನೇ ಶತಮಾನದವರೆಗೆ ಈ ಗ್ರಾಮದಲ್ಲಿ ಅನೇಕ ಶಾಸನ ಸಿಗುತ್ತವೆ. ಈ ಶಾಸನಗಳ ಆಧಾರದಿಂದ ಮೈಲಾರ ಈ ವೇಳೆಗಾಗಲೇ ಹೆಚ್ಚು ಪ್ರಸಿದ್ಧಿಗೆ ಬಂದಿರಬಹುದು ಅದಕ್ಕಾಗಿ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ದೇವಾಲಯಗಳಿಗೆ, ಮಠಗಳಿಗೆ, ದಾನಬಿಟ್ಟ ಉಲ್ಲೇಖಗಳು ಈ ಪರಿಸರದಲ್ಲಿ ದೊರೆಯುತ್ತವೆ.

ಮೈಲಾರನ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದೆ. ವಿಶಾಲವಾದ ಪ್ರಾಂಗಣ ಹೊಂದಿದೆ. ಪೂರ್ವಾಭಿಮುಖವಾಗಿರುವ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ತೆರೆದ ಮಂಟಪಗಳಿಂದ ಕೂಡಿದೆ. ಈ ದೇವಾಲಯಕ್ಕೆ ಪೂರ್ವ ಮತ್ತು ದಕ್ಷಿಣದಿಂದ ಬರಲು ಪ್ರವೇಶ ದ್ವಾರಗಳಿವೆ. ದೇವಾಲಯದ ನಿರ್ಮಾಣದ ಬಗೆಗೆ ಶಾಸನದ ಉಲ್ಲೇಖಗಳಿಲ್ಲ. ಆದರೆ ದೇವಾಲಯದ ಜೀರ್ಣೋದ್ಧಾರಕ್ಕೆ ಸಂಬಂಧಿಸಿದಂತೆ ಸಭಾಮಂಟಪದಲ್ಲಿ ಕಂಬಗಳಲ್ಲಿ ಶಾಸನಗಳ ಉಲ್ಲೇಖಗಳಿವೆ. ಸಭಾಮಂಟಪದ ಹೊಳಪುಳ್ಳ ಕಂಬಗಳನ್ನು ಗಮನಿಸಿದಾಗ ದೇವಾಲಯವು ಕಲ್ಯಾಣಚಾಲುಕ್ಯರ ಕಾಲಕ್ಕೆ ಸಂಬಂಧಿಸಿ ನಿರ್ಮಿಸಿರಬಹುದೆಂದು ಊಹಿಸಬಹುದು. ಇದೇ ದೇವಾಲಯವು ವಿಜಯನಗರ ಅರಸರ ಕಾಲಾವಧಿಯಲ್ಲಿ ಹೆಚ್ಚು ಜೀರ್ಣೋದ್ಧಾರ ಗೊಂಡಿರುವುದು ಖಚಿತವಾಗುತ್ತದೆ. ಕರ್ನಾಟಕದ ಪ್ರಮುಖವಾದ ಮೈಲಾರನ ದೇವಾಲಯಗಳಲ್ಲಿ ಒಂದಾಗಿರುವ ಈ ದೇವಾಲಯ ಮೈಲಾರನ ಮೂಲಸ್ಥಳ ಎಂಬ ನಂಬಿಕೆ ಜನರಲ್ಲಿದೆ. ಆದರೆ ಶಾಸನಗಳು ಕ್ರಿ.ಶ. ೧೩-೧೪ ನೇ ಶತಮಾನದಲ್ಲಿ ದೊರೆಯುವುದರಿಂದ ಪ್ರಾಚೀನ ದೇವಾಲಯಗಳಲ್ಲಿ ಈ ದೇವಾಲಯವು ಒಂದಾಗಿದೆ. ಆದರೆ ಮೂಲಸ್ಥಳ ಎಂಬುವುದು ಆಕರಗಳ ಅಲಭ್ಯತೆಯಿಂದ ಗುರುತಿಸಲು

ಸಾಧ್ಯವಾಗದೇ ಉಳಿದಿದೆ. ದೇವಾಲಯದ ಪ್ರಾಂಗಣದಲ್ಲಿ ಅನೇಕ ಅವಶೇಷಗಳಿವೆ, ಶಿಲ್ಪಗಳಿವೆ, ಪರಿವಾರ ದೇವಾಲಯಗಳಿವೆ. ಪ್ರಮುಖವಾಗಿ ಭೈರವನಶಿಲ್ಪ, ನಂದಿಶಿಲ್ಪ, ವಿಷ್ಣುವಿನಶಿಲ್ಪ, ವೀರಭದ್ರನಶಿಲ್ಪ, ಪಕ್ಕದಲ್ಲಿ ಗಂಗೆಮಾಳಮ್ಮ ದೇವಾಲಯ ನರಬಲಿಶಿಲ್ಪ, ಕಂಚವೀರರು ಪವಾಡಮಾಡುವ ಸ್ಥಳ, ಕಾಳಿಶಿಲ್ಪ, ಸಪ್ತಮಾತೃಕೆಯ ಶಿಲ್ಪ, ಕಾಷ್ಟದಿಂದ ಮಾಡಿದ ಕುದುರೆಶಿಲ್ಪ, ಒಡೆಯರಿಗೆ ಸಂಬಂಧಿಸಿದ ಕಛೇರಿ ಹಾಗೂ ಆಂಜನೇಯ ಶಿಲ್ಪಗಳಿವೆ. ದೇವಾಲಯ ಮುಂಭಾಗದಲ್ಲಿ ದೀವಟಿಗೆಸೇವೆ, ಚಾಮರಸೇವೆ, ಚಾಟಿಸೇವೆಗಳು ನಡೆಯುತ್ತವೆ. ಮೈಲಾರ ಪ್ರಮುಖವಾದ ದೇವಾಲಯವಾಗಿದ್ದು ಭಕ್ತರು ಹೆಚ್ಚಿನ ಸಂಖ್ಯೆಯಲ್ಲಿ ದೇವಾಲಯಕ್ಕೆ ಬರುವುದು ವಿಶೇಷತೆಯಿಂದ ಕೂಡಿದೆ.

**ತೆಕ್ಕಲಕೋಟೆ ಹರವಿನ ಮಲ್ಲಯ್ಯ**

ಸ್ಮಾರಕದ ಹೆಸರು : ಹರಿವಿನ ಮಲ್ಲಯ್ಯ (ಮೈಲಾರ)

ಸ್ಥಳ : ತೆಕ್ಕಲಕೋಟೆಯ ಮಲ್ಲಯ್ಯನ ಗುಡ್ಡದಲ್ಲಿ

ತಾಲೂಕು : ಶಿರಗುಪ್ಪ

ಕಾಲಮಾನ : ಕ್ರಿಶ ಸುಮಾರು ೧೧ನೇ ಶತಮಾನ

ಸ್ಥಿತಿ : ಉತ್ತಮ

ಅಭಿಮುಖ : ಪಶ್ಚಿಮಾಭಿಮುಖ

ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲೂಕಿನ ತೆಕ್ಕಲಕೋಟೆಯಿಂದ ಸುಮಾರು ೨ ಕಿ.ಮಿ ದೂರದಲ್ಲಿ ಬೆಟ್ಟಗುಡ್ಡದ ತಪ್ಪಲಿನಲ್ಲಿ ಮಲ್ಲಯ್ಯನಗುಡ್ಡ ಸ್ಥಳವಿದೆ. ಈ ಸ್ಥಳವು ಸ್ಥಳೀಯವಾಗಿ ಹರವಿನ ಮಲ್ಲಯ್ಯ, ವರವಿನ ಮಲ್ಲಯ್ಯ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಆದರೆ ಶಾಸನದಲ್ಲಿ ಮೈಲಾರದೇವರು ಎಂಬ ಉಲ್ಲೇಖ ಕಾಣಬರುವುದರಿಂದ ಮೈಲಾರನ ದೇವಾಲಯವೆಂದು ಗುರುತಿಸಬಹುದಾಗಿದೆ. ಹರವಿನ ಮಲ್ಲಯ್ಯ ದೇವಾಲಯ ಶಾಸನೋಕ್ತ ದೇವಾಲಯವಾಗಿದೆ. ಕಲ್ಯಾಣ ಚಾಲುಕ್ಯ ಹಾಗೂ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ದೇವಾಲಯದ ಹಲವು ಭಾಗಗಳನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ದೇವಾಲಯದ ನಿರ್ಮಾಣದ ಬಗೆಗೆ ಇರುವ ಶಾಸನವು ಕ್ರಿ.ಶ. ೧೦೧೭ ರಲ್ಲಿ ಕಲ್ಯಾಣ ಚಾಲುಕ್ಯ ಅರಸ ಜಗದೇಕ ಮಲ್ಲನ ಸಾಮಂತ ಅರಸ ಇರುವ ನೊಳಂಬನು ನೊಳಂಬವಾಡಿ ೩೨೦೦೦ ಆಳುತ್ತಿರುವಾಗ ಬಲ್ಲಕುಂದೆ ಮೂರುನೂರರ ಹಗರೆಯ ತಡಿಯ ಸಿರಿಯನೂರನ್ನು ಶ್ರೀಮತ್ ಮೈಲಾರ ದೇವರಿಗೆ ದತ್ತಿ ಬಿಡಲಾಗಿದೆ.[೨೩] ಈ ಶಾಸನ ಆಧಾರದಿಂದ ಮೈಲಾರ ದೇವರಿಗೆ, ಮೈಲಾರನ ದೇವಾಲಯಕ್ಕೆ ದತ್ತಿ ಬಿಟ್ಟ ಉಲ್ಲೇಖ ಹಾಗೂ ಪ್ರಾಚೀನವಾಗಿ ಮೈಲಾರನ

ದೇವಾಲಯ ಇದಾಗಿದೆ. ಕರ್ನಾಟಕದಲ್ಲಿ ಕಂಡುಬರುವ ಶಾಸನೋಕ್ತ ದೇವಾಲಯಗಳಲ್ಲಿ ಅತೀ ಪ್ರಾಚೀನವಾದ ದೇವಾಲಯ ಇದಾಗಿದೆ. ದೇವಾಲಯವು ವಿಜಯನಗರ ಅರಸರ ಕಾಲದಲ್ಲಿ ಕೆಲವು ಭಾಗಗಳು ಜೀರ್ಣೋದ್ಧಾರಗೊಂಡ ಬಗೆಗೆ ಶಾಸನವು ಕ್ರಿ.ಶ ೧೫೩೪ ರ ಅಚ್ಯುತರಾಯನಿಗೆ ಪುಣ್ಯವಾಗಲೆಂದು ಪಯಜರ್ಯೆಯನು ಹರಿವಿನ ದೇವರ ನೈವೇದ್ಯಕ್ಕೆ ದಾನವನ್ನು ಪುನರ್ದತಿಯಾಗಿ ನೀಡಿದ್ದಾನೆ.[೨೪] ದೇವಾಲಯದ ಹೊರಭಾಗದಲ್ಲಿ ನೆಲಕ್ಕೆ ಹಾಸಿರುವ ಕಲ್ಲಿನ ಮೇಲೆ ಕ್ರಿ.ಶ ೧೭೦೧ ರ ಶಾಸನದಲ್ಲಿ ಮಹಾರಾಜ ಭೀಮ ಸಿಂಗ ಹೆಗಡೆ ಕಲ್ಲುದ್ವಾರವನ್ನು ಕಟ್ಟಿಸಿದ್ದಾನೆ. ಈ ದೇವರನ್ನು ಈ ಶಾಸನದಲ್ಲಿ ಹರವಿನ ಲಿಂಗಪ್ಪ ಎಂದು ತಿಳಿಸಲಾಗಿದೆ.[೨೫] ಈ ರೀತಿಯಾಗಿ ಶಾಸನಗಳ ಉಲ್ಲೇಖಗಳಿರುವ ದೇವಾಲಯವು ಕರ್ನಾಟಕದ ಪ್ರಮುಖ ಮೈಲಾರ ದೇವಾಲಯಗಳಲ್ಲಿ ಒಂದಾಗಿದೆ.

ಗುಡ್ಡದಮೇಲೆ ನಿರ್ಮಿತವಾಗಿ ವಿಶಾಲವಾದ ಪ್ರಾಂಗಣದಲ್ಲಿ ಹರಿವಿನ ಮಲ್ಲಯ್ಯನ ದೇವಾಲಯವಿದೆ. ಗರ್ಭಗೃಹ, ಸಭಾಮಂಟಪ, ಪ್ರದಕ್ಷಿಣಾಪಥ ಹಾಗೂ ನಂದಿ ಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಹರವಿನಮಲ್ಲಯ್ಯನ ಶಿಲ್ಪವಿದೆ. ಈ ಶಿಲ್ಪವು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಗರ್ಭಗೃಹದಲ್ಲಿ ಮಲ್ಲಯ್ಯ ಶಿಲ್ಪದ ಎಡಬದಿಯಲ್ಲಿ ಗಂಗಿಮಾಳಮ್ಮ ಬಲಬದಿಯಲ್ಲಿ ಲಕ್ಷ್ಮಿ ಶಿಲ್ಪಗಳಿವೆ. ದೇವಾಲಯದ ಪ್ರಾಂಗಣದಲ್ಲಿ ಶಿಬಾರಕಟ್ಟೆ, ದೀಪಸ್ತಂಭಗಳಿವೆ. ಪ್ರಾಕಾರ ಗೋಡೆಗೆ ಹೊಂದಿಕೊಂಡಂತೆ ಪ್ರವೇಶ ದ್ವಾರಗಳು ವಿಜಯನಗರ ಕಾಲಕ್ಕೆ ಸಂಬಂಧಿಸಿವೆ. ದೇವಾಲಯದ ಸುತ್ತಲೂ ಅನೇಕ ಬಿಡಿಶಿಲ್ಪಗಳಿವೆ. ಮೈಲಾರದೇವರಿಗೆ ನರಬಲಿ ಸಂಕೇತವಾಗಿ ನಾಲ್ಕು ನರಬಲಿ ಶಿಲ್ಪಗಳನ್ನು ಕಾಣಬಹುದಾಗಿದೆ. ಕುದುರೆಯ ಮೇಲೆ ಕುಳಿತಿರುವ ಮೈಲಾರ ಶಿಲ್ಪ ಭಗ್ನಗೊಂಡಿದೆ. ಈ ಭಗ್ನ ಶಿಲ್ಪವೇ ಈ ಮೊದಲು ಗರ್ಭಗೃಹದಲ್ಲಿ ಪೂಜೆಗೆ ಒಳಪಟ್ಟಿರಬಹುದು ಕಾಲಾನಂತರದಲ್ಲಿ ಈ ಶಿಲ್ಪವನ್ನು ಹೊರಗೋಡೆಗೆ ತಂದಿಡಲಾಗಿದೆ ಎಂಬುವುದು ನನ್ನ ಊಹೆಯಾಗಿದೆ. ಮೈಲಾರ ಮೂರ್ತಿ ಸ್ವರೂಪದ ಹಿನ್ನೆಲೆಯಲ್ಲಿ ಕುದುರೆಯ ಮೇಲೆ ಕುಳಿತ ಮೈಲಾರನು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ ಪಾನಪಾತ್ರೆಯನ್ನು ಹೊಂದಿರುವ ಮೈಲಾರ ದೇವಾಲಯ(ಹರವಿನಮಲ್ಲಯ್ಯ)ದ ಬಳಿ ಸಿಕ್ಕ ಶಿಲ್ಪವೂ ದೇವಾಲಯವು ಪ್ರಾಚೀನತೆಯನ್ನು ಸೂಚಿಸಲು ಪುಷ್ಟಿನೀಡುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಪ್ರಾಚೀನ ನೆಲೆಗಳಲ್ಲಿ ತೆಕ್ಕಲಕೋಟೆಯ ಹರವಿನ ಮಲ್ಲಯ್ಯ ದೇವಾಲಯವು ಅಗ್ರಮಾನ್ಯ ಸ್ಥಾನವನ್ನು ಪಡೆಯುತ್ತದೆ.

**ದೇವರಗುಡ್ಡದ ಮಾಲತೇಶ**

| | | |
|---|---|---|
| ಸ್ಮಾರಕದ ಹೆಸರು | : | ಮಾಲತೇಶ ದೇವಾಲಯ |
| ಸ್ಥಳ | : | ದೇವರಗುಡ್ಡದ ಎತ್ತರವಾದ ಗುಡ್ಡದಲ್ಲಿ |
| ತಾಲೂಕು | : | ರಾಣೇಬೆನ್ನೂರು |
| ಕಾಲಮಾನ | : | ವಿಜಯನಗರೋತ್ತರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವಾಭಿಮುಖ |

ಕರ್ನಾಟಕದ ಮೈಲಾರನ ದೇವಾಲಯಗಳಲ್ಲಿ ಎರಡನೇ ದೊಡ್ಡ ದೇವಾಲಯ ದೇವರಗುಡ್ಡದ ಮಾಲತೇಶ. ಹಾವೇರಿ ಜಿಲ್ಲೆಯ ರಾಣೇಬೆನ್ನೂರು ತಾಲೂಕಿನಿಂದ ಸುಮಾರು ೧೦ ಕಿ.ಮೀ ದೂರದ ಎತ್ತರವಾದ ಬೆಟ್ಟದ ಮೇಲೆ ದೇವಾಲಯವನ್ನು ಕಾಣಬಹುದು. ಜನರ ಮಾತಿನಿಂದ ಈ ಊರಿಗೆ ದೇವರಗುಡ್ಡ ಎಂಬ ಹೆಸರಿದೆ. ಆದರೆ ಸರ್ಕಾರಿ ದಾಖಲೆಗಳ ಪ್ರಕಾರ ಊರಿನ ಹೆಸರು ಗುಡ್ಡಗುಡ್ಡಾಪುರ ಎಂದು ಕಾಣಬಹುದಾಗಿದೆ. ಹೂವಿನಹಡಗಲಿ ಮೈಲಾರಕ್ಕೆ ಈ ಪ್ರದೇಶದ ಜನರು ದೇವರಗುಡ್ಡ ಮಾರ್ಗದಿಂದಲೇ ಹೋಗುತ್ತಾರೆ. ಹೂವಿನಹಡಗಲಿ ಮೈಲಾರವು ದೇವರಗುಡ್ಡ ಸ್ಥಳದಿಂದ ಸುಮಾರು ೧೦ ಕಿ.ಮೀ ದೂರದಲ್ಲಿದೆ. ದೇವರಗುಡ್ಡದ ಮಾಲತೇಶ (ಮೈಲಾರ) ಅಣ್ಣ, ಹೂವಿನಹಡಗಲಿ ಮೈಲಾರ ತಮ್ಮ ಎಂಬ ನಂಬಿಕೆ ಜನರಲ್ಲಿದೆ. ಮೈಲಾರನ ಅವತಾರ ಮೊದಲು ಈ ಪ್ರದೇಶದಲ್ಲಿ ಆಗಿದೆ ಎಂಬುದು ಜನರ ನಂಬಿಕೆಯಿದೆ.

ಈ ದೇವಾಲಯ ನಿರ್ಮಾಣದ ಬಗೆಗೆ ಯಾವುದೇ ಶಾಸನ ಆಧಾರಗಳಿಲ್ಲ, ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ಈ ದೇವಾಲಯವನ್ನು ವಿಜಯನಗರ ಕಾಲದಲ್ಲಿ ನಿರ್ಮಿಸಿರಬಹುದು ಹಾಗೂ ಕಾಲ ಕಾಲಕ್ಕೆ ಜೀರ್ಣೋದ್ಧಾರವಾಗಿದೆ, ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಹಾಗೂ ಸಭಾಮಂಟಪಗಳಿಂದ ಕೂಡಿದೆ. ನವರಂಗದಲ್ಲಿರುವ ನಾಲ್ಕು ಕಂಬಗಳು ಹೊಳಪುಳ್ಳ ಕಂಬಗಳು. ಈ ಕಂಬಗಳನ್ನು ಗಮನಿಸಿದಾಗ ಕಲ್ಯಾಣ ಚಾಲುಕ್ಯ ಕಾಲದ ಕಂಬಗಳನ್ನು ಹೋಲುತ್ತವೆ. ಗರ್ಭಗೃಹದಿಂದ ಪ್ರವೇಶದ್ವಾರವು ಅಲಂಕೃತವಾದ ಅರ್ಧಗಂಭ, ಹೂಬಳ್ಳಿ, ಪಟ್ಟಿಕೆ ಹಾಗೂ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪಗಳಿವೆ. ನವರಂಗದಲ್ಲಿ ಕಂಚಿನಿಂದ ಮಾಡಿದ ಮೈಲಾರನ ಉತ್ಸವಮೂರ್ತಿಯನ್ನು ಇಡಲಾಗಿದೆ. ಸಭಾಮಂಟಪದಲ್ಲಿ ಕಾಷ್ಟ (ಕಟ್ಟಿಗೆ)ದಿಂದ ಮಾಡಿದ ಅನೇಕ ಕುದುರೆ ಶಿಲ್ಪಗಳಿವೆ. ದೇವಾಲಯ ವಿಶಾಲವಾದ ಪ್ರಾಂಗಣವನ್ನು ಹೊಂದಿದೆ. ಪ್ರಾಂಗಣದಲ್ಲಿ ಮೈಲಾರನಿಗೆ ಸಂಬಂಧಿಸಿದ ಅನೇಕ

ಅವಶೇಷಗಳಿವೆ. ಎತ್ತರವಾದ ಗೋಪುರ ಈ ದೇವಾಲಯ ಹೊಂದಿದೆ. ದೇವಾಲಯದಲ್ಲಿ ಹೆಚ್ಚಾಗಿ ಭೈರವ ಮತ್ತು ಭೈರವಿ ಶಿಲ್ಪಗಳನ್ನು ಕಾಣಬಹುದು. ಮೈಲಾರ ಪರಿವಾರ ದೇವತೆಗಳಿಂದ ಗಂಗೆಮಾಳಮ್ಮ, ಚಿಕ್ಕಯ್ಯ, ದೊಡ್ಡಯ್ಯ, ಕುದುರೆ ಶಿಲ್ಪಗಳು ದೇವಾಲಯದಲ್ಲಿವೆ.

ಮೈಲಾರನಿಗೆ ಸಂಬಂಧಿಸಿದಂತೆ ಅನೇಕ ನಂಬಿಕೆ ಆಚರಣೆಗಳನ್ನು ಈ ದೇವಾಲಯದ ಪ್ರಾಂಗಣದಲ್ಲಿ ಮಾಡಲಾಗುತ್ತದೆ. ಮಾಲತೇಶ ದೇವಾಲಯದ ಉತ್ತರಬದಿಯಲ್ಲಿ ಗಂಗೆ ಮಾಳಮ್ಮನ ದೇವಾಲಯವಿದೆ. ಈ ದೇವಾಲಯದ ಎದುರಿಗೆ ದೊಡ್ಡದಾದ ದೀಪಸ್ತಂಭವಿದೆ. ಪ್ರಮುಖವಾಗಿ ಈ ದೇವಾಲಯದಲ್ಲಿ ಉತ್ತರಾಭಿಮುಖವಾದ ಮಾಲತೇಶ ದೇವಾಲಯದ ಗೋಡೆಯ ಮೇಲೆ ಮೈಲಾರನಿಗೆ ಸಂಬಂಧಿಸಿದ ಎರಡು ಮೈಲಾರನ ಶಿಲ್ಪಗಳನ್ನು ಗುರುತಿಸಿದ್ದೇನೆ. ಮೈಲಾರನ ತೊಡೆಯ ಮೇಲೆ ಗಂಗೆ ಮಾಳಮ್ಮ ಕುಳಿತಿದ್ದು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿದ್ದಾರೆ. ಈ ಶಿಲ್ಪದ ಕೆಳಭಾಗದಲ್ಲಿ ಕುದುರೆಯ ಉಬ್ಬುಶಿಲ್ಪ ಹಾಗೂ ಅದರ ಪಕ್ಕದಲ್ಲಿ ನರಬಲಿ (ರುಂಡಶಿಲ್ಪ) ಉಬ್ಬುಶಿಲ್ಪವಿದೆ. ಈ ಶಿಲ್ಪದ ಬಲಭಾಗದಲ್ಲಿ ಕುದುರೆಯ ಮೇಲೆ ಕುಳಿತ ಮೈಲಾರ ಶಿಲ್ಪದಲ್ಲಿ ಕೈಯಲ್ಲಿ ತ್ರಿಶೂಲ ಡಮರು ಹಿಡಿದಿರುವಂತೆ ಗೋಚರಿಸುತ್ತದೆ. ಈ ಶಿಲ್ಪಗಳನ್ನು ಗಮನಿಸಿದಾಗ ಈ ದೇವಾಲಯವು ವಿಜಯನಗರ ಕಾಲಾವಧಿಯಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದು ಮೈಲಾರನ ವಿವಿಧ ರೂಪಗಳಲ್ಲಿ ಶಿಲ್ಪಗಳಲ್ಲಿ ರಚನೆ ಮಾಡಿ ಪೂಜಿಸಲಾಗುತ್ತಿತ್ತು ಎನ್ನುವುದು ನನ್ನ ಊಹೆಯಾಗಿದೆ. ಯುದ್ಧಕ್ಕೆ ಹೋರಾಟ ಮಾಡಲು ಮೈಲಾರ ಹೊರಟಂತೆ ಕುದುರೆಯ ಮೇಲೆ ಕುಳಿತ ಮೈಲಾರ ಶಿಲ್ಪವು ಗೋಚರಿಸುತ್ತದೆ. ಈ ದೇವಾಲಯದಲ್ಲಿ ಕ್ಷೇತ್ರಕಾರ್ಯದಲ್ಲಿ ಗಮನಿಸಿದಾಗ ಪ್ರಮುಖವಾಗಿ ಗಮನಿಸಿದ ಅಂಶವೆಂದರೆ ದೇವದಾಸಿ ಬಿಡುವ ಪದ್ದತಿಯಿದೆ ಎಂದು ನನ್ನ ಅಭಿಪ್ರಾಯವಾಗಿದೆ. ಏಕೆಂದರೆ ದೇವದಾಸಿ ಪದ್ದತಿಯು ಮೈಲಾರ ಪರಂಪರೆಯು ಇತ್ತೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಹಾಗಾಗಿ ಈ ದೇವಾಲಯದ ಹೊರಭಾಗದಲ್ಲಿ ದೇವದಾಸಿ ಮಹಿಳೆಯನ್ನು ಗಮನಿಸಿದ್ದೇನೆ. ಈ ಮೊದಲು ದೇವದಾಸಿ ಪದ್ದತಿ ಇದ್ದು ಈಗ ಕಡಿಮೆಯಾಗಿದೆ[೨೬] ಎಂದು ನೇಗಿನಹಾಳ ರವರ ಅಭಿಪ್ರಾಯ ಆದರೆ ಈಗಲೂ ಈ ದೇವಾಲಯಕ್ಕೆ ದೇವದಾಸಿ ಬಿಡುವುದು ಆಚರಣೆ ಇದೆ ಎಂಬುವುದು ನನ್ನ ಊಹೆಯಾಗಿದೆ. ದೇವಾಲಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭೈರವ ಶಿಲ್ಪಗಳು ಪ್ರವೇಶದ್ವಾರ ಹಾಗೂ ಪ್ರಾಂಗಣದಲ್ಲಿ ದೊರೆತಿವೆ. ಅದಕ್ಕಾಗಿ ಗರ್ಭಗೃಹದಲ್ಲಿರುವುದು ಭೈರವಶಿಲ್ಪವನ್ನು ಮಾಲತೇಶನೆಂದು ಭೈರವಿಯನ್ನು ಗಂಗೆಮಾಳಮ್ಮಗಳೆಂದು ಊಹಿಸಬಹುದು. ಮೈಲಾರ ಹಾಗೂ ಭೈರವ ದೇವತೆಗಳ ಮೂರ್ತಿ ಲಕ್ಷಣಗಳಲ್ಲಿ ಅಷ್ಟು ವ್ಯತ್ಯಾಸ ಕಂಡುಬರುವುದಿಲ್ಲ. ಕೆಲವು ಕಡೆ ಭೈರವನನ್ನೇ ಮೈಲಾರನೆಂದು ಕರೆದು ಪೂಜಿಸಲಾಗುತ್ತದೆ.[೨೭] ಕರ್ನಾಟಕದ ಮೈಲಾರನ

ನೆಲೆಗಳಲ್ಲಿ ಕೆಲವು ಕಡೆ ಭೈರವನನ್ನೇ ಮೈಲಾರನೆಂದು ಪೂಜಿಸುವ ಪರಿಪಾಟ ಇಂದಿಗೂ ಕಾಣಬಹುದಾಗಿದೆ.

**ಕಂಪ್ಲಿಯ ಸೋಮೇಶ್ವರ**

| | | |
|---|---|---|
| ಸ್ಮಾರಕದ ಹೆಸರು | : | ಸೋಮೇಶ್ವರ |
| ಸ್ಥಳ | : | ಕಂಪ್ಲಿ ಗ್ರಾಮದ ಆಗ್ನೇಯ ದಿಕ್ಕಿನಲ್ಲಿ |
| ತಾಲೂಕು | : | ಹೊಸಪೇಟೆ |
| ಕಾಲ | : | ಕ್ರಿ.ಶ. ಸುಮಾರು ೧೧ನೇ ಶತಮಾನ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ಮೈಲಾರನ ನೆಲೆಗಳಲ್ಲಿ ಕಂಪ್ಲಿಯ ಸೋಮೇಶ್ವರ ಪ್ರಮುಖವಾದ ದೇವಾಲಯವಾಗಿದೆ. ತಾಲೂಕು ಕೇಂದ್ರದ ಹೊಸಪೇಟೆಯಿಂದ ಸುಮಾರು ೩೦ ಕಿ.ಮೀ ದೂರದಲ್ಲಿದೆ. ಗ್ರಾಮದ ದಕ್ಷಿಣದಲ್ಲಿ ಈ ದೇವಾಲಯವು ಕಂಡುಬರುತ್ತದೆ. ಸ್ಥಳೀಯವಾಗಿ ಕಂಪಿಲರಾಯ, ಕಂಪಿಲ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಕ್ರಿ.ಶ. ೧೦೦೦ ದಿಂದ ಕಂಪ್ಲಿಯು ನೊಳಂಬರ ಆಡಳಿತಕ್ಕೆ ಒಳಪಟ್ಟಿದ್ದರೂ ರಾಜಧಾನಿಯಾಗಿ ಇಮ್ಮಡಿ ಮಹೇಂದ್ರನ ಮಗನ ಕಾಲದಿಂದ ನೊಳಂಬರು ಮಡಕಶಿರ ತಾಲೂಕಿನ ಹೇಮಾವತಿಯನ್ನು ನೊಳಂಬರ ರಾಜಧಾನಿಯಾಗಿ ಮಾಡಿಕೊಂಡಿದ್ದರು. ಕಂಪ್ಲಿಗೆ ರಾಜಧಾನಿಯನ್ನು ಹೇಮಾವತಿಯಿಂದ ಬದಲಾಯಿಸಿದ ಮೇಲೆ ರಾಜಕೀಯವಾಗಿ ಇವರು ಕಲ್ಯಾಣಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು. ಕಲ್ಯಾಣ ಚಾಲುಕ್ಯರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳಸಿ ಅವರ ನಿಷ್ಠಾವಂತ ಮಾಂಡಳಿಕರಾಗಿದ್ದರು. ಚಾಲುಕ್ಯರ ಮಾಂಡಳಿಕರಾಗಿದ್ದರಿಂದ ಇವರು ತಮ್ಮ ದೇವಾಲಯಗಳ ರಚನೆ ವಾಸ್ತು, ಮೂರ್ತಿಶಿಲ್ಪಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ನೊಳಂಬರ ಆರಾಧ್ಯ ದೈವ ಹೆಂಜೇರು ಸಿದ್ದೇಶ್ವರ ರಾಜಕೀಯ ಕಾರಣಗಳಿಂದ ನೊಳಂಬರು ತಮ್ಮ ರಾಜಧಾನಿ ಹೇಮಾವತಿಯಿಂದ ಉತ್ತರದ ಕಂಪ್ಲಿಗೆ ರಾಜಧಾನಿಯನ್ನು ಸ್ಥಳಾಂತರ ಮಾಡಿದರು. ತಾವು ಆರಾಧನೆ ಮಾಡುತ್ತಿದ್ದ ದೈವವನ್ನು ತಮ್ಮ ಜೊತೆಯಲ್ಲಿ ತೆಗೆದುಕೊಂಡು ಬಂದು ಕಂಪ್ಲಿಯಲ್ಲಿ ಸೋಮೇಶ್ವರ ಎಂದು ಆರಾಧಿಸಿದರು. ಕಂಪ್ಲಿಯ ಸೋಮೇಶ್ವರ ದೇವಾಲಯ ವಿಶಾಲವಾದ ಪ್ರಾಕಾರದಲ್ಲಿ ಗರ್ಭಗೃಹ, ಅಂತರಾಳ ಮತ್ತು ತೆರೆದಮಂಟಪಗಳಿಂದ ಕೂಡಿದೆ. ಗರ್ಭಗೃದಲ್ಲಿರುವ ಸೋಮೇಶ್ವರ (ಭೈರವ)ನ ಶಿಲ್ಪ ಇತ್ತೀಚಿನ ರಚನೆಯಾಗಿದೆ. ಅಂತರಾಳದಲ್ಲಿ ಇಟ್ಟಿರುವ ಭಗ್ನಗೊಂಡಿರುವ ಭೈರವನ ಶಿಲ್ಪವು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ,

ಪಾನಪಾತ್ರೆಯಿದೆ. ಈ ಶಿಲ್ಪದ ಕೆಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪವಿದೆ. ಶಿಲ್ಪವನ್ನು ಮೊದಲು ಗರ್ಭಗೃಹದಲ್ಲಿಟ್ಟು ಪೂಜಿಸುತ್ತಿದ್ದಿರಬಹುದು. ಕಾಲಾನಂತರದಲ್ಲಿ ಅಂತರಾಳದಲ್ಲಿ ತಂದಿಡಲಾಗಿದೆ. ದೇವಾಲಯದ ನಿರ್ಮಾಣದ ಬಗ್ಗೆ ಶಾಸನೋಕ್ತ ಆಧಾರವು ಕಂಡುಬರುವುದಿಲ್ಲ. ದೇವಾಲಯದ ರಚನೆಯನ್ನು ಗಮನಿಸಿ ಕ್ರಿಶ ಸುಮಾರು ೧೦ ರಿಂದ ೧೧ ನೇ ಶತಮಾನದಲ್ಲಿ ರಚನೆಯಾಗಿದೆ ಎಂದು ಊಹಿಸಲಾಗಿದೆ. ಕ್ರಿಶ ೧೮೭೯ರ ಶಾಸನದಲ್ಲಿ ಮುದ್ದಾಪುರದ ಮುನೇಗೌಡರ ಮಗ ಗುರ‍್ರಾಪ್ಪನ ಹೆಂಡತಿ ಹಂಪಮ್ಮ ಸೇವಾರ್ಥ ಹೇವಳಂಬ ಎಂದು ಉಲ್ಲೇಖವಿದೆ.[೨೮] ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿದೆ. ಮೈಲಾರನಿಗೆ ಸಂಬಂಧಿಸಿದಂತೆ ಪ್ರಮುಖವಾಗಿ ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ. ನೊಳಂಬರು ತುಂಗಭದ್ರ ನದಿಯ ವಿರುದ್ದ ದಿಕ್ಕಿನಲ್ಲಿ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿ ಕಂಪ್ಲಿಯಲ್ಲಿ ಸೋಮೇಶ್ವರ ದೇವಾಲಯವನ್ನು ನಿರ್ಮಿಸಿರಬಹುದು. ಈ ದೇವಾಲಯವು ಮೈಲಾರನ ಪರಂಪರೆಯನ್ನು ತಿಳಿಸುವಲ್ಲಿ ಅಂತರಾಳದಲ್ಲಿ ಭಗ್ನಗೊಂಡ ಭೈರವನ ಶಿಲ್ಪ ಪ್ರಮುಖವಾದ ಆಕರವಾಗಿದೆ.

**ಧಾರವಾಡ ಮೈಲಾರ ಲಿಂಗೇಶ್ವರ**

| | | |
|---|---|---|
| ಸ್ಮಾರಕದ ಹೆಸರು | : | ಮೈಲಾರಲಿಂಗೇಶ್ವರ |
| ಸ್ಥಳ | : | ಧಾರವಾಡದ ವಿದ್ಯಾಗಿರಿ |
| ತಾಲೂಕು | : | ಧಾರವಾಡ |
| ಕಾಲ | : | ಕ್ರಿ.ಶ. ಸುಮಾರು ೧೧ನೇ ಶತಮಾನ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ಧಾರವಾಡದ ವಿದ್ಯಾಗಿರಿಯಲ್ಲಿ ಈ ದೇವಾಲಯವಿದೆ. ಹುಬ್ಬಳ್ಳಿ - ಧಾರವಾಡದ ಮಾರ್ಗದಲ್ಲಿ ವಿದ್ಯಾಗಿರಿಯ ಎತ್ತರವಾದ ಸ್ಥಳದಲ್ಲಿ ಈ ದೇವಾಲಯ ನಿರ್ಮಾಣವಾಗಿದೆ. ಧಾರವಾಡ ಬಸ್ ನಿಲ್ದಾಣದಿಂದ ಸುಮಾರು ೩ ಕಿ.ಮೀ ದೂರದಲ್ಲಿ ದೇವಾಲಯವನ್ನು ಕಾಣಬಹುದು. ದೇವಾಲಯದ ನಿರ್ಮಾಣದ ಬಗೆಗೆ ಯಾವುದೇ ಶಾಸನ ಆಧಾರ ಕಂಡುಬರುವುದಿಲ್ಲ. ಆದರೆ ೧೬೮೦ರ ಶಾಸನದಂತೆ ಧಾರವಾಡದ ಮೈಲಾರಲಿಂಗೇಶ್ವರ ದೇವಾಲಯವನ್ನು ಮಸೀದಿಯಾಗಿ ಆದಿಲ್ ಷಾ ಪರಿವರ್ತಿಸಿದ ಬಂಕಾಪುರದಲ್ಲಿದ್ದ ವೆಲ್ಲಪ್ಪ ಎಂಬ ವಿಜಯನಗರ ಅಧಿಕಾರಿಯನ್ನು ಸೋಲಿಸಿ ಮುಸ್ತಫ್‌ಖಾನ್ ಅದನ್ನು ಗೆದ್ದುಕೊಂಡ ಎಂಬ ಮಾಹಿತಿ ದೊರಕುತ್ತದೆ.[೨೯] ಮತ್ತೆ ಈ ದೇವಾಲಯವನ್ನು ಕ್ರಿ.ಶ

೧೭೫೩ ರಲ್ಲಿ ಪೇಶ್ವೆಯರ ಆಡಳಿತಕ್ಕೆ ಒಳಪಟ್ಟ ಮೇಲೆ ಮಸೀದಿಯನ್ನು ಮೈಲಾರ ದೇವಾಲಯವಾಗಿ ಮಾಡಲಾಗಿದೆ.[೩೦] ಪ್ರಸ್ತುತವಾಗಿ ಇರುವ ಮೈಲಾರನ ದೇವಾಲಯವು ಉತ್ತಮ ಸ್ಥಿತಿಯಲ್ಲಿದೆ. ಮೈಲಾರ ಮತ್ತು ಮಸೀದಿ ಎರಡೂ ಸ್ಮಾರಕಗಳು ಈ ಸ್ಥಳದಲ್ಲಿವೆ. ದೇವಾಲಯದ ನಾಶಮಾಡಿ ಮಸೀದಿಯನ್ನು ನಿರ್ಮಿಸಿರುವುದರಿಂದ ದೇವಾಲಯಗಳಲ್ಲಿದ್ದ ಶಾಸನಗಳು, ಮೂರ್ತಿಗಳು ಹಾಗೂ ಅವಶೇಷಗಳು ನಾಶವಾಗಿರುವ ಸಾಧ್ಯತೆ ಇದೆ.

ಪ್ರಸ್ತುತ ಮೈಲಾರನ ದೇವಾಲಯವು ಪ್ರಾಂಗಣವನ್ನು ಹೊಂದಿದೆ. ಗರ್ಭಗೃಹ, ನವರಂಗ ಹೊಂದಿರುವ ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿದೆ. ನವರಂಗದಲ್ಲಿರುವ ನಾಲ್ಕು ಕಂಬಗಳು ಕಲ್ಯಾಣಚಾಲುಕ್ಯರ ಕಂಬಗಳನ್ನು ಹೋಲುತ್ತವೆ. ಅಲಂಕರಣೆಯಲ್ಲಿ ವಿಶೇಷತೆಯಿಂದ ಕೂಡಿದೆ. ಗರ್ಭಗೃಹದಲ್ಲಿರುವ ಮೈಲಾರನ ಮೂರ್ತಿಶಿಲ್ಪವು ವಿಶೇಷತೆಯಿಂದ ಕೂಡಿದೆ. ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ಶಿಲ್ಪದ ಕೆಳಭಾಗದಲ್ಲಿ ಕುದುರೆಯ ಉಬ್ಬುವಿದೆ. ದೇವಾಲಯದ ಹೊರಭಾಗದಲ್ಲಿ ಭಗ್ನಗೊಂಡಿರುವ ಅನೇಕ ಮೂರ್ತಿಶಿಲ್ಪಗಳಿವೆ. ಈ ದೇವಾಲಯಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಬರುತ್ತಾರೆ. ವರ್ಷಕ್ಕೊಮ್ಮೆ ಈ ಸ್ಥಳದಲ್ಲಿ ಜಾತ್ರೆಯಲ್ಲಿ ಅನೇಕ ನಂಬಿಕೆ ಆಚರಣೆಗಳನ್ನು ಮಾಡುತ್ತಾರೆ.

**ಚಂದ್ರಗಿರಿಯ ಚಂದಾಲಿಂಗೇಶ್ವರ**

ಸ್ಮಾರಕದ ಹೆಸರು : ಚಂದಾಲಿಂಗೇಶ್ವರ

ಸ್ಥಳ : ಹನುಮಸಾಗರದ ಚಂದ್ರಗಿರಿಯ ಗುಡ್ಡದಲ್ಲಿ

ತಾಲೂಕು : ಕುಷ್ಟಗಿ

ಕಾಲ : ಕ್ರಿ.ಶ. ಸುಮಾರು ೧೩ನೇ ಶತಮಾನ

ಸ್ಥಿತಿ : ಮಧ್ಯಮ

ಅಭಿಮುಖ : ದಕ್ಷಿಣ

ಚಂದಾಲಿಂಗೇಶ್ವರ ದೇವಾಲಯ ಹನುಮಸಾಗರದಿಂದ ೫ ಕಿ.ಮೀ ದೂರದಲ್ಲಿದೆ. ಚಂದಾಲಿಂಗೇಶ್ವರ ದೇವಾಲಯವು ಚಂದ್ರಗಿರಿಯಾಗಿತ್ತು. ಸ್ಥಳೀಯವಾಗಿ ಈ ದೈವವನ್ನು ಚಂದಾಲಿಂಗೇಶ್ವರ ಎಂಬ ಹೆಸರಿನಿಂದ ಕರೆಯುತ್ತಾರೆ. ಆದರೆ ಮೈಲಾರನಿಗೆ ಸಂಬಂಧಿಸಿದ ಅವಶೇಷಗಳು ಕಂಡುಬರುತ್ತವೆ. ದೇವಾಲಯದ ನಿರ್ಮಾಣದ ಬಗ್ಗೆ ಯಾವುದೇ ಶಾಸನಗಳು ದೊರೆಯುವುದಿಲ್ಲ. ಆದರೆ ಕ್ರಿ.ಶ. ೧೩೪೫ರ ದೇವಾಲಯದೊಳಗೆ ಇರುವ ಶಾಸನವು ಭಂಡಾರಿ, ಹೆಗ್ಗಡೆ, ಮಾರಮಯ್ಯ ಎಂಬ ವಿವರಗಳಿವೆ.[೩೧] ಈ ಶಾಸನದ ಆಧಾರದಿಂದ

ಮೈಲಾರನಿಗೆ ಸಂಬಂಧಿಸಿದ ಅನೇಕ ಪರಿವಾರವನ್ನು ದೇವಾಲಯದಲ್ಲಿ ಕಾಣಬಹುದು. ಚಂದಾಲಿಂಗೇಶ್ವರ ದೇವಾಲಯ ಮೈಲಾರನ ದೇವಾಲಯವಾಗಿದೆ. ವಿಶಾಲವಾದ ಪ್ರಾಂಗಣ ಗೋಡೆಯನ್ನು ಹೊಂದಿದೆ. ಕಲ್ಯಾಣಚಾಲುಕ್ಯರ ಕಾಲಾವಧಿಯಲ್ಲಿ ದೇವಾಲಯದ ರಚನೆಗಳು ಕಂಡುಬರುತ್ತವೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ, ಮುಖಮಂಟಪ ಮತ್ತು ನಂದಿಮಂಟಪಗಳನ್ನು ಹೊಂದಿದೆ. ಗರ್ಭಗೃಹದ ದ್ವಾರಬಂಧವು ಪಟ್ಟಿಕೆಗಳಿಂದ ಕೂಡಿದೆ. ಅಂತರಾಳದ ದ್ವಾರದ ಪಕ್ಕದಲ್ಲಿ ಜಾಲಾಂದ್ರಗಳಿಂದ ಕೂಡಿದೆ. ಅಂತಾರಾಳದಲ್ಲಿ ನಾಲ್ಕು ಚೌಕಾಕಾರದ ಕಂಬಗಳಿವೆ. ಸಭಾಮಂಟಪದ ದ್ವಾರವು ಸಾಧಾರಣವಾಗಿದ್ದು ಅಕ್ಕಪಕ್ಕದಲ್ಲಿ ಶೈವದ್ವಾರಪಾಲಕರಿದ್ದಾರೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಅರ್ಧಮಂಟಪದಲ್ಲಿ ಒಟ್ಟು ೧೨ ಕಂಬಗಳನ್ನು ಕಾಣಬಹುದಾಗಿದೆ. ಮುಖಮಂಟಪವನ್ನು ಕಾಲನಂತರದಲ್ಲಿ ಜೀರ್ಣೋದ್ಧಾರ ಗೊಳಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ತೆರೆದ ನಂದಿಮಂಟಪವಿದೆ. ನಂದಿಯು ಕಪ್ಪುಶಿಲೆಯಿಂದ ಕೂಡಿದೆ. ತೆರೆದ ನಂದಿಮಂಟಪ ವಿಶೇಷತೆಯಿಂದ ಕೂಡಿದ್ದು ೧೨ ಕಂಬಗಳಿಂದ ಕೂಡಿದ ನಂದಿ ಮಂಟಪವಾಗಿದೆ. ಮೈಲಾರನಿಗೆ ಸಂಬಂಧಿಸಿದ ದೇವಾಲಯ ಇದಾಗಿದ್ದು ಗಂಗೆಮಾಳಮ್ಮನ ದೇವಾಲಯ, ಹೆಗ್ಗಡೆ ಪ್ರಧಾನಿ ದೇವಾಲಯ, ದೇವಾಲಯದ ಹೊರಭಾಗದಲ್ಲಿ ಶಿಖರವನ್ನು ಕಾಣಬಹುದು. ವಿಶಾಲವಾದ ಪ್ರಾಂಗಣದಲ್ಲಿ ಬಿಸಿಲು ಬೀಳದ ಬಾವಿ, ದೊಡ್ಡ ಹೊಂಡ, ಪಂಚಲಿಂಗ ಗುಡಿ, ಸಂಗಮೇಶ್ವರಗುಡಿ, ವೀರಭದ್ರನಗುಡಿ, ಮುದ್ದಮ್ಮ, ದ್ಯಾಮವ್ವ, ಭರಮಪ್ಪ, ಹನುಮಂತ ಗುಡಿಗಳನ್ನು ಕಾಣಬಹುದು. ದೇವಾಲಯದಲ್ಲಿ ಲೋಹದಿಂದ ಮಾಡಿದ ಕುದುರೆ ಮೇಲೆ ಕುಳಿತ ಮೈಲಾರ ಮಾಳಮ್ಮನ ಶಿಲ್ಪಗಳನ್ನು ಕಾಣಬಹುದು.

ಸ್ಥಳೀಯರ ನಂಬಿಕೆಯಂತೆ ಗುಡೂರಿನ ಹುಲ್ಲಪ್ಪ, ಚಂದಪ್ಪನ ಮಗನಾಗಿದ್ದಾನೆ. ಚಂದಪ್ಪ ಮತ್ತು ಮಾಳಮ್ಮನ ಮಗ ಹುಲ್ಲಪ್ಪನಾಗಿದ್ದಾನೆ. ವರ್ಷದಲ್ಲಿ ಎರಡು ಬಾರಿ ಜಾತ್ರೆಯಾಗುತ್ತದೆ. ಈ ದೇವಾಲಯಕ್ಕೆ ಜಾತ್ರೆಯ ಸಮಯದಲ್ಲಿ ಕಾರಣಿಕ, ಸರಪಳಿ ಪವಾಡ, ನಂದೀ ಕೋಲು, ಡೊಳ್ಳಿನ ಕುಣಿತಗಳು ಕಂಡುಬರುತ್ತವೆ. ವಿಶೇಷವಾಗಿ ಈ ದೇವಾಲಯವು ಮೈಲಾರನ ಆರಾಧನೆಯ ಸ್ಥಳವಾಗಿದೆ. ಗುಡ್ಡ ಪರಿಸರದಲ್ಲಿ ಈ ದೇವಾಲಯವು ನಿರ್ಮಾಣವಾಗಿದೆ.

**ಗುಡೂರು ಹುಲ್ಲಪ್ಪ**

ಸ್ಮಾರಕದ ಹೆಸರು : ಹುಲ್ಲಪ್ಪ

ಸ್ಥಳ : ಗುಡೂರು ಗ್ರಾಮದ ಮಧ್ಯ ಭಾಗದಲ್ಲಿ

ತಾಲುಕು : ಹುನಗುಂದ

ಕಾಲ : ವಿಜಯನಗರೋತ್ತರ

ಸ್ಥಿತಿ : ಉತ್ತಮ

ಅಭಿಮುಖ : ಉತ್ತರ

ಗುಡೂರು ಹುಲ್ಲಪ್ಪ ದೇವಾಲಯವು ಬಾದಾಮಿಯಿಂದ ೩೫ ಕಿ.ಮೀ ದೂರದಲ್ಲಿದೆ. ಸ್ಥಳೀಯವಾಗಿ ಈ ದೈವವನ್ನು ಹುಲ್ಲಪ್ಪ ಎಂದು ಕರೆಯುತ್ತಾರೆ. ಮೈಲಾರನಿಗೆ ಸಂಬಂಧಿಸಿದಂತೆ ಅನೇಕ ಅವಶೇಷಗಳು ಕಂಡುಬರುತ್ತವೆ. ದೇವಾಲಯದ ನಿರ್ಮಾಣದ ಬಗೆಗೆ ಯಾವುದೇ ಶಾಸನ ಆಧಾರಗಳಿಲ್ಲ. ದೇವಸ್ಥಾನದ ರಚನಾ ದೃಷ್ಟಿಯಿಂದ ವಿಜಯನಗರೋತ್ತರ ಕಾಲದ್ದು ಎಂದು ಊಹಿಸಬಹುದಾಗಿದೆ. ಉತ್ತರಾಭಿಮುಖವಾದ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಹುಲ್ಲಪ್ಪ ಹಾಗೂ ವೀರಭದ್ರನೆಂದು ಪೂಜಿಸಲಾಗುತ್ತದೆ. ಹುಲ್ಲಪ್ಪನೆಂದರೆ ಮೈಲಾರ. ಆದರೆ ವೀರಭದ್ರ ಶಿಲ್ಪವನ್ನು ಗರ್ಭಗೃಹ ಹುಲ್ಲಪ್ಪನ ಪಕ್ಕದಲ್ಲಿಟ್ಟು ಪೂಜಿಸಲು ಕಾರಣವೇನು..? ಎಂಬ ಪ್ರಶ್ನೆ ಮೂಡುತ್ತದೆ. ಪ್ರಮುಖ ಮೈಲಾರನ ಆರಾಧನಾ ಸ್ಥಳಗಳಲ್ಲಿ ಗರ್ಭಗೃಹದಲ್ಲಿ ಮೈಲಾರನ ಶಿಲ್ಪಗಳನ್ನು ಕಾಣಬಹುದು ಅಥವಾ ಮೈಲಾರನ ಹೆಂಡತಿಯಾದ ಗಂಗೆ ಮಾಳಮ್ಮನ ಶಿಲ್ಪವನ್ನು ಕಾಣಬಹುದು. ಗರ್ಭಗೃಹದಲ್ಲಿ ವೀರಭದ್ರ ಮತ್ತು ಮೈಲಾರನ ಶಿಲ್ಪಗಳನ್ನು ಇಟ್ಟು ಪೂಜಿಸುವುದು ವಿಶೇಷವಾಗಿದೆ. ಮೈಲಾರ ಮತ್ತು ವೀರಭದ್ರ ಶಿಲ್ಪಗಳಲ್ಲಿ ಕೆಲವೊಂದು ವ್ಯತ್ಯಾಸಗಳಿವೆ. ಸಂಪ್ರದಾಯ, ನಂಬಿಕೆ, ಆಚರಣೆಗಳಿಗೆ ಸಂಬಂಧಿಸಿದಂತೆ ಮೈಲಾರ ಮತ್ತು ವೀರಭದ್ರನಿಗೆ ಸಾಮ್ಯತೆಯಿದೆ. ದೇವಾಲಯದ ಪ್ರಾಂಗಣವು ವಿಶಾಲವಾಗಿದ್ದು ಗಂಗೆಮಾಳಮ್ಮನ ಗುಡಿ ಕಂಚಾವೀರರ ಸ್ಥಾನ, ಹೆಗ್ಗಡೆ ಪ್ರಧಾನಿಯ ಗುಡಿ ದೇವಾಲಯದ ಎದುರಿಗೆ ದೊಡ್ಡ ಶಿಬಾರವನ್ನು ಕಾಣಬಹುದಾಗಿದೆ. ದೇವಾಲಯದ ಹೊರಭಾಗದಲ್ಲಿರುವ ಎರಡು ಶಿಲ್ಪಗಳಿವೆ. ಶಿಲ್ಪಗಳನ್ನು ವಿದ್ವಾಂಸರಾದ ನೇಗಿನಹಾಳ ಎಂ. ಬಿ ಅವರು ಮೈಲಾರ-ಮಾಳಮ್ಮನ ಶಿಲ್ಪಗಳು ಎಂದು ಗುರ್ತಿಸುತ್ತಾರೆ. ಗರ್ಭಗೃಹದಲ್ಲಿ ಈ ಶಿಲ್ಪಗಳನ್ನು ಪೂಜಿಸುತ್ತಿದ್ದಿರಬಹುದು, ಕಾಲಾನಂತರದಲ್ಲಿ ಹೊರತಂದಿಡಲಾಗಿದೆ ಎಂಬುದು ಅವರ ಅಭಿಪ್ರಾಯ. ಆದರೆ ಈ ಶಿಲ್ಪಗಳು ಮೈಲಾರನ ಮೂರ್ತಿಶಿಲ್ಪಗಳಿಗೆ ಯಾವುದೇ ಹೋಲಿಕೆಯಾಗುವುದಿಲ್ಲ. ಈ ಶಿಲ್ಪಗಳು ವೀರಗಲ್ಲುಗಳು ಎಂಬುವುದು ನನ್ನ ಅಭಿಪ್ರಾಯವಾಗಿದೆ. ದೇವಾಲಯದ ಪ್ರಾಂಗಣದಲ್ಲಿ ಅನೇಕ ಭಗ್ನ ಅವಶೇಷಗಳನ್ನು ಕಾಣಬಹುದು. ಗುಡೂರು ಹುಲ್ಲಪ್ಪನಿಗೆ ವರ್ಷದಲ್ಲಿ ಎರಡು ಬಾರಿ ಜಾತ್ರೆಯಾಗುತ್ತವೆ. ಮೈಲಾರನಿಗೆ ಸಂಬಂಧಿಸಿದಂತೆ ಸರಪಳಿ ಪವಾಡ, ಕಾರಣಿಕ, ಒಡಬು ಹೇಳುವುದು, ಮುಳ್ಳವಿಗೆ ಏರುವ ಕಾರ್ಯಕ್ರಮ ನಡೆಯುತ್ತದೆ. ಚಂದ್ರಗಿರಿಯಿಂದ ಸ್ವಲ್ಪ ದೂರದಲ್ಲಿರುವ

ಈ ಸ್ಥಳವು ಚಂದಾಲಿಂಗೇಶ್ವರ ದೇವಾಲಯದಿಂದ ಪ್ರಭಾವಿತಗೊಂಡು ದೇವಾಲಯ ನಿರ್ಮಾಣವಾಗಿರಬಹುದು. ಗುಡೂರಿನ ಹುಲ್ಲಪ್ಪನನ್ನು ತಂದೆ ಎಂದು ಚಂದ್ರಗಿರಿಯ ಚಂದಾಲಿಂಗನನ್ನು ಮಗನೆಂದು ಸ್ಥಳೀಯ ನಂಬಿಕೆಯಾಗಿದೆ. ಆದರೆ ಇದಕ್ಕೆ ಆಧಾರ ಎಂಬಂತೆ ಯಾವುದೇ ಆಕರಗಳು ದೊರೆಯುವುದಿಲ್ಲ. ದೇವಾಲಯ ರಚನಾ ದೃಷ್ಟಿಯಿಂದ ಚಂದ್ರಗಿರಿಯ ಚಂದಾಲಿಂಗೇಶ್ವರ ಸ್ಥಾಪನೆಯಾದ ಕಾಲಾಂತರದಲ್ಲಿ ಗುಡೂರಿನಲ್ಲಿ ಈ ದೈವದ ಅಸ್ತಿತ್ವಕ್ಕೆ ಬಂದಿರಬಹುದು. ಏನೇ ಆಗಲಿ ಕರ್ನಾಟಕ ವಿವಿಧ ಹೆಸರುಗಳಿಂದ ಮೈಲಾರನನ್ನು ಕರೆದರು. ಮೈಲಾರನು ಜನರ ಮನಸ್ಸಿನಲ್ಲಿ ಆರಾಧ್ಯದೈವವಾಗಿ ನೆಲೆಗೊಂಡಿರುವುದು ಸ್ಪಷ್ಟವಾಗುತ್ತದೆ.

**ಯಾದಗಿರಿ ಮಲ್ಲಯ್ಯ**

ಸ್ಮಾರಕದ ಹೆಸರು : ಮಲ್ಲಯ್ಯ ದೇವಾಲಯ

ಸ್ಥಳ : ಯಾತಗಿರಿಯ ಎತ್ತರವಾದ ಬೆಟ್ಟದ ಮೇಲೆ

ತಾಲೂಕು : ಯಾದಗಿರಿ

ಕಾಲ : ವಿಜಯನಗರೋತ್ತರ

ಸ್ಥಿತಿ : ಮಧ್ಯಮ

ಅಭಿಮುಖ : ಪಶ್ಚಿಮ

ಯಾದಗಿರಿಯ ಯಾತಗಿರಿ ಮಲ್ಲಯ್ಯ ಸ್ಥಳವು ತಾಲೂಕು ಕೇಂದ್ರದಿಂದ ೧೭ ಕಿ.ಮೀ ದೂರದಲ್ಲಿದೆ. ಈ ಸ್ಥಳವನ್ನು ಸ್ಥಳೀಯರು ಯಾತಗಿರಿ ಮಲ್ಲಯ್ಯ, ಯಾತಗಿರಿ ಮಲ್ಲೇಶ, ಹೊನ್ನಕೆರೆ ಮಲ್ಲಯ್ಯ, ಯಾತಗಿರಿ ಮೈಲಾರಲಿಂಗ ಎಂಬ ಹೆಸರುಗಳಿಂದ ಕರೆಯುತ್ತಾರೆ. ದೇವಾಲಯ ರಚನೆಯ ಬಗೆಗೆ ಯಾವುದೇ ಶಾಸನ ಆಧಾರಗಳು ಸಿಗುವುದಿಲ್ಲ. ನೈಸರ್ಗಿಕವಾದ ಬೆಟ್ಟದಿಂದ ಕೂಡಿದ ಈ ಸ್ಥಳದಲ್ಲಿ ಮೈಲಾರನ ಆರಾಧನೆ ಮಾಡಲಾಗುತ್ತದೆ. ಈ ದೇವಾಲಯವನ್ನು ಏರಿಕೊಂಡು ಹೋಗಲು ಮೆಟ್ಟಿಲುಗಳಿವೆ. ನೈಸರ್ಗಿಕವಾಗಿ ಗುಹೆಯಲ್ಲಿ ಮೈಲಾರ ಶಿಲ್ಪವನ್ನು ಪೂಜಿಸಲಾಗುತ್ತದೆ. ಗುಹೆಗಳಂತಿರುವ ಈ ಸ್ಥಳದಲ್ಲಿ ಮೈಲಾರ, ತುರಂಗಬಾಳಮ್ಮ, ಗಂಗೆಮಾಳಮ್ಮ, ಹೆಗ್ಗಣ ಪ್ರಧಾನಿ, ಅಕ್ಕಮಹಾದೇವಿ ಮತ್ತು ಗಣಪತಿ ಶಿಲ್ಪಗಳನ್ನು ಕಾಣಬಹುದು. ಮುಖ್ಯವಾಗಿ ಮೈಲಾರನ ದೇವಾಲಯದಲ್ಲಿ ಲೋಹದಿಂದ ಮಾಡಿದ ಮೈಲಾರನ ಶಿಲ್ಪವನ್ನು, ಗಂಗೆಮಾಳಮ್ಮನ ಶಿಲ್ಪವನ್ನು, ಕುದುರೆಯ ಶಿಲ್ಪಗಳನ್ನು ಪೂಜಿಸಲಾಗುತ್ತದೆ. ಈ ಶಿಲ್ಪಗಳು ಇತ್ತೀಚಿನ ಕಾಲಕ್ಕೆ ಸಂಬಂಧಿಸಿವೆ. ಈ ಬೆಟ್ಟದ ಸಮುಚ್ಚಯದಲ್ಲಿ ತುರಂಗಬಾಳಮ್ಮ, ಗಂಗೆಮಾಳಮ್ಮ ಹಾಗೂ ಹೆಗ್ಗಡೆ ಪ್ರಧಾನಿ ಚಿಕ್ಕ ಚಿಕ್ಕ

ಗುಡಿಗಳಿವೆ. ಈ ಗುಡಿಗಳು ಸಹ ಇತ್ತೀಚಿನ ಕಾಲಕ್ಕೆ ಸಂಬಂಧಿಸಿದ ಅವಶೇಷಗಳನ್ನು ಒಳಗೊಂಡಿದೆ. ವಾಸ್ತುಶಿಲ್ಪದ ಅಧ್ಯಯನದ ಹಿನ್ನೆಲೆಯಲ್ಲಿ ಮಹತ್ವವಾದ ಸ್ಥಾನವನ್ನು ಈ ಸ್ಥಳವು ಪಡೆದುಕೊಳ್ಳುವುದಿಲ್ಲ. ಆದರೆ ಸಾಂಸ್ಕೃತಿಕವಾಗಿ ಶ್ರೀಮಂತಿಕೆಯಿಂದ ಕೂಡಿದ ಪ್ರದೇಶ ಇದಾಗಿದೆ. ದೇವಾಲಯದ ಪರಿಸರದಲ್ಲಿ ಭಗ್ನಗೊಂಡಿರುವ ಅನೇಕ ಅವಶೇಷ ಕಂಡುಬರುತ್ತವೆ. ದೇವಾಲಯದ ಮುಂಭಾಗ ದೋಣಿಯಾಕಾರದ ಗುಂಡಿಗಳನ್ನು ಮಾಡಲಾಗಿದೆ. ಅಲ್ಲಿರುವ ಗೊರವರು ಈ ದೋಣಿಯಲ್ಲಿಯೇ ಆಹಾರ ಸ್ವೀಕರಿಸುತ್ತಾರೆ. ಮಲ್ಲಯ್ಯ ದೇವಾಲಯ ಮುಂಭಾಗದಲ್ಲಿರುವ ಎರಡು ನಂದಿಶಿಲ್ಪ ಭಗ್ನಗೊಂಡಿವೆ. ಈ ಶಿಲ್ಪಗಳು ಪ್ರಾಚೀನತೆಯಿಂದ ಕೂಡಿವೆ. ಈ ಶಿಲ್ಪಗಳನ್ನು ಬೇರೆ ಸ್ಥಳದಿಂದ ತಂದಿಡಲಾಗಿದೆ ಎನ್ನುವುದು ನನ್ನ ಊಹೆಯಾಗಿದೆ. ಪ್ರತಿವರ್ಷ ಸಂಕ್ರಾಂತಿ ದಿನದಂದು ಈ ಸ್ಥಳದಲ್ಲಿ ಜಾತ್ರೆಯಾಗುತ್ತದೆ. ಹೊನ್ನಕೇರಿ ಮೈಲಾರನನ್ನು ಗಂಗಾಸ್ನಾನಕ್ಕೆ ದೇವಾಲಯದಿಂದ ತೆಗೆದುಕೊಂಡು ಹೊಗುತ್ತಾರೆ. ಈ ಸಮಯದಲ್ಲಿ ಅಪಾರ ಜನಸಂಖ್ಯೆಯ ಜನಸ್ತೋಮ ಸೇರಿರುತ್ತದೆ. ಈ ಮೆರವಣಿಗೆಯ ಪಲ್ಲಕ್ಕಿಯನ್ನು ಮುಟ್ಟಲು ಜನರು ಹರಸಾಹಸ ಮಾಡುತ್ತಾರೆ. ಮೆರವಣಿಗೆಯ ಪಲ್ಲಕ್ಕಿಯ ಮೇಲೆ ಭಂಡಾರ, ಹಣ, ಜೋಳ, ಶೇಂಗಾ, ಕಬ್ಬು, ಕಲ್ಲುಸಕ್ಕರೆ, ಕುರಿ ಉಣ್ಣೆಯನ್ನು ಎಸೆಯುತ್ತಾರೆ. ಪ್ರಮುಖವಾಗಿ ಮೆರವಣಿಗೆಯ ಪಲ್ಲಕ್ಕಿಯ ಮೇಲೆ ಕುರಿಮರಿಯನ್ನು ಎಸೆಯುವ ಪರಿಪಾಟವಿತ್ತು. ಜಿಲ್ಲಾಡಳಿತದ ಕಟ್ಟುನಿಟ್ಟಿನ ಕ್ರಮದಿಂದ ನಿಂತು ಹೋಗಿದೆ. ಆದರೂ ಕಣ್ಣು ತಪ್ಪಿಸಿ ಮೆರವಣಿಗೆಯ ಉತ್ಸವಕ್ಕೆ ಕುರಿಮರಿಯನ್ನು ಎಸೆಯುವ ಒಂದೆರಡು ಘಟನೆಗಳು ಜಾತ್ರೆಯ ಸಮಯದಲ್ಲಿ ಗಮನಿಸಿದ್ದೇನೆ. ಗಂಗಾಸ್ನಾನದ ನಂತರ ಕಂಚಾವೀರರಿಂದ ಸರಪಳಿ ಪವಾಡ, ಕೈಕಾಲು ಪವಾಡಗಳು ನಡೆಯುತ್ತವೆ. ಮೈಲಾರನ ಆರಾಧನೆಯ ಸ್ಥಳಗಳಲ್ಲಿ ಯಾದಗಿರಿಯ ಮೈಲಾರ ಸಾಂಸ್ಕೃತಿಕವಾದ ಹಿರಿಮೆಯನ್ನು ಹೊಂದಿದ ಸ್ಥಳವಾಗಿದೆ.

**ಮಂಗಸೂಳಿ ಮಲ್ಲಯ್ಯ**

ಸ್ಮಾರಕದ ಹೆಸರು : ಮಲ್ಲಯ್ಯ ದೇವಾಲಯ

ಸ್ಥಳ : ಮಂಗಸೂಳಿ ಗ್ರಾಮದಲ್ಲಿ

ತಾಲೂಕು : ಅಥಣಿ

ಕಾಲ : ವಿಜಯನಗರೋತ್ತರ

ಸ್ಥಿತಿ : ಮಧ್ಯಮ

ಅಭಿಮುಖ : ಪೂರ್ವ

ಮಂಗಸೂಳಿ ಮಲ್ಲಯ್ಯ ದೇವಾಲಯವು ಅಥಣಿಯಿಂದ ಸುಮಾರು ೨೦ಕಿ.ಮೀ ದೂರದಲ್ಲಿದೆ. ಮಹಾರಾಷ್ಟ್ರದ ಗಡಿಭಾಗದಲ್ಲಿರುವ ಈ ಪ್ರದೇಶವು ಗಡಿಭಾಗದಿಂದ ೨ ಕಿ.ಮೀ ದೂರದಲ್ಲಿದೆ. ಮಹಾರಾಷ್ಟ್ರದ ಮೀರಜ್ ಪ್ರದೇಶವು ಮಂಗಸೂಳಿಯಿಂದ ೨೧ ಕಿ.ಮೀ ದೂರದಲ್ಲಿದೆ. ಸ್ಥಳೀಯರು ಈ ದೈವವನ್ನು ಮಂಗಸೂಳಿ ಮಲ್ಲಯ್ಯ, ಖಂಡೋಬಾ ಎಂಬ ಹೆಸರಿನಿಂದ ಕರೆಯುತ್ತಾರೆ. ಈ ದೇವಾಲಯವನ್ನು ನಿರ್ಮಾಣ ಮಾಡಲು ಮಹಾರಾಷ್ಟ್ರದ ಪರಂಪರೆಯಿಂದ ನಿರ್ಮಾಣವಾಗಿದೆ. ಈ ದೇವಾಲಯಕ್ಕೆ ಸಂಬಂಧಿಸಿದ ಆಡಳಿತ ವರ್ಗವು ಮಹಾರಾಷ್ಟ್ರದ ಮೂಲದಿಂದ ಬಂದವರಾಗಿದ್ದಾರೆ. ದೇವಾಲಯವು ಅಪ್ರಾಚೀನವಾಗಿದ್ದು ಶಿವಾಜಿ ಆಡಳಿತಾವಧಿಯಲ್ಲಿ ನಿರ್ಮಾಣ ಮಾಡಿರುವುದು ಸ್ಥಳೀಯರಿಂದ ಮಾಹಿತಿ ದೊರಕುತ್ತದೆ. ಇದಕ್ಕೆ ಪುಷ್ಠಿ ನೀಡುವಂತೆ ಅಲ್ಲಿನ ಅವಶೇಷಗಳನ್ನು ಕಾಣಬಹುದು. ದೇವಾಲಯ ಪ್ರವೇಶದ್ವಾರದಲ್ಲಿ ಶಾಸನವಿದ್ದು ಜೀರ್ಣೋದ್ಧಾರ ಸಮಯದಲ್ಲಿ ಅಡಿಗಲ್ಲಾಗಿ ಬಳಸಿಕೊಂಡಿದ್ದಾರೆ. ಮಂಗಸೂಳಿ ಪ್ರದೇಶದಲ್ಲಿ ಕಂಡುಬರುವ ಈ ದೇವಾಲಯವು ವಿಶಾಲವಾದ ಪ್ರಾಂಗಣವನ್ನು ಹೊಂದಿದೆ. ಗರ್ಭಗೃಹ, ನವರಂಗ, ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದ ಬಲಭಾಗದಲ್ಲಿ ಮೈಲಾರ ಶಿಲ್ಪವನ್ನು ಕಾಣಬಹುದು. ಎಡಭಾಗದಲ್ಲಿ ಮೈಲಾರ ಗಂಗೆಮಾಳಮ್ಮ, ಬಾಣಾಯಿ, ಲೋಹದಿಂದ ಮಾಡಿದ ಹಿತ್ತಾಳೆಯ ಶಿಲ್ಪಗಳಿವೆ. ಚತುರ್ಭುಜ ದಾರಿಯಾದ ಮಲ್ಲಯ್ಯ ಲೋಹದ ಶಿಲ್ಪವು ಕುದುರೆಯಮೇಲೆ ಕುಳಿತು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಗಳನ್ನು ಒಳಗೊಂಡಿದೆ. ಉತ್ತರಬದಿಯಲ್ಲಿ ಹೆಗ್ಗಡೆ ಪ್ರಧಾನಿಯ ಗುಡಿಯಲ್ಲಿ ಗರ್ಭಗೃಹ ಮುಂಭಾಗದಲ್ಲಿ ಮಂಟಪವಿದೆ. ಮಲ್ಲಯ್ಯ ದೇವಾಲಯ ಮುಖಮಂಟಪವು ಮುಸಲ್ಮಾನರ ಮಸೀದಿಯ ರೀತಿಯಲ್ಲಿ ಕಮಾನುಗಳನ್ನು ಒಳಗೊಂಡಿದೆ. ದೇವಾಲಯವು ವಿಶಾಲವಾದ ಪ್ರಾಂಗಣವನ್ನು ಹೊಂದಿದ್ದು ಸಾಲು ದೀಪಸ್ತಂಭಗಳನ್ನು, ನಂದಿಶಿಲ್ಪಗಳು, ಶಿವಲಿಂಗ, ಪಾದುಕೆಗಳನ್ನು ಆಂಜನೇಯಶಿಲ್ಪ ಹಾಗೂ ಕುದುರೆಶಿಲ್ಪಗಳು ಕಂಡು ಬರುತ್ತವೆ. ದೇವಾಲಯವೂ ನಳದುರ್ಗದಿಂದ ಮಂಗಸೂಳಿಗೆ ಬಂದಿದೆಯೆಂದು ಜನರ ನಂಬಿಕೆಯಾಗಿದೆ. ಈ ಸ್ಥಳದಲ್ಲಿ ಮಲ್ಲಯ್ಯನಿಗೆ ಸಂಬಂಧಿಸಿದ ದೋಣಿಸೇವೆ, ಕಾರಣಿಕ ನಡೆಯುವುದು ಸರಪಳಿ ಪವಾಡ ಹಾಗೂ ಒಡಬು ಹೇಳುವ ನಂಬಿಕೆ ಆಚರಣೆ ನಡೆಯುತ್ತದೆ. ಯುಗಾದಿಪಾಡ್ಯದ ೧೫ ದಿನಗಳ ನಂತರದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಅಕ್ಕಪಕ್ಕದ ಜಿಲ್ಲೆಗಳಿಂದ ಹಾಗೂ ಮಹಾರಾಷ್ಟ್ರದಿಂದ ಜನರು ಇಲ್ಲಿಗೆ ಬರುತ್ತಾರೆ.

**ದೇವರಹಿಪ್ಪರಗಿ ಮಲ್ಲಯ್ಯ**

ಸ್ಮಾರಕದ ಹೆಸರು : ಮಲ್ಲಯ್ಯ ದೇವಾಲಯ

ಸ್ಥಳ : ದೇವರಹಿಪ್ಪರಗಿ ಊರ ಹೊರಭಾಗದ ರಸ್ತೆಯ ಬದಿಯಲ್ಲಿ

ತಾಲೂಕು : ಸಿಂದಗಿ

ಕಾಲ : ವಿಜಯನಗರೋತ್ತರ

ಸ್ಥಿತಿ : ಮಧ್ಯಮ

ಅಭಿಮುಖ : ಪಶ್ಚಿಮ

ದೇವರಹಿಪ್ಪರಗಿ ಮಲ್ಲಯ್ಯ ದೇವಾಲಯವು ವಿಜಯಪುರದಿಂದ ಸುಮಾರು ೩೫ ಕಿ.ಮೀ ದೂರದಲ್ಲಿದೆ. ಹಿಪ್ಪರಗಿ ಮಲ್ಲಯ್ಯ ಮೂರ್ತಂಡ ಕ್ಷೇತ್ರವೆಂದು ಈ ಸ್ಥಳವನ್ನು ಕರೆಯುತ್ತಾರೆ. ಸಾಮಾನ್ಯವಾಗಿ ಹಿಪ್ಪರಗಿ ಮಲ್ಲಯ್ಯ ಎಂದು ಕರೆಯುವ ಈ ಸ್ಥಳವನ್ನು ದೇವರ ಎಂಬ ಹೆಸರಿನಿಂದ ದೇವರಹಿಪ್ಪರಗಿ ಎಂಬ ಹೆಸರಿನಿಂದ ಕರೆಯುತ್ತಾರೆ. ದೇವಾಲಯದ ನಿರ್ಮಾಣದ ಬಗೆಗೆ ಯಾವುದೇ ಶಾಸನಾಧಾರಗಳಿಲ್ಲ. ದೇವಾಲಯವು ವಿಶಾಲವಾದ ಪ್ರಾಂಗಣ ಹೊಂದಿದ್ದು, ಗರ್ಭಗೃಹ ಸಭಾಮಂಟಪಗಳಿಂದ ಕೂಡಿದೆ. ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿದ್ದು ಸಭಾಮಂಟಪವು ಕಮಾನು ಆಕಾರದಲ್ಲಿದೆ. ಮುಸ್ಲಿಂರ ವಾಸ್ತುಶೈಲಿ ಈ ದೇವಾಲಯದ ಮೇಲೆ ಪ್ರಭಾವ ಬೀರಿದೆ. ಗರ್ಭಗೃಹವು ಸಾಧಾರಣವಾಗಿದ್ದು ಎತ್ತರವಾದ ಜಗಲಿಯ ಮೇಲೆ ಬಲಭಾಗದಲ್ಲಿ ಲೋಹದಿಂದ ಮಾಡಿದ ಮೈಲಾರ ಗಂಗೆಮಾಳಮ್ಮ ಕುದುರೆಯ ಮೇಲೆ ಕುಳಿತ ಶಿಲ್ಪವಿದೆ. ಗರ್ಭಗೃಹದ ಎಡಭಾಗದಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆ ಹಿಡಿದಿರುವ ಶಿಲ್ಪಗಳನ್ನು ಕಾಣಬಹುದು. ಈ ಎರಡು ಶಿಲ್ಪದ ಮುಂಭಾಗದಲ್ಲಿ ಎತ್ತರವಾದ ಶಿವಲಿಂಗವಿದೆ. ದೇವಾಲಯಕ್ಕೆ ಎತ್ತರದಲ್ಲಿ ಪ್ರವೇಶದ್ವಾರವಿದ್ದು ಸರಳ ಪಟ್ಟಿಕೆಯಿಂದ ಕೂಡಿವೆ. ಲಲಾಟದಲ್ಲಿ ಗಣೇಶ ಗದೆಯನ್ನು ಹಿಡಿದು ನಿಂತ ದ್ವಾರಪಾಲಕರನ್ನು ಪ್ರವೇಶದಲ್ಲಿ ಕಾಣಬಹುದು. ಪಶ್ಚಿಮದ ಸಭಾಮಂಟಪದ ದ್ವಾರವು ಸರಳ ವಾಸ್ತುಶೈಲಿಯಿಂದ ಕೂಡಿದ್ದು ಎತ್ತರವಾದ ಜಗಲಿಯನ್ನು ಹೊಂದಿದೆ, ಪ್ರವೇಶದ್ವಾರದಲ್ಲಿ ಆನೆಗಳನ್ನು ನಿಲ್ಲಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಕುದುರೆಯ ಶಿಲ್ಪವಿದೆ. ಕುದುರೆ ಶಿಲ್ಪವು ವಿಶಿಷ್ಟವಾದ ಕೆತ್ತನೆಯಿಂದ ಕೂಡಿದ್ದು ಇತ್ತೀಚಿನ ರಚನೆಯನ್ನು ಹೋಲುತ್ತದೆ. ವಿಶಾಲವಾದ ಪ್ರಾಂಗಣ ಗೋಡೆಯನ್ನು ಹೊಂದಿರುವ ದೇವಾಲಯವು ಎತ್ತರವಾದ ಶಿಖರಗಳನ್ನು ಹೊಂದಿದೆ. ವಿಶಾಲವಾದ ಸಾಲು ಮಂಟಪಗಳು ಪಶ್ಚಿಮ ಮತ್ತು ಉತ್ತರದಲ್ಲಿ ಕಾಣಬಹುದಾಗಿದೆ. ಮೈಲಾರಲಿಂಗನಿಗೆ

ಸಂಬಂಧಿಸಿದ ಕೆಲವು ಅವಶೇಷಗಳು ಮಾತ್ರ ಈ ದೇವಾಲಯದಲ್ಲಿ ದೊರೆಯುತ್ತವೆ. ದೇವಾಲಯದ ಮುಂದೆ ಎತ್ತರವಾದ ದೀಪಸ್ತಂಭ, ನಂದಿ, ಶಿವಲಿಂಗ ಹಾಗೂ ಸ್ತ್ರೀ ಶಿಲ್ಪಗಳನ್ನು ಈ ಸ್ಥಳದಲ್ಲಿ ಕಂಡುಬರುತ್ತವೆ. ದೇವಾಲಯದ ಹೊರಭಾಗದಲ್ಲಿ ಹೆಗ್ಗಡೆ ಪ್ರಧಾನಿಯಿದ್ದು ಮೂರ್ತಿಶಿಲ್ಪ ಕಂಡುಬರುವುದಿಲ್ಲ. ಶಿಲಾಫಲಕದ ಮೂಲಕ ಹೆಗ್ಗಡೆ ಎಂದು ದೈವವನ್ನು ಪೂಜಿಸುತ್ತಾರೆ. ಈ ಸ್ಥಳದಲ್ಲಿ ಕಂಚಾವೀರರು ಸರಪಳಿ ಪವಾಡ, ಶಸ್ತ್ರಪವಾಡಗಳನ್ನು ಮಾಡುತ್ತಾರೆ.

ಇದೇ ಊರಿನ ಮಧ್ಯದಲ್ಲಿ ಪಶ್ಚಿಮಾಭಿಮುಖವಾಗಿ ರಾವುತರಾಯನ ದೇವಾಲಯವಿದೆ. ರಾವುತರಾಯ ಹಾಗೂ ಹಿಪ್ಪರಗಿ ಮಲ್ಲಯ್ಯನ ಜಾತ್ರೆಯನ್ನು ಏಕಕಾಲದಲ್ಲಿ ಅಂದರೆ ಆಗೀಹುಣ್ಣಿಮೆಯಲ್ಲಿ ಮಾಡಲಾಗುತ್ತದೆ. ಅಷ್ಟೇನು ಪ್ರಾಚೀನವಲ್ಲದ ಈ ದೇವಾಲಯವು ಎತ್ತರವಾದ ಜಗಲಿಯ ಮೇಲೆ ರಾವುತರಾಯನ ಮರದ ಶಿಲ್ಪವನ್ನು ಎತ್ತರವಾಗಿ ಎದ್ದುಕಾಣುವಂತೆ ಇಡಲಾಗಿದೆ. ಈ ಶಿಲ್ಪವನ್ನು ಗಮನಿಸಿದಾಗ ದೊಡ್ಡದಾದ ಪೇಟವನ್ನು ಸುತ್ತಿ ಕೈಯಲ್ಲಿ ಖಡ್ಗ ಹಿಡಿದಿದೆ. ರಾವುತರಾಯನ ದೇವಾಲಯದಲ್ಲಿ ಮೈಲಾರನಿಗೆ ಸಂಬಂಧಿಸಿದ ಲೋಹದ ಶಿಲ್ಪಗಳನ್ನು ಕಾಣಬಹುದಾಗಿದೆ. ರಾವುತರಾಯನಿಗೆ-ಮೈಲಾರನಿಗೆ ಆಗೀಹುಣ್ಣಿಮೆಯ ಸಮಯದಲ್ಲಿ ಎರಡು ದೈವಗಳನ್ನು ಪೂಜಿಸುವುದು ಈ ಗ್ರಾಮದ ವಿಶೇಷವಾಗಿದೆ.

**ಕಾರೀಮನಿ ಮಲ್ಲಯ್ಯ**

ಸ್ಮಾರಕದ ಹೆಸರು : ಮಲ್ಲಯ್ಯ ದೇವಾಲಯ

ಸ್ಥಳ : ಕಾರೀಮನಿ ಊರ ಹೊರಭಾಗ ಎತ್ತರವಾದ ಗುಡ್ಡದಲ್ಲಿ

ತಾಲೂಕು : ಸವದತ್ತಿ

ಕಾಲ : ವಿಜಯನಗರೋತ್ತರ

ಸ್ಥಿತಿ : ಮಧ್ಯಮ

ಅಭಿಮುಖ : ಪೂರ್ವ

ಮೈಲಾರನ ಕ್ಷೇತ್ರಗಳಲ್ಲಿ ಕಾರೀಮನಿಯ ಮಲ್ಲಯ್ಯ ದೇವಾಲಯವು ಒಂದಾಗಿದೆ. ತಾಲೂಕು ಕೇಂದ್ರವಾದ ಸವದತ್ತಿಯಿಂದ ೪೦ ಕಿ.ಮೀ ಹಾಗೂ ಇದೇ ತಾಲೂಕಿನ ಮುರಗೋಡಿಯಿಂದ ೪ ಕಿ.ಮೀ ದೂರದಲ್ಲಿದೆ. ಕಾರೀಮನಿ ಗ್ರಾಮದ ಪೂರ್ವದ ಕಡೆ ೧ ಕಿ.ಮೀ ದೂರದಲ್ಲಿ ಎತ್ತರವಾದ ಗುಡ್ಡಗಳ ಸಾಲಿನಲ್ಲಿ ಈ ದೇವಾಲಯವು ಕಂಡುಬರುತ್ತದೆ. ಸ್ಥಳೀಯರು ಮಲ್ಲಯ್ಯ, ಮಲ್ಲಿಕಾರ್ಜುನ ಎಂಬ ಹೆಸರಿನಿಂದ ಕರೆಯುತ್ತಾರೆ. ವಿಶಾಲವಾದ

ಪ್ರಾಂಗಣ ಗೋಡೆಯನ್ನು ಹೊಂದಿರುವ ಪ್ರದೇಶದ ಮಧ್ಯಭಾಗದಲ್ಲಿ ಮಲ್ಲಯ್ಯನ ದೇವಾಲಯವಿದೆ. ದೇವಾಲಯದ ಪ್ರವೇಶವು ಉತ್ತರಾಭಿಮುಖವಾಗಿ ದ್ವಾರವನ್ನು ಹೊಂದಿದೆ. ಪ್ರವೇಶದ್ವಾರವು ಸಾಧಾರಣವಾಗಿ ಅಲಂಕೃತಗೊಂಡಿದ್ದು ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಮುಖ್ಯವಾಗಿ ಮಲ್ಲಯ್ಯ ದೇವಾಲಯ ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ. ಸ್ವಯಂಭೂ ಲಿಂಗದ ಹಿಂಭಾಗದಲ್ಲಿ ಎರಡು ಅಡಿ ಎತ್ತರದ ಫಲಕದ ಮೇಲೆ ಕುದುರೆಯ ಮೇಲೆ ಕುಳಿತಿರುವ ಮೈಲಾರನ ಉಬ್ಬುಶಿಲ್ಪವಿದೆ. ಮಲ್ಲಯ್ಯ ದೇವಾಲಯದ ಎಡಭಾಗಕ್ಕೆ ಹೊಂದಿಕೊಂಡಂತೆ ಗಂಗೆ ಮಾಳಮ್ಮನ ದೇವಾಲಯವಿದೆ. ಭೈರವೀ ಶಿಲ್ಪವನ್ನು ಗಂಗೆ ಮಾಳಮ್ಮ ಎಂಬ ಕಲ್ಪನೆಯಿಂದ ಪೂಜಿಸಲಾಗುತ್ತದೆ. ಧ್ಯಾನಾಸಕ್ತವಾಗಿ ಕುಳಿತಿರುವ ಭೈರವೀ ಶಿಲ್ಪವು ಎತ್ತರವಾದ ಪೀಠದ ಮೇಲೆ ಕೂರಿಸಲಾಗಿದೆ. ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ಮಲ್ಲಯ್ಯ-ಗಂಗೆಮಾಳಮ್ಮ ದೇವಾಲಯಕ್ಕೆ ಹೊಂದಿಕೊಂಡಂತೆ ಹೆಗ್ಗಡೆ ಪ್ರಧಾನಿ ದೇವಾಲಯವಿದೆ. ದೇವಾಲಯದ ಗರ್ಭಗೃಹದಲ್ಲಿ ವಿಷ್ಣುವಿನ ಲಕ್ಷಣಗಳನ್ನು ಹೊಂದಿರುವ ಶಿಲ್ಪವು ಎತ್ತರವಾದ ಪೀಠದ ಮೇಲೆ ಕುಳಿತಿದ್ದು ಕೈಯಲ್ಲಿ ಶಂಖ, ಚಕ್ರವನ್ನು ಹೊಂದಿದ್ದು ಸಿಂಹದ ವಾಹನವನ್ನು ಹೊಂದಿದೆ. ದೇವಾಲಯದ ಪ್ರಾಂಗಣದಲ್ಲಿ ಎಲ್ಲಮ್ಮಗುಡಿ ಎತ್ತರವಾದ ದೀಪಸ್ತಂಭ, ಭಗ್ನಗೊಂಡಿರುವ ಅನೇಕ ಶಿಲ್ಪಗಳಿವೆ. ಕ್ರಿ.ಶ ೧೫೭೩ ರ ಶಾಸನದಲ್ಲಿ ಮೈಲಾರ ದೇವರು ಎಂಬ ಉಲ್ಲೇಖವಿದೆ.[೩] ದೇವಾಲಯದ ಹೊರಭಾಗದಲ್ಲಿ ಮರಿಮಲ್ಲಯ್ಯ ದೇವಾಲಯವಿದ್ದು ಗರ್ಭಗೃಹದ ಪ್ರವೇಶದ್ವಾರದ ಲಲಾಟದಲ್ಲಿ ಕುದುರೆಯ ಮೇಲೆ ಕುಳಿತ ಮೈಲಾರನ ಶಿಲ್ಪವಿದೆ. ಇತ್ತೀಚಿಗೆ ಈ ದೇವಾಲಯ ನಿರ್ಮಾಣವಾಗಿದೆ. ಮರಿಮಲ್ಲಯ್ಯ ಹಾಗೂ ಮಲ್ಲಯ್ಯ ದೇವಾಲಯದ ಎದುರಿಗೆ ಎತ್ತರವಾದ ಶಿಬಾರವನ್ನು ಕಾಣಬಹುದು. ಮಲ್ಲಯ್ಯ ದೇವಾಲಯದ ಉತ್ತರಾಭಿಮುಖ ದೇವಾಲಯದ ಎದುರಿಗೆ ಚಿಕ್ಕದಾದ ಗುಡಿಯಲ್ಲಿ ಮೈಲಾರ– ಮಾಳಮ್ಮ ಕುದುರೆ ಮೇಲೆ ಕುಳಿತು ಮಣಿ-ಮಲ್ಲರನ್ನು ಸಂಹರಿಸುತ್ತಿರುವ ಶಿಲ್ಪ ಇದಾಗಿದೆ. ಶಿಲ್ಪದ ಕೆಳಭಾಗ ನಾಯಿಯು ಮಣಿಮಲ್ಲರ ಕಾಲನ್ನು ಕಚ್ಚುವ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ದೇವಾಲಯದ ಸ್ವಲ್ಪ ದೂರದಲ್ಲಿ ಬ್ಯಾಟೆಮಲ್ಲಪ್ಪನ ಚಿಕ್ಕಗುಡಿಯನ್ನು ಕಾಣಬಹುದು. ದಾರಿಯಲ್ಲಿ ಶಿಬಾರಕಟ್ಟೆ ಹಾಗೂ ಮರದಿಂದ ಮಾಡಿದ ಕುದುರೆಯ ಶಿಲ್ಪಗಳು ಇಲ್ಲಿನ ವಿಶೇಷವಾಗಿದೆ. ದೇವಾಲಯದ ಪಕ್ಕದಲ್ಲಿ ರಾವುತರಾಯ ಶಿಲ್ಪವಿದೆ. ಹಾಗೂ ಇದೇ ಸ್ಥಳದಲ್ಲಿ ನರಬಲಿಯ ಸಂಕೇತವಾಗಿ ಶಿರಗಳಿವೆ. ಸೀಗೇಹುಣ್ಣಿಮೆಯಂದು ಇಲ್ಲಿ ದೊಡ್ಡದಾದ ಜಾತ್ರೆಯಾಗುತ್ತದೆ. ರಾವುತರಾಯನ ಸವಾರಿ, ಸರಪಳಿ ಪವಾಡ, ಶಸ್ತ್ರಪವಾಡ ನಡೆಯುತ್ತದೆ. ದೇವಾಲಯದ ಜಾತ್ರೆಗೆ ಅಕ್ಕಪಕ್ಕ ಜಿಲ್ಲೆಗಳಾದ ಧಾರವಾಡ, ಬೆಳಗಾವಿ, ಹಾಗೂ ವಿಜಯಪುರಗಳಿಂದ ಭಕ್ತರು ಇಲ್ಲಿಗೆ ಬರುತ್ತಾರೆ. ಈ ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡು ನವೀಕರಣಗೊಂಡಿದೆ.

**ಬೀದರ್‌ನ ಪ್ರೇಮಪುರ (ಮೈಲಾರಪುರ)**

ಸ್ಮಾರಕದ ಹೆಸರು : ಮೈಲಾರ ದೇವಾಲಯ

ಸ್ಥಳ : ಪ್ರೇಮಪುರದ ಊರ ಹೊರಭಾಗದಲ್ಲಿ

ತಾಲೂಕು : ಭಾಲ್ಕಿ

ಕಾಲ : ಕ್ರಿ.ಶ ಸುಮಾರು ೧೧-೧೨ ನೇ ಶತಮಾನ

ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ಉತ್ತರ ಕರ್ನಾಟಕದ ತುತ್ತತುದಿಯಲ್ಲಿರುವ ಬೀದರ್‌ನಲ್ಲಿ ಮೈಲಾರನು ನೆಲೆಗೊಂಡಿದ್ದಾನೆ. ಮೈಲಾರ ಕ್ಷೇತ್ರ, ದಕ್ಷಿಣಕಾಶಿ, ಪ್ರೇಮಪುರ ಎಂಬ ನಂಬಿಕೆಯಿಂದ ಈ ದೈವವನ್ನು ಪೂಜಿಸುತ್ತಾರೆ. ಮಹಾರಾಷ್ಟ್ರಕ್ಕೆ ಹತ್ತಿರವಿರುವ ಈ ಕ್ಷೇತ್ರವು ಮಹಾರಾಷ್ಟ್ರದ ಪ್ರಭಾವವೂ ಈ ದೇವಾಲಯಕ್ಕಿದೆ. ಬೀದರ್‌ನಿಂದ ಪಶ್ಚಿಮದಿಕ್ಕಿಗೆ ಸುಮಾರು ೧೨ ಕಿ.ಮೀ ಮತ್ತು ಭಾಲ್ಕಿಯಿಂದ ಸುಮಾರು ೨೬ ಕಿ.ಮೀ ದೂರದಲ್ಲಿ ಮೈಲಾರನ ದೇವಾಲಯವಿದೆ. ದೇವಾಲಯದ ನಿರ್ಮಾಣದ ಬಗ್ಗೆ ಅಥವಾ ದೇವಾಲಯದ ಜೀರ್ಣೋದ್ಧಾರದ ಬಗ್ಗೆ ಶಾಸನ ಆಧಾರವಿಲ್ಲ. ಬೀದರ್ ಜಿಲ್ಲೆಯ ಶಾಸನ ಸಂಪುಟವನ್ನು ಗಮನಿಸಿದಾಗ ಮೈಲಾರನಿಗೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ. ಕ್ರಿ.ಶ ೧೦ ನೇ ಶತಮಾನದಿಂದ ೧೩ ನೇ ಶತಮಾನದವರೆಗೆ ಶಾಸನಗಳು ದೊರೆಯುತ್ತವೆ. ಈ ಪರಿಸರದಲ್ಲಿ ಮೈಲಾರನ ಪರಂಪರೆ ಹೆಚ್ಚಾಗಿತ್ತು ಎನ್ನಲು ಶಾಸನಗಳಿವೆ. ಬಸವಕಲ್ಯಾಣದ ೧೧೧೭ ರ ಶಾಸನದಲ್ಲಿ ನಾರಾಯಣದೇವರ ಧರ್ಮ ಕರ್ಮಗಳಿಗೆ, ಹಣದಲ್ಲಾಗಲಿ, ವ್ಯಾಪಾರಿಗಳೇ ಒಡೆಯರಾಗಿರುತ್ತಾರೆ. ಗೊರವರಾಗಲಿ, ಬ್ರಾಹ್ಮಣರಿಗಾಗಲಿ ಇದು ಸಲ್ಲುವುದಿಲ್ಲ ಎಂಬ ಉಲ್ಲೇಖ ದೊರೆಯುತ್ತದೆ.[೩೩] ಇದೇ ತೆರನಾದ ಉಲ್ಲೇಖವಿರುವ ಅಳವಾಯಿ ಗ್ರಾಮದ ಕ್ರಿ.ಶ ೧೦೭೭ರ ಶಾಸನದಲ್ಲಿ ಸೋಮದೇವರ ಗೊರವ ಎಂಬ ಉಲ್ಲೇಖವಿದೆ.[೩೪]

ಬಸವಕಲ್ಯಾಣದ ತಾಲೂಕಿನ ಮುಚ್ಚಳಾಂಬ ಗ್ರಾಮದ ಕ್ರಿ.ಶ ೧೧೨೫ ರ ಶಾಸನದಲ್ಲಿ ರಾಜನಾರಾಯಣಪುರದ ಸ್ಥಳದ ಕಾಲಹಳ್ಳಿಯಾದ ಮುಚಳಂಬ ರಾಮೇಶ್ವರ ದೇವರಿಗೆ ಮೊದಲು ನೀಡಿದ್ದ ೮೦ ಮತ್ತರು ಹೊಲವನ್ನು ೧೨ ಮತ್ತರು ತೋಟವನ್ನು ೨ ನಿವೇಶನಗಳನ್ನು ಮೊದಲು ನೋಡಿಕೊಳ್ಳುತ್ತಿದ್ದ ಗೊರವರು ಒತ್ತೆ ಇಟ್ಟುಕೊಂಡಿದ್ದರು.[೩೫] ಬೀದರ್‌ನ ವಸ್ತುಸಂಗ್ರಹಾಲಯದಲ್ಲಿರುವ ಕ್ರಿ.ಶ. ೧೨ ನೇ ಶತಮಾನದ ಶಾಸನದಲ್ಲಿ ಮೈಲಾರ ಉಲ್ಲೇಖವಿದೆ.[೩೬] ಬೀದರ್ ತಾಲೂಕಿನ ರಂಜೋಳ ಗ್ರಾಮದ ಕ್ರಿ.ಶ. ೧೩ ನೇ

ಶತಮಾನದ ಶಾಸನ ಭೈರವದೇವರಸನು ತನ್ನ ತಂದೆ ಹೆಸರಲ್ಲಿ ಹೇಮೇಶ್ವರ ದೇವಾಲಯವನ್ನು ತಾಯಿಯ ಹೆಸರಿನಲ್ಲಿ ಮೈಳಾಲೇಶ್ವರ ದೇವಾಲಯವನ್ನು ಕಟ್ಟಿಸಿ ಭೂದಾನವನ್ನು ಬಿಟ್ಟಿರುವ ಉಲ್ಲೇಖವಿದೆ.[೩೭] ಈ ಎಲ್ಲಾ ಶಾಸನಗಳಂತೆ ಮುಖ್ಯವಾಗಿ ಬೀದರ್‌ನ ಅಣಂದೂರು ಗ್ರಾಮದ ಕ್ರಿ.ಶ. ೧೧೩೮ ರ ಶಾಸನದಲ್ಲಿ ಜಗದೇಕಮಲ್ಲನ ಆಳ್ವಿಕೆ ಕಾಲದಲ್ಲಿ ಮಹಾಭೈರವ, ಮೈಲಾರ ದೇವ ಪಾದಗಳನ್ನು ದರ್ಶಿಸಿ ದೇವಾಲಯಕ್ಕೆ ಕಳಸವನ್ನು ಇಡಿಸಿದ್ದಾನೆ. ಆ ಸಮಯದಲ್ಲಿ ಅಣಂದೂರು ಶ್ರೀನಾಗೇಶ್ವರ ದೇವರ ಅಂಗಭೋಗ, ರಂಗಭೋಗ, ನೈವೇದ್ಯಕ್ಕೆ, ಬ್ರಾಹ್ಮಣ ತಪೋಧನರಿಗೆ ಅನ್ನದಾನಕ್ಕೆಂದು ಮಹಾಪ್ರಧಾನ ಮನವರ್ಗಡೆ ಅಟ್ಟಳನಾಡ ಸಾಮಂತ ಬೊಮ್ಮಣ್ಣಯ್ಯ ದಂಡನಾಯಕನಿಗೆ ಆ ನಾಡಿನ ಮಹಾಮಂಡಳೇಶ್ವರನಾದ ಬಿದ್ದರಸನಿಗೆ ರಾಜನು ಆದೇಶಿಸಲು ದತ್ತಿಯನ್ನು ಬಿಟ್ಟನು.[೩೮] ಈ ಶಾಸನಗಳ ಉಲ್ಲೇಖಗಳನ್ನು ಗಮನಿಸಿದಾಗ ಬೀದರ್ ಪರಿಸರದಲ್ಲಿ ಮೈಲಾರ ಪರಂಪರೆಯು ಹರಡಿಕೊಂಡಿರುವುದು ಕಂಡುಬರುತ್ತದೆ. ಕರ್ನಾಟಕದ ಪ್ರಾಚೀನ ಶಾಸನಗಳ ಉಲ್ಲೇಖಗಳಲ್ಲಿ ತೆಕ್ಕಲಕೋಟೆ ಹರಿವಿನ ಮಲ್ಲಯ್ಯ ದೇವಾಲಯದ ನಂತರ ಕ್ರಿ.ಶ ೧೧೩೮ ರ ಮೈಲಾರನ ಉಲ್ಲೇಖ ಸಿಗುವುದು ಅಣಂದೂರು ಪರಿಸರದಲ್ಲಿ. ಅಂದರೆ ಪೇಂಬರ ಸ್ಥಳವು ಮೈಲಾರ ಪ್ರಾಚೀನ ನೆಲೆಗಳಲ್ಲಿ ಒಂದಾಗಿದೆ ಎಂದು ನನ್ನ ಊಹೆಯಾಗಿದೆ. ದೇವಾಲಯವನ್ನು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳಿಸಿರುವುದರಿಂದ ಅನೇಕ ದಾನದತ್ತಿಗಳನ್ನು ಮೈಲಾರ ದೇವಾಲಯಕ್ಕೆ ಬಿಡಲಾಗಿದೆ. ದೇವಾಲಯದ ಪೂರ್ವದಿಕ್ಕಿನ ಮಹಾದ್ವಾರವನ್ನು ಇಂದೋರಿನ ರಾಣಿ ಅಹಲ್ಯಾದೇವಿ ಹೋಳ್ಕರ್ ಅಡಿಯಲ್ಲಿ ಭೂದಾನ ಮಾಡಿರುವುದಾಗಿ ಬೀದರ್‌ನ ಗೆಝೆಟಿಯರ್‌ನಲ್ಲಿ ಉಲ್ಲೇಖವಿದೆ.[೩೯] ಈ ಎಲ್ಲಾ ಆಕರಗಳ ಹಿನ್ನೆಲೆಯಲ್ಲಿ ಮೈಲಾರ ಪರಂಪರೆಯು ಇದ್ದಿತ್ತು ಎನ್ನುವುದು ಖಚಿತವಾಗಿದೆ.

ದೇವಾಲಯವು ಅನೇಕ ಬದಲಾವಣೆಗಳಿಂದ ಕೂಡಿದ್ದು ಹಿಂದೂ ಮುಸ್ಲಿಂ ಶೈಲಿಯಲ್ಲಿ ರಚನೆಯಾಗಿದೆ. ವಿಶಾಲವಾದ ಪ್ರಾಕರ ಗೋಡೆಯನ್ನು ಹೊಂದಿದ ಮಲ್ಲಯ್ಯ ದೇವಾಲಯ ಪೂರ್ವಾಭಿಮುಖವಾಗಿದೆ. ಗರ್ಭಗೃಹ, ಸಭಾಮಂಟಪದಿಂದ ಕೂಡಿದ ದೇವಾಲಯದ ಗರ್ಭಗೃಹದಲ್ಲಿ ಮೈಲಾರನ ವಿಶೇಷ ರೀತಿಯ ಶಿಲ್ಪವಿದೆ. ಎತ್ತರವಾದ ಪೀಠದ ಮೇಲೆ ಕಪ್ಪುಶಿಲೆಯಿಂದ ನಿರ್ಮಿತವಾಗಿರುವ ಮೈಲಾರ ಶಿಲ್ಪವು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿದೆ. ಶಿಲ್ಪದ ಹಿಂಭಾಗದಲ್ಲಿ ಲೋಹದಿಂದ ಮಾಡಿದ ಪ್ರಭಾವಳಿಯನ್ನು ಹೊಂದಿದೆ. ಸಾಮಾನ್ಯವಾಗಿ ಮೈಲಾರ ಶಿಲ್ಪದ ಅಕ್ಕಪಕ್ಕದಲ್ಲಿ ಕುದುರೆ, ನಾಯಿಯ ಉಬ್ಬುಶಿಲ್ಪಗಳನ್ನು ಹೊಂದಿರುತ್ತವೆ. ಮೈಲಾರ ವಾಹನಗಳಾಗಿ ಈ ಶಿಲ್ಪಗಳು ಸಂಕೇತಿಸುತ್ತವೆ. ಆದರೆ ಈ ಶಿಲ್ಪದ ಹಿಂದಿನ ಭಾಗದಲ್ಲಿ ನಂದಿಯ ಉಬ್ಬುಶಿಲ್ಪವನ್ನು ಹೊಂದಿದ್ದು ವಿಶೇಷ ರೀತಿಯಿಂದ ಕೂಡಿದೆ. ಮೈಲಾರ ಶಿಲ್ಪದ ಅಕ್ಕಪಕ್ಕದಲ್ಲಿ ಕೈಮುಗಿದು

ನಿಂತಿರುವ ಸ್ತ್ರೀ ಶಿಲ್ಪಗಳನ್ನು ಕಾಣಬಹುದು. (ಇನ್ನೂ ಹೆಚ್ಚಿನ ವಿವರವನ್ನು ಮೂರ್ತಿಶಿಲ್ಪದ ಅಧ್ಯಯನದಲ್ಲಿ ಕೊಡಲಾಗಿದೆ) ಸಭಾಮಂಟಪವು ಕಮಾನು ಆಕೃತಿಯಲ್ಲಿ ರಚನೆಯಾಗಿದ್ದು ಸಂಪೂರ್ಣ ಮುಸ್ಲಿಂ ಶೈಲಿಯಿಂದ ಕೂಡಿದೆ. ಗರ್ಭಗೃಹದ ಪ್ರವೇಶ ದ್ವಾರವು ಇತ್ತೀಚಿನ ನಿರ್ಮಾಣವಾಗಿದ್ದು ಮರದಿಂದ ಮಾಡಲಾಗಿದೆ.

ದೇವಾಲಯ ಪ್ರಾಂಗಣವು ವಿಶಾಲವಾಗಿದ್ದು ಅನೇಕ ಚಿಕ್ಕ ಚಿಕ್ಕ ಗುಡಿಗಳಿವೆ. ಇನ್ನಿತರ ಅವಶೇಷಗಳೆಂದರೆ ದೀಪಸ್ತಂಭ, ಶಿವಲಿಂಗ, ಮರದಿಂದ ಮಾಡಿದ ಕುದುರೆ ಶಿಲ್ಪಗಳು ನಂದಿ ಶಿಲ್ಪ ಹಾಗೂ ದೇವಾಲಯದ ಹೊರಗಡೆ ಭಗ್ನಗೊಂಡ ಕೆಲವು ಶಿಲ್ಪಗಳು ಕಂಡು ಬರುತ್ತವೆ. ಭಗ್ನಗೊಂಡ ಶಿಲ್ಪಗಳು ಪ್ರಾಚೀನತೆಯಿಂದ ಕೂಡಿವೆ. ಶಿಲ್ಪಗಳ ಸ್ವರೂಪವನ್ನು ಗುರುತಿಸುವುದು ಕಷ್ಟಸಾಧ್ಯವಾಗಿದೆ. ದೇವಾಲಯದ ಆಗ್ನೇಯ ದಿಕ್ಕಿನ ಚಿಕ್ಕಗುಡಿಯಲ್ಲಿ ಕುದುರೆಯ ಮೇಲೆ ಕುಳಿತ ಮೈಲಾರ ಶಿಲ್ಪವು ಪ್ರಾಚೀನವೆಂಬಂತೆ ಬಿಂಬಿತವಾಗಿರುತ್ತದೆ. ಈ ದೇವಾಲಯಕ್ಕೆ ಆಂಧ್ರಪ್ರದೇಶ, ಮಹಾರಾಷ್ಟ್ರಗಳಿಂದ ಭಕ್ತರು ಬರುತ್ತಾರೆ. ಮಹಾರಾಷ್ಟ್ರಿಗರ ಪ್ರಭಾವ ಈ ದೇವಾಲಯದ ಮೇಲೆ ಬೀರಿದೆ.

**ಹೊಸದುರ್ಗ ಮೈಲಾರಪುರ**

| | | |
|---|---|---|
| ಸ್ಮಾರಕದ ಹೆಸರು | : | ಶ್ರೀ ಮೈಲಾರಲಿಂಗೇಶ್ವರ ದೇವಾಲಯ |
| ಸ್ಥಳ | : | ಮೈಲಾರಪುರ ಗ್ರಾಮದ ಬೆಟ್ಟದಮೇಲೆ |
| ತಾಲೂಕು | : | ಹೊಸದುರ್ಗ |
| ಸ್ಥಿತಿ | : | ಉತ್ತಮ |
| ಕಾಲ | : | ವಿಜಯನಗರೋತ್ತರ |
| ಅಭಿಮುಖ | : | ಪೂರ್ವ |

ದಕ್ಷಿಣ ಕರ್ನಾಟಕದ ಭಾಗದಲ್ಲಿ ಮೈಲಾರನ ಕ್ಷೇತ್ರಗಳಲ್ಲಿ ಪ್ರಮುಖವಾಗಿ ಗೋಚರಿಸುವ ಸ್ಥಳವೇ ಹೊಸದುರ್ಗ ತಾಲೂಕಿನ ಮೈಲಾರಪುರ. ಈ ಗ್ರಾಮವು ತಾಲೂಕು ಕೇಂದ್ರದಿಂದ ಸುಮಾರು ೩೫ ಕಿ.ಮೀ ದೂರದಲ್ಲಿದೆ. ಮೈಲಾರಪುರ ಗ್ರಾಮವು ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡ ನೆಲೆ ಇದಾಗಿದೆ. ಗ್ರಾಮದ ಪಕ್ಕದಲ್ಲಿರುವ ಎತ್ತರವಾದ ಬೆಟ್ಟದಮೇಲೆ ಮೈಲಾರನ ದೇವಾಲಯವನ್ನು ಕಾಣಬಹುದಾಗಿದೆ. ಈ ದೇವಾಲಯಕ್ಕೆ ಮೆಟ್ಟಿಲನ್ನು ಏರುತ್ತಾ ಹೋಗಬೇಕು. ಸ್ಥಳೀಯವಾಗಿ ಸೂಜಿಗಲ್ಲು ಮೈಲಾರ ಎಂದು ಕರೆಯುತ್ತಾರೆ. ಈ ಗ್ರಾಮದ ದೈವದಿಂದ ಈ ಊರಿಗೆ ಹೆಸರು ಬಂದಿರಬಹುದು. ಮುಖ್ಯ ದೇವಾಲಯ ಬೆಟ್ಟದ ತುತ್ತತುದಿಯಲ್ಲಿದೆ. ಗರ್ಭಗೃಹ, ಅಂತರಾಳ ಹಾಗೂ

ಗಾಳಿಮಂಟಪದಿಂದ ಕೂಡಿದೆ. ಗರ್ಭಗೃಹವು ಗುಹೆಯಾಕಾರದಲ್ಲಿದ್ದು ಭೈರವ ಮತ್ತು ಭೈರವಿ ಶಿಲ್ಪಗಳನ್ನೇ ಮೈಲಾರ - ಮಾಳಮ್ಮನೆಂದು ಇಲ್ಲಿನ ಸ್ಥಳೀಯರು ಪೂಜಿಸುತ್ತಾರೆ. ಭೈರವ ಭೈರವೀ ಶಿಲ್ಪಗಳನ್ನು ಮೈಲಾರ - ಗಂಗೆಮಾಳಮ್ಮನ ಶಿಲ್ಪಗಳನ್ನು ಪೂಜಿಸುವ ಪರಿಪಾಟ ಕರ್ನಾಟಕದ ಕೆಲವು ಕಡೆ ಕಾಣಬಹುದು. ಅದೇ ರೀತಿಯಾಗಿ ಈ ಸ್ಥಳದಲ್ಲಿ ಆರಾಧನೆಗೆ ಒಳಪಟ್ಟಿದೆ. ಭೈರವ ಭೈರವೀ ಶಿಲ್ಪಗಳು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿದ್ದಾರೆ. ಈ ಗರ್ಭಗೃಹದಲ್ಲಿ ಸ್ವಯಂಭೂಲಿಂಗವನ್ನು ಸಹ ಕಾಣಬಹುದು. ಗರ್ಭಗೃಹದ ಪ್ರವೇಶದ್ವಾರವು ಸರಳವಾಗಿದೆ. ನವರಂಗದ ಪ್ರವೇಶದ್ವಾರದಲ್ಲಿ ಶೈವದ್ವಾರಪಾಲಕರನ್ನು ಕಾಣಬಹುದಾಗಿದೆ. ಮುಖ್ಯದೇವಾಲಯದ ಪಕ್ಕದಲ್ಲಿ ೧೬ ಕಂಬದ ಗಾಳಿಮಂಟಪವನ್ನು ಕಾಣಬಹುದಾಗಿದೆ. ದೇವಾಲಯದ ಕೆಳಭಾಗಕ್ಕೆ ಹೋದರೆ ಭೈರವ ಭೈರವೀ ಇನ್ನೆರಡು ಶಿಲ್ಪಗಳನ್ನು ಕಾಣಬಹುದು. ಸ್ಥಳೀಯರು ಈ ಶಿಲ್ಪಗಳನ್ನು ಗಂಗೆಮಾಳಮ್ಮ ಹೆಗ್ಗಪ್ಪ ಶಿಲ್ಪಗಳೆಂದು ಪೂಜಿಸುತ್ತಾರೆ. ಈ ದೇವಾಲಯದಿಂದ ಕೆಳಗೆ ಇಳಿದು ಬಂದರೆ ಚಿಕ್ಕದಾದ ಗುಡಿಯ ಹೊರಭಾಗದಲ್ಲಿ ಗಣೇಶನ ಶಿಲ್ಪವನ್ನು ಕಾಣಬಹುದು. ಈ ಶಿಲ್ಪವನ್ನು ದೊಡ್ಡಯ್ಯನೆಂದು ಕರೆಯುತ್ತಾರೆ. ಚಿಕ್ಕದೇವಾಲಯದಲ್ಲಿ ಪಶ್ಚಿಮಾಭಿಮುಖವಾಗಿ ಶಿಬಾರವನ್ನು ಕಾಣಬಹುದು. ಈ ಸ್ಥಳದಿಂದ ಕೆಳಗೆ ಹೋದರೆ ಕಂಚಾವೀರರ ಸ್ಥಾನವನ್ನು ಕಾಣಬಹುದು. ಈ ಸ್ಥಳದಲ್ಲಿ ಮೈಲಾರನಿಗೆ ಸಂಬಂಧಿಸಿದ ಅನೇಕ ಅವಶೇಷಗಳಿವೆ. ಲೋಹದಿಂದ ಮಾಡಿದ ಕುದುರೆ ಶಿಲ್ಪ, ನರಬಲಿಶಿಲ್ಪಗಳು, ಕಂಚಾವೀರರ ಖಡ್ಗ ಈ ಸ್ಥಳದಲ್ಲಿವೆ. ದೇವಾಲಯ ಹತ್ತುವ ಆರಂಭದಲ್ಲಿ ಜುಂಜಪ್ಪಗುಡಿ, ನವಗ್ರಹ ಮಂಟಪ, ಚೌಡಮ್ಮಗುಡಿ, ಎತ್ತರವಾದ ದೀಪಸ್ತಂಭಗಳನ್ನು ಕಾಣಬಹುದು. ಉತ್ತರದಲ್ಲಿ ಮಹಾದ್ವಾರವನ್ನು ಹೊಂದಿರುವ ಪ್ರವೇಶದ್ವಾರದಲ್ಲಿ ಶೈವದ್ವಾರಪಾಲಕರನ್ನು ಕಾಣಬಹುದಾಗಿದೆ.

ಪ್ರತಿವರ್ಷ ಚೈತ್ರಮಾಸದ ೧೦ ದಿನಗಳ ನಂತರ ಇಲ್ಲಿ ಮೈಲಾರನ ಜಾತ್ರೆ ನಡೆಯುತ್ತದೆ. ಜಾತ್ರೆಯ ಅಂಗವಾಗಿ ತೇರನ್ನು ಎಳೆಯಲಾಗುತ್ತದೆ. ಮೈಲಾರನಿಗೆ ಸಂಬಂಧಿಸಿದ ನಂಬಿಕೆ ಆಚರಣೆ ಈ ಸ್ಥಳದಲ್ಲಿ ಮಾಡಲಾಗುತ್ತದೆ. ಅವುಗಳೆಂದರೆ ಸರಪಳಿ ಪವಾಡ, ಶಸ್ತ್ರಪವಾಡ, ಬಗನೀಗೂಟ ಪವಾಡಗಳನ್ನು ಮಾಡುತ್ತಾರೆ. ದೇವಾಲಯದ ನಿರ್ಮಾಣದ ಬಗೆಗೆ ಯಾವುದೇ ಶಾಸನ ಆಧಾರಗಳಿಲ್ಲ. ದೇವಾಲಯವನ್ನು ಪಾಳೇಗಾರರ ಕಾಲದಲ್ಲಿ ನಿರ್ಮಿಸಿರಬಹುದು ಎಂದು ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ತಿಳಿಯಬಹುದಾಗಿದೆ.

**ಕುಬಟೂರು ಮೈಲಾರ**

ಸ್ಮಾರಕದ ಹೆಸರು : ಮೈಲಾರನ ದೇವಾಲಯ

ಸ್ಥಳ : ಕುಬಟೂರು ಗ್ರಾಮ ರಸ್ತೆಯ ಎಡಭಾಗದಲ್ಲಿ

ತಾಲೂಕು : ಸೊರಬ

ಕಾಲ : ವಿಜಯನಗರೋತ್ತರ

ಸ್ಥಿತಿ : ಮಧ್ಯಮ

ಅಭಿಮುಖ : ಪೂರ್ವ

ಕುಬಟೂರು ಗ್ರಾಮದ ಮೈಲಾರ ದೇವಾಲಯ ಆನವಟ್ಟಿ ಗ್ರಾಮದಿಂದ ಸುಮಾರು ೩ ಕಿ.ಮೀ ದೂರದಲ್ಲಿದೆ. ಕುಬಟೂರು ಮೈಲಾರ ದೇವಾಲಯ ಎನ್ನುವುದು ಸೂಕ್ತವಲ್ಲ. ಏಕೆಂದರೆ ಮನೆಯ ರೀತಿಯಲ್ಲಿ ಈ ಸ್ಥಳವಿದ್ದು ಗರ್ಭಗೃಹದಲ್ಲಿ ಮೈಲಾರ ಶಿಲ್ಪವನ್ನು ಇಟ್ಟು ಪೂಜಿಸುತ್ತಾರೆ. ಈ ಸ್ಥಳವನ್ನು ಮೈಲಾರನ ದೇವಾಲಯವಿದ್ದು ಅದು ರಾಷ್ಟ್ರಕೂಟರ ಕಾಲದ್ದೂ ಎಂದು ತರ್ಕಿಸಲಾಗಿದೆ.[೪೦] ಎಂದು ವಿದ್ವಾಂಸರಾದ ಶ್ರೀನಿವಾಸ ರಿತ್ತಿಯವರ ಅಭಿಪ್ರಾಯ. ಆದರೆ ಇಡಿ ಗ್ರಾಮದಲ್ಲಿ ಮೈಲಾರನಿಗೆ ಸಂಬಂಧಿಸಿದ ಅವಶೇಷವೆಂದರೆ ಈ ಮನೆಯಲ್ಲಿ ಇಟ್ಟಿರುವ ಮೈಲಾರ. ಈಗ ಇರುವ ಸ್ಥಳದಲ್ಲಿ ಮೈಲಾರ ದೇವಾಲಯವು ಇದ್ದಿರಬಹುದು. ಕಾಲಾನಂತರದಲ್ಲಿ ದೇವಾಲಯದ ನಾಶದಿಂದ ಮನೆಯಲ್ಲಿ ಮೈಲಾರನ ಶಿಲ್ಪವನ್ನು ಪೂಜಿಸಲಾಗುತ್ತದೆ ಎನ್ನುವುದು ನನ್ನ ಊಹೆಯಾಗಿದೆ. ಮನೆಯನ್ನೆ ದೇವಾಲಯವೆಂದು ವಾಸ್ತುಶಿಲ್ಪ ಹಿನ್ನೆಲೆಯಲ್ಲಿ ನೋಡುವುದಾದರೆ ಗರ್ಭಗೃಹ ಹಾಗೂ ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಚತುರ್ಭುಜವನ್ನು ಹೊಂದಿರುವ ಮೈಲಾರನ ಶಿಲ್ಪವಿದೆ. ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ಶಿಲ್ಪದ ತಳಭಾಗದ ಕುದುರೆಯ ಉಬ್ಬುಶಿಲ್ಪವನ್ನು ಕಂಡರಿಸಲಾಗಿದೆ. ಈ ಶಿಲ್ಪವು ಮೈಲಾರ ಶಿಲ್ಪ ಎನ್ನುವುದು ಸುಸ್ಪಷ್ಟವಾಗಿದೆ. ಮೈಲಾರ ಶಿಲ್ಪದ ಪಕ್ಕದಲ್ಲಿ ನಾಗ ಶಿಲ್ಪವಿದೆ. ತೀರ ಇತ್ತೀಚಿನ ಕಾಲದಲ್ಲಿ ದೇವಾಲಯವನ್ನು ನಿರ್ಮಿಸಲಾಗಿದೆ. ದೇವಾಲಯದ ಪೂಜೆ ಪುನಸ್ಕಾರಗಳನ್ನು ಬ್ರಾಹ್ಮಣ ಸಮುದಾಯದವರು ನೋಡಿಕೊಳ್ಳುತ್ತಾರೆ. ಈ ದೇವಾಲಯದ ಪಕ್ಕದಲ್ಲಿ ಬ್ರಾಹ್ಮಣರ ಮನೆಯಿದೆ. ಗ್ರಾಮದ ಜನರು ಈ ದೇವಾಲಯಕ್ಕೆ ಆರಾಧನೆ ಮಾಡುತ್ತಾರೆ ಆದರೆ ಮೈಲಾರನಿಗೆ ಸಂಬಂಧಿಸಿದ ಯಾವುದೇ ಪ್ರಾಚೀನ ಕುರುಹುಗಳಾಗಲೀ ಅಥವಾ ನಂಬಿಕೆ ಆಚರಣೆಗಳನ್ನು ಈ ಸ್ಥಳದಲ್ಲಿ ನಡೆಯುವುದಿಲ್ಲ. ಆದರೆ ಮೈಲಾರನ ಆರಾಧನೆ ಈ ಸ್ಥಳದಲ್ಲಿ ನಡೆಯುವುದು ವಿಶೇಷವೇ ಆಗಿದೆ.

**ಹರಿಹರದ ದೇವರಬೆಳಕೆರೆ**

ಸ್ಮಾರಕದ ಹೆಸರು : ಮೈಲಾರಲಿಂಗೇಶ್ವರ ದೇವಾಲಯ

ಸ್ಥಳ : ದೇವರಬೆಳಕೆರೆಯ ಗ್ರಾಮದ ಮಧ್ಯಭಾಗದಲ್ಲಿ

ತಾಲೂಕು : ಹರಿಹರ

ಕಾಲ : ಕ್ರಿ.ಶ ಸುಮಾರು ೧೯ ನೇ ಶತಮಾನ

ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ಹರಿಹರ ತಾಲೂಕಿನಲ್ಲಿ ಕಂಡುಬರುವ ಈ ದೇವಾಲಯವು ಮೈಲಾರನ ಸಾಂಸ್ಕೃತಿಕ ಆಚರಣೆಯಲ್ಲಿ ತುಂಬಾ ಪ್ರಾಮುಖ್ಯತೆಯನ್ನು ಪಡೆದಿದೆ. ಹರಿಹರ ತಾಲೂಕಿನಿಂದ ಸುಮಾರು ೨೩ ಕಿ.ಮೀ ದೂರದಲ್ಲಿ ದೇವರಬೆಳಕೆರೆ ಗ್ರಾಮವಿದೆ. ತೀರಾ ಇತ್ತೀಚಿಗೆ ನಿರ್ಮಾಣವಾದ ದೇವಾಲಯವಾಗಿದೆ. ವಿಶಾಲವಾದ ಪ್ರಾಂಗಣವನ್ನು ಹೊಂದಿರುವ ದೇವಾಲಯ ಗರ್ಭಗೃಹ, ಅಂತರಾಳ ಹಾಗೂ ಸಭಾಮಂಟಪವನ್ನು ಹೊಂದಿದೆ. ದೇವಾಲಯ ಗರ್ಭಗೃಹದಲ್ಲಿ ಮೈಲಾರ ಹಾಗೂ ಗಂಗೆಮಾಳಮ್ಮನ ಶಿಲ್ಪಗಳನ್ನು ಎತ್ತರವಾದ ಪೀಠದಲ್ಲಿ ಕಾಣಬಹುದು (ಮೂರ್ತಿಶಿಲ್ಪಗಳನ್ನು ಗುರುತಿಸಲು ಸಾಧ್ಯವಾಗಿಲ್ಲ ಬಟ್ಟೆಯಿಂದ ಮುಚ್ಚಲಾಗಿತ್ತು) ಮೈಲಾರ ಗಂಗೆಮಾಳಮ್ಮ ಶಿಲ್ಪಗಳ ಹಿಂದೆ ಹಿತ್ತಾಳೆಯಿಂದ ಮಾಡಿದ ಪ್ರಭಾವಳಿಯನ್ನು ಕಾಣಬಹುದು. ಹಾಗೂ ಶಿಲ್ಪಗಳ ಮುಂಭಾಗದಲ್ಲಿ ಸ್ವಯಂಭೂಲಿಂಗವನ್ನು ಕೂರಿಸಲಾಗಿದೆ. ದೇವಾಲಯದಲ್ಲಿರುವ ಕಂಬಗಳು ಇತ್ತೀಚಿನ ಕಾಲದವು. ಹೊರಮಂಟಪದ ಪ್ರವೇಶದ್ವಾರದಲ್ಲಿ ಆನೆಗಳನ್ನು ನಿಲ್ಲಿಸಲಾಗಿದೆ. ದೇವಾಲಯದ ಎದುರಿಗೆ ಕುದುರೆಯ ಶಿಲ್ಪವನ್ನು ಕಾಣಬಹುದು. ವಿಶಾಲವಾದ ಪ್ರಾಂಗಣದಲ್ಲಿ ಹೆಗ್ಗಪ್ಪಗುಡಿ, ನಾಗಶಿಲ್ಪಗಳು, ರುಂಡಶಿಲ್ಪಗಳು ಹಾಗೂ ಮೈಲಾರನ ಪಾದುಕೆಗಳಿವೆ. ದೇವಾಲಯದ ಹಿಂಭಾಗದಲ್ಲಿ ಅನೇಕ ಭಗ್ನಗೊಂಡ ಶಿಲ್ಪಗಳಿವೆ.

ಭಗ್ನಗೊಂಡ ಭೈರವಿಶಿಲ್ಪ ನಾಗಶಿಲ್ಪ, ಸ್ವಯಂಭೂ ಲಿಂಗ, ನಂದಿ ಶಿಲ್ಪಗಳು ಪ್ರಾಚೀನತೆಯಿಂದ ಕೂಡಿವೆ. ದೇವಾಲಯವು ಜೀರ್ಣೋದ್ಧಾರಗೊಂಡಿದೆ. ಈ ಶಿಲ್ಪಗಳು ಮುಖ್ಯ ದೇವಾಲಯದಲ್ಲಿ ಪೂಜೆಗೊಳ್ಳುತ್ತಿದ್ದಿರಬಹುದು. ಕಾಲಾನಂತರದಲ್ಲಿ ಹೊರಭಾಗದಲ್ಲಿ ತಂದಿಡಲಾಗಿದೆ. ಅಥವಾ ಈ ಶಿಲ್ಪಗಳನ್ನು ಬೇರೆ ಸ್ಥಳದಿಂದ ತಂದಿದ್ದು ದೇವಾಲಯದ ಜೀರ್ಣೋದ್ಧಾರ ಸಮಯದಲ್ಲಿ ಹೊರಗಡೆ ಇಟ್ಟಿರಬಹುದು ಎಂದು ನನ್ನ ಊಹೆಯಾಗಿದೆ. ಮೈಲಾರ ದೇವಾಲಯ ಹಿಂಭಾಗದ ಎಡದಲ್ಲಿ ವಿಷ್ಣುವಿನ ಶಿಲ್ಪ, ಭೈರವಿಶಿಲ್ಪ ಹಾಗೂ ಗಣೇಶ ಶಿಲ್ಪ ಪ್ರಾಚೀನತೆಯಿಂದ ಕೂಡಿವೆ. ಈ ಶಿಲ್ಪಗಳ ಮೇಲೆ ಎಣ್ಣೆ ಸುರಿದು ಶಿಲ್ಪಗಳು ಹಾಳಾಗಿವೆ. ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಎತ್ತರವಾದ ಮಹಾದ್ವಾರವಿದೆ. ದೇವಾಲಯದ ಹೊರಭಾಗದಲ್ಲಿ ಎತ್ತರವಾದ ಕಟ್ಟೆಯ ಮೇಲೆ ಶಿಬಾರವನ್ನು ಕಾಣಬಹುದು. ಮೈಲಾರನಿಗೆ ಸಂಬಂಧಿಸಿದಂತೆ ನಂಬಿಕೆ–ಆಚರಣೆಗಳನ್ನು ಭರತ ಹುಣ್ಣಿಮೆಯ ೫ ದಿನದ ನಂತರ ಜಾತ್ರೆಯಾಗುತ್ತದೆ. ರಥೋತ್ಸವ, ದೋಣಿಸೇವೆ, ಕೈಕಾಲು ಪವಾಡ, ಸರಪಳಿಪವಾಡ,

ದೀಡುನಮಸ್ಕಾರ, ಓಕಳಿ, ಕಾರಣಿಕ ನುಡಿಗಳನ್ನು ಹೇಳುವುದು ಗ್ರಾಮದ ವಿಶೇಷತೆಯಾಗಿದೆ. ದೇವಾಲಯ ಪೂಜಾವಿಧಿಗಳನ್ನು ಲಿಂಗಾಯತ ಸಮುದಾಯದವರು ನಿರ್ವಹಿಸುತ್ತಾರೆ.

**ಚಿಕ್ಕನಾಯಕನಹಳ್ಳಿ ಮೈಲಾರ**

| | |
|---|---|
| ಸ್ಮಾರಕದ ಹೆಸರುಗಳು | : ಮೈಲಾರನ ದೇವಾಲಯಗಳು |
| ಸ್ಥಳ | : ಚಿಕ್ಕನಾಯಕನಹಳ್ಳಿ |
| ತಾಲೂಕು | : ಚಿಕ್ಕನಾಯಕನಹಳ್ಳಿ |
| ಕಾಲ | : ಕ್ರಿ.ಶ ೧೮ ನೇ ಶತಮಾನ |
| ಸ್ಥಿತಿ | : ಉತ್ತಮವಾಗಿವೆ |
| ಅಭಿಮುಖ | : ಪೂರ್ವ, ಉತ್ತರ, ಪೂರ್ವ |

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ಮೈಲಾರನ ದೇವಾಲಯಗಳನ್ನು ಕಾಣಬಹುದು. ಚಿಕ್ಕನಾಯಕನಹಳ್ಳಿಯ ತಾಲೂಕಿನ ಪಶ್ಚಿಮಕ್ಕೆ ೧ ಕಿ.ಮೀ ದೂರದಲ್ಲಿ ಇತ್ತೀಚೆಗೆ ನಿರ್ಮಿಸಿದ ಮೈಲಾರನ ಮೂರು ದೇವಾಲಯಗಳಿವೆ. ಹೆಚ್ಚಾಗಿ ಕುರುಬ ಸಮುದಾಯದವರು ನೆಲೆಸಿರುವ ಈ ಸ್ಥಳಗಳಲ್ಲಿ ಅವರವರ ಬುಡಕಟ್ಟುಗಳಿಗೆ ಸಂಬಂಧಿಸಿದಂತೆ ಹಾಗೂ ಅವರ ಕುಲಗಳಿಗೆ ಸಂಬಂಧಿಸಿದಂತೆ ಮೈಲಾರನ ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಇವರು ಹೇಳುವ ಹಾಗೆ ಹೂವಿನಹಡಗಲಿಯ ಮೈಲಾರಕ್ಕೆ ಹೋಗಲು ದೂರವಿರುವುದರಿಂದ ಅಲ್ಲಿಂದ ಮೈಲಾರನ ಮೂರ್ತಿಯನ್ನು ಕೆಲವು ಅವಶೇಷಗಳನ್ನು ತಂದು ದೇವಾಲಯವನ್ನು ನಿರ್ಮಿಸಿ ಪೂಜಿಸಲಾಗುತ್ತದೆ. ಸುಮಾರು ೨೦೦ ವರ್ಷಗಳಿಂದ ಈ ರೀತಿಯ ಪರಿಪಾಟ ಮುಂದುವರಿದುಕೊಂಡು ಬಂದಿದ್ದಾರೆ.

ಹಳ್ಳಿಯರ ಬುಡಕಟ್ಟು, ಹಚ್ಚಕುರುಬರ ಬುಡಕಟ್ಟು, ಕಲ್ಲವೀರಯ್ಯನ ಬುಡಕಟ್ಟು ಎಂಬ ತಮ್ಮ ಬುಡಕಟ್ಟುಗಳಿಗೆ ಸಂಬಂಧಿಸಿದಂತೆ ದೇವಾಲಯಗಳನ್ನು ನಿರ್ಮಿಸಿಕೊಂಡು ಪೂಜಿಸಲಾಗುತ್ತದೆ.

**ಹಳ್ಳಿಯರ ಬುಡಕಟ್ಟು ಮೈಲಾರ**

ಈ ದೇವಾಲಯವು ಚಿಕ್ಕನಾಯಕನಹಳ್ಳಿ ಟೌನ್‌ನಿಂದ ಸುಮಾರು ೧ ಕಿ.ಮೀ ದೂರದಲ್ಲಿ ಈ ದೇವಾಲಯವಿದೆ. ಪಶ್ಚಿಮಾಭಿಮುಖವಾದ ದೇವಾಲಯವು ಗರ್ಭಗೃಹ, ಅಂತರಾಳ, ತೆರದಮಂಟಪವನ್ನು ಒಳಗೊಂಡಿದೆ. ಈ ದೇವಾಲಯ ಗರ್ಭಗೃಹದಲ್ಲಿ ಎತ್ತರವಾದ ಪೀಠದಲ್ಲಿ ಕುದುರೆಯಮೇಲೆ ಮೈಲಾರನು ಕುಳಿತ ಕಂಚಿನ ಪ್ರತಿಮೆಯನ್ನು ಹೊಂದಿದ ಸುತ್ತಲೂ ಪ್ರಭಾವಳಿಯು ಹೊಂದಿದ ಮೂರ್ತಿಯನ್ನು ಪೂಜಿಸಲಾಗುತ್ತದೆ.

**ಹಚ್ಚಕುರುಬರ ಬುಡಕಟ್ಟು ಮೈಲಾರ**

ಈ ದೇವಾಲಯವು ಹಳ್ಳಿಯರ ಬುಡಕಟ್ಟು ದೇವಾಲಯದ ಸ್ವಲ್ಪ ದೂರದಲ್ಲಿದೆ. ಉತ್ತರಾಭಿಮುಖವಾದ ಈ ದೇವಾಲಯದ ಗರ್ಭಗೃಹದಲ್ಲಿ ಮೈಲಾರನ ಪ್ರತಿಮೆಯನ್ನು ಇಟ್ಟು ಪೂಜಿಸಲಾಗುತ್ತದೆ. ಇತ್ತೀಚೆಗೆ ಕಟ್ಟಲಾಗಿರುವ ದೇವಾಲಯವಾಗಿದೆ. ಈ ದೇವಾಲಯದ ಎಲ್ಲಾ ಪೂಜಾವಿಧಿ ವಿಧಾನಗಳನ್ನು ಕುರುಬ ಸಮುದಾಯದವರು ನಿರ್ವಹಿಸುತ್ತಾರೆ.

**ಕಲ್ಲವೀರಯ್ಯನ ಬುಡಕಟ್ಟು ಮೈಲಾರ**

ಈ ದೇವಾಲಯ ಮೇಲೆ ತಿಳಿಸಿದ ದೇವಾಲಯಗಳ ಸ್ವಲ್ಪ ದೂರದಲ್ಲಿದೆ. ಈ ದೇವಾಲಯದ ಗರ್ಭಗೃಹದಲ್ಲಿ ಕುದುರೆಯ ಮೇಲೆ ಕುಳಿತ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದ ಹಾಗೂ ಹಿಂಬದಿಯಲ್ಲಿ ಪ್ರಭಾವಳಿಯನ್ನು ಹೊಂದಿದ ಮೈಲಾರನ ಶಿಲ್ಪವನ್ನು ಪೂಜಿಸಲಾಗುತ್ತದೆ.

ಈ ಎಲ್ಲಾ ದೇವಾಲಯಗಳು ಕುರುಬ ಸಮುದಾಯದವರು ಆರಾಧಿಸುತ್ತಿರುವುದು ವಿಶೇಷವಾಗಿದೆ. ಅವರವರ ಬುಡಕಟ್ಟುಗಳ ಅನುಸಾರವಾಗಿ ದೇವಾಲಯಗಳನ್ನು ನಿರ್ಮಿಸಿಕೊಂಡು ಯುಗಾದಿ, ದಸಾರ, ದೀಪಾವಳಿ ಹಾಗೂ ಭರತಹುಣ್ಣಿಮೆ ದಿನದಂದು ಸರಪಳಿ ಪವಾಡ, ಕೈಕಾಲು ಪವಾಡ, ದೀವಟಿಗೆ ಹಿಡಿಯುವುದು, ದೋಣಿಸೇವೆ ಹಾಗೂ ಇನ್ನಿತರ ನಂಬಿಕೆ ಆಚರಣೆಗಳನ್ನು ಮಾಡಲಾಗುತ್ತದೆ.

**ನಾಗಮಂಗಲದ ಮೈಲಾರ ಪಟ್ಟಣ**

| | | |
|---|---|---|
| ಸ್ಮಾರಕದ ಹೆಸರು | : | ಮೈಲಾರಲಿಂಗೇಶ್ವರ ದೇವಾಲಯ |
| ಸ್ಥಳ | : | ಮೈಲಾರಪಟ್ಟಣ ಗ್ರಾಮದ ಮಧ್ಯದಲ್ಲಿ |
| ತಾಲೂಕು | : | ನಾಗಮಂಗಲ |
| ಕಾಲ | : | ವಿಜಯನಗರೋತ್ತರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ನಾಗಮಂಗಲ ತಾಲೂಕು ಕೇಂದ್ರದಿಂದ ೮ ಕಿ.ಮೀ ದೂರದಲ್ಲಿ ಮೈಲಾರ ಪಟ್ಟಣ ಗ್ರಾಮವಿದೆ. ಈ ಗ್ರಾಮದ ಮಧ್ಯಭಾಗದಲ್ಲಿ ಮೈಲಾರ ದೇವಾಲಯವಿದೆ. ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾದ ಈ ದೇವಾಲಯವು ವಿಶಾಲ ಪ್ರಾಕಾರ ಗೋಡೆಯನ್ನು ಹೊಂದಿದ್ದು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ಪೂರ್ವಾಭಿಮುಖವಾದ

ದೇವಾಲಯದ ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಮೈಲಾರ-ಗಂಗೆಮಾಳಮ್ಮ, ತುಪ್ಪದ ಮಾಳಮ್ಮ ಶಿಲ್ಪಗಳಿದ್ದು ಅಕ್ಕ ಪಕ್ಕದಲ್ಲಿ ನಂದಿಶಿಲ್ಪಗಳಿವೆ. ಮೈಲಾರನ ಹಿಂದಿನ ಭಾಗದಲ್ಲಿ ಶಿವಲಿಂಗವನ್ನು ಕಾಣಬಹುದು. ಇದೇ ಗರ್ಭಗೃಹದಲ್ಲಿ ಜೋಳದಶೆಟ್ಟಿ, ಮಾಳಶೆಟ್ಟಿ, ಗಣೇಶ, ಒಕ್ಕಲಕಿ ಬೇತಾಳ, ಖಂಡೇರಾಯ ಹಾಗೂ ಸಪ್ತಮಾತೃಕೆ ಶಿಲ್ಪಗಳನ್ನು ಕಾಣಬಹುದು. ದೇವಾಲಯದ ಎಡಭಾಗದಲ್ಲಿ ಪಾರ್ವತಿ ದೇವಾಲಯವಿದೆ. ದೇವಾಲಯ ಮುಂಭಾಗದಲ್ಲಿ ಶಿಬಾರಕಟ್ಟೆ, ದೀಪಸ್ತಂಭವನ್ನು ಕಾಣಬಹುದು.

ಮಾರ್ಚ್ ತಿಂಗಳಲ್ಲಿ ಮೈಲಾರನ ಜಾತ್ರೆ ನಡೆಯುತ್ತದೆ. ಜಾತ್ರೆಯಲ್ಲಿ ಸರಪಳಿ ಪವಾಡ, ಬಾಯಿಬೀಗ, ಕೈಕಾಲು ಪವಾಡ, ರಥೋತ್ಸವ ನಡೆಯುತ್ತದೆ. ಜಾತ್ರೆಯು ಒಂದು ವಾರದ ಕಾಲ ನಡೆಯುತ್ತದೆ. ದಿನವೂ ಒಂದೊಂದು ಆಚರಣೆಗಳಿಂದ ಆರಂಭವಾಗಿ ಭಾನುವಾರ ಮೀಸಲು ಎಡೆ, ಸೋಮವಾರ ಚಂದ್ರಮಂಡಲ, ರಾಮಬಾಣ, ಮಂಗಳವಾರ ರುದ್ರಾಭಿಷೇಕ, ಮಂಗಳಾರತಿ, ಬಾಯಿಬೀಗ ಹಾಗೂ ಸರಪಳಿ ಸೇವೆ, ಬುಧವಾರ ಬ್ರಹ್ಮಮಹೋತ್ಸವ, ಗುರುವಾರ ಹಣ್ಣಿನ ಸೇವೆ ಹಾಗೂ ಸೋಮವಾರ ಉತ್ಸವಕ್ಕೆ ಕಂಕಣದೊಂದಿಗೆ ವಿಸರ್ಜನೆ ಹಾಗೂ ಹೋಳಿ ಆಡುವ ಮೂಲಕ ಜಾತ್ರೆಗೆ ತೆರೆಬೀಳುತ್ತದೆ. ಈ ರೀತಿ ಮೈಲಾರಪಟ್ಟಣ ಗ್ರಾಮದಲ್ಲಿ ಮೈಲಾರನನ್ನು ಪೂಜಿಸಲಾಗುತ್ತದೆ.

**ಶಿವಮೊಗ್ಗದ ಮೈಲಾರಲಿಂಗ ದೇವಾಲಯ**

| | | |
|---|---|---|
| ಸ್ಮಾರಕದ ಹೆಸರು | : | ಮೈಲಾರಲಿಂಗ ದೇವಾಲಯ |
| ಸ್ಥಳ | : | ಶಿವಮೊಗ್ಗ ನಗರದ ಮಧ್ಯದಲ್ಲಿ |
| ತಾಲೂಕು | : | ಶಿವಮೊಗ್ಗ |
| ಕಾಲ | : | ವಿಜಯನಗರೋತ್ತರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಉತ್ತರಾಭಿಮುಖ |

ಶಿವಮೊಗ್ಗ ನಗರದಲ್ಲಿ ಚಿತ್ರದುರ್ಗ-ಶಿವಮೊಗ್ಗ ರಸ್ತೆಯಲ್ಲಿ ಕಂಡುಬರುವ ದೇವಾಲಯವಾಗಿದೆ. ಉತ್ತರಾಭಿಮುಖವಾದ ಈ ದೇವಾಲಯವು ವಿಶಾಲವಾದ ಪ್ರಾಂಗಣವನ್ನು ಹೊಂದಿದ್ದು ಗರ್ಭಗೃಹ ಹಾಗೂ ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಮೈಲಾರನನ್ನು ಪೂಜಿಸಲಾಗುತ್ತದೆ. ದೇವಾಲಯದ ಹೊರಭಾಗದ ಪ್ರಾಂಗಣದಲ್ಲಿ ನಾಗಶಿಲ್ಪಗಳು ಗಣೇಶಶಿಲ್ಪಗಳು, ಶೈವದ್ವಾರಪಾಲಕರ ಶಿಲ್ಪಗಳು, ಗುಂಡುಗಳನ್ನು ಕಾಣಬಹುದು. ಈ ದೇವಾಲಯದಲ್ಲಿ ಮೈಲಾರನ ನಂಬಿಕೆ ಆಚರಣೆಗಳಿಗೆ ಸಂಬಂಧಿಸಿದ

ವಿಧಿವಿಧಾನಗಳನ್ನು ಮಾಡಲಾಗುತ್ತದೆ. ಸರಪಳಿ ಹರಿಯುವುದು, ಕೈಕಾಲು ಪವಾಡ, ದೋಣಿಸೇವೆ, ದೀಡುನಮಸ್ಕಾರ ಇನ್ನಿತರ ಆಚರಣೆಗಳನ್ನು ಮಾಡಲಾಗುತ್ತದೆ. ಈ ದೇವಾಲಯವು ಇತ್ತೀಚೆಗೆ ನಿರ್ಮಿಸಲಾಗಿದೆ.

**ಮುಡುಕುತೊರೆ ಮಲ್ಲಯ್ಯ (ಮಲ್ಲಿಕಾರ್ಜುನ)**

ಸ್ಮಾರಕದ ಹೆಸರು : ಮಲ್ಲಿಕಾರ್ಜುನ ದೇವಾಲಯ

ಸ್ಥಳ : ಮುಡುಕುತೊರೆ ಗ್ರಾಮದ ಎತ್ತರವಾದ ಬೆಟ್ಟದ ಮೇಲೆ

ತಾಲೂಕು : ಟಿ. ನರಸೀಪುರ

ಕಾಲ : ವಿಜಯನಗರೋತ್ತರ

ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ದಕ್ಷಿಣಕರ್ನಾಟಕದ ಗಡಿಭಾಗದ ಚಾಮರಾಜನಗರದ ಹತ್ತಿರದಲ್ಲಿರುವ ಸ್ಥಳವೇ ಮುಡುಕುತೊರೆ ಮಲ್ಲಯ್ಯ. ದೇವಾಲಯವನ್ನು ಮಲ್ಲಿಕಾರ್ಜುನ ಎಂಬ ಹೆಸರಿನಿಂದ ಕರೆಯುತ್ತಾರೆ. ಆದರೆ ಸ್ಥಳೀಯರು ಮಲ್ಲಯ್ಯ, ಮಲ್ಲಣ್ಣ ಎಂಬ ಹೆಸರಿನಿಂದ ಕರೆಯುತ್ತಾರೆ. ಮುಡುಕುತೊರೆ ಮಲ್ಲಿಕಾರ್ಜುನ (ಮಲ್ಲಯ್ಯ)ನ ದೇವಾಲಯದ ಸ್ಥಳವು ಮೈಸೂರಿನಿಂದ ೫೩ ಕಿ.ಮೀ ದೂರದಲ್ಲಿ ಹಾಗೂ ಟಿ. ನರಸೀಪುರ ತಾಲೂಕಿನಿಂದ ೨೦ ಕಿ.ಮೀ ದೂರದಲ್ಲಿದೆ. ದೇವಾಲಯ ಎತ್ತರವಾದ ಬೆಟ್ಟದ ಮೇಲೆ ಮೆಟ್ಟಿಲುಗಳನ್ನು ಹತ್ತುತ್ತಾ ಹೋದರೆ ಮಲ್ಲಿಕಾರ್ಜುನ ದೇವಾಲಯ ಸಿಗುತ್ತದೆ. ಗ್ರಾಮದಿಂದ ೧ ಕಿ.ಮೀ ದೂರದಲ್ಲಿ ಈ ದೇವಾಲಯವಿದೆ. ದೇವಾಲಯವು ವಿಜಯನಗರೋತ್ತರ ಕಾಲದಲ್ಲಿ ಅಥವಾ ಮೈಸೂರು ಒಡೆಯರ ಕಾಲಾವಧಿಯಲ್ಲಿ ನಿರ್ಮಾಣವಾಗಿರಬಹುದು. ಪೂರ್ವಾಭಿಮುಖವಾದ ದೇವಾಲಯವು ವಿಶಾಲವಾದ ಪ್ರಕಾರ ಗೋಡೆಯನ್ನು ಹೊಂದಿದ್ದು ಸಾಲುಮಂಟಪಗಳಿಂದ ಕೂಡಿದೆ. ಮುಖ್ಯ ಮಲ್ಲಿಕಾರ್ಜುನ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಸ್ವಯಂಭೂಲಿಂಗವಿದ್ದು ಹಿಂದಿನ ಭಾಗದಲ್ಲಿ ಮಲ್ಲಿಕಾರ್ಜುನನಿಗೆ ಬೆಳ್ಳಿಯಿಂದ ಮಾಡಿದ ಪ್ರತಿಮೆ ಇದೆ. ಮಲ್ಲಿಕಾರ್ಜುನ ದೇವಾಲಯ ಎಡಭಾಗಕ್ಕೆ ಭ್ರಮರಾಂಭ ದೇವಾಲಯವಿದೆ. ಈ ದೇವಾಲಯವು ಸಹ ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಭ್ರಮರಾಂಭ ಶಿಲ್ಪವನ್ನು ಪೂಜಿಸಲಾಗುತ್ತದೆ. ದೇವಾಲಯದ ಪ್ರಾಕಾರದಲ್ಲಿ ಭೈರವನ ಶಿಲ್ಪ, ಸ್ವಯಂಭೂಲಿಂಗಗಳನ್ನು, ಉಮಾಮಹೇಶ್ವರಿ ಶಿಲ್ಪ, ನವಗ್ರಹಗಳು, ಗಣೇಶಶಿಲ್ಪ, ನಂದಿಶಿಲ್ಪ, ವಿಷ್ಣುವಿನಶಿಲ್ಪ ಹಾಗೂ ನಾಗಶಿಲ್ಪಗಳನ್ನು ಕಾಣಬಹುದು.

ದೇವಾಲಯವು ಮಲ್ಲಿಕಾರ್ಜುನ ಎಂಬ ಹೆಸರಿನಿಂದ ಆರಾಧನೆಗೆ ಒಳಗಾಗಿದೆ. ಮೈಲಾರನಿಗೆ ಮಲ್ಲಿಕಾರ್ಜುನ ಎಂಬ ಹೆಸರಿನಿಂದ ಆರಾಧನೆಗೆ ಒಳಗಾಗಿರುವುದನ್ನು ಕೆಲವು ಕಡೆ ಕಾಣಬಹುದು. ಪ್ರಸ್ತುತ ಮುಡುಕುತೊರೆ ಮಲ್ಲಿಕಾರ್ಜುನ ದೇವಾಲಯವು ಮೈಲಾರ ದೇವಾಲಯವಲ್ಲ ಎಂದು ನನ್ನ ಊಹೆಯಾಗಿದೆ. ಏಕೆಂದರೆ ಮೈಲಾರನಿಗೆ ಸಂಬಂಧಿಸಿದಂತೆ ಯಾವುದೇ ಅವಶೇಷಗಳು ಈ ಸ್ಥಳದಲ್ಲಿ ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ದೊರೆತಿಲ್ಲ ಹಾಗೂ ನಂಬಿಕೆ ಆಚರಣೆಗಳಿಗೆ ಸಂಬಂಧಿಸಿದಂತೆ ಯಾವುದೇ ಆಚರಣೆಗಳನ್ನು ನನ್ನ ಅಧ್ಯಯನದ ವೇಳೆ ತಿಳಿದಿರುವುದಿಲ್ಲ. ಈ ದೇವಾಲಯದಲ್ಲಿ ಗೊರವರಾಗಲಿ, ಕಂಚಾವೀರರಾಗಲಿ ಗೋಚರಿಸುವುದಿಲ್ಲ, ದೋಣಿಸೇವೆ, ಕುದುರೆ ನಾಯಿ ಶಿಲ್ಪಗಳು ಮೈಲಾರ - ಮಾಳಮ್ಮ ಶಿಲ್ಪಗಳು ಈ ಸ್ಥಳದಲ್ಲಿ ದೊರೆತಿರುವುದಿಲ್ಲ. ಹಾಗಾಗಿ ಮಲ್ಲಿಕಾರ್ಜುನ ದೇವಾಲಯವು ಮೈಲಾರನಿಗೆ ಸಂಬಂಧಿಸಿದ ನೆಲೆಯಲ್ಲ ಎಂದು ನನ್ನ ಊಹೆಯಾಗಿದೆ. ಇದನ್ನು ಖಚಿತಪಡಿಸಲು ಇನ್ನಷ್ಟು ಅಧ್ಯಯನಗಳನ್ನು ಕೈಗೊಳ್ಳಬೇಕಿದೆ.

**ಬಿಳಿಚೋಡು ಮೈಲಾರಲಿಂಗೇಶ್ವರ**

ಸ್ಮಾರಕದ ಹೆಸರು : ಮೈಲಾರಲಿಂಗೇಶ್ವರ ದೇವಾಲಯ

ಸ್ಥಳ : ಬಿಳಿಚೋಡು ಗ್ರಾಮದ ಮಧ್ಯಭಾಗದಲ್ಲಿ

ತಾಲೂಕ : ಜಗಳೂರು

ಕಾಲ : ವಿಜಯನಗರೋತ್ತರ

ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ಬಿಳಿಚೋಡು ಗ್ರಾಮವು ಜಗಳೂರು ಮತ್ತು ದಾವಣಗೆರೆ ಮಧ್ಯದಲ್ಲಿರುವ ಗ್ರಾಮವಾಗಿದೆ. ಜಗಳೂರು ತಾಲೂಕು ಕೇಂದ್ರದಿಂದ ಸುಮಾರು ೩೦ ಕಿ.ಮೀ ಹಾಗೂ ದಾವಣಗೆರೆ ಜಿಲ್ಲಾ ಪ್ರದೇಶದಿಂದ ಸುಮಾರು ೪೬ ಕಿ.ಮೀ ದೂರದಲ್ಲಿದೆ. ಸ್ಥಳೀಯರು ಈ ಮೈಲಾರ ದೇವಾಲಯವನ್ನು ಮೈಲಾರ ಎಂದು ಕರೆಯುತ್ತಾರೆ. ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾದ ಈ ದೇವಾಲಯ ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಮೈಲಾರ ಶಿಲ್ಪವು ಆಸಿನ ಭಂಗಿಯಲ್ಲಿದೆ. ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ಶಿಲ್ಪದ ಹಿಂಭಾಗದಲ್ಲಿ ಪ್ರಭಾವಳಿಯಿಂದ ಕೂಡಿದೆ. ಮೈಲಾರನ ಪಕ್ಕದಲ್ಲಿ ಮಾಳಮ್ಮನ ಶಿಲ್ಪವಿದ್ದು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಗಳನ್ನು ಹಿಡಿದಿರುವುದು ಗೋಚರಿಸುತ್ತದೆ. ಗರ್ಭಗೃಹದ ದ್ವಾರವು ಸರಳವಾಗಿದೆ. ಅಂತರಾಳದಲ್ಲಿ

೪ ಕಂಬಗಳಿದ್ದು ಕಂಬಗಳಲ್ಲಿ ಕೆಲವು ಶಿಲ್ಪಗಳನ್ನು ಕಾಣಬಹುದು. ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವಿದೆ. ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾದ ಈ ದೇವಾಲಯ ಈ ಪರಿಸರದಲ್ಲಿ ಆರಾಧನೆಗೆ ಒಳಪಟ್ಟಿದೆ.

**ಹರಪನಹಳ್ಳಿ ಅಡವಿ ಮಲ್ಲಯ್ಯ**

ಸ್ಮಾರಕದ ಹೆಸರು : ಮೈಲಾರಲಿಂಗೇಶ್ವರ ದೇವಾಲಯ

ಸ್ಥಳ : ಅರಸೀಕೆರೆ ಗ್ರಾಮದಿಂದ ಪಶ್ಚಿಮದ ಎತ್ತರದ ಸ್ಥಳದಲ್ಲಿ

ತಾಲೂಕು : ಹರಪನಹಳ್ಳಿ

ಕಾಲ : ವಿಜಯನಗರೋತ್ತರ

ಸ್ಥಿತಿ : ಮಧ್ಯಮ

ಅಭಿಮುಖ : ಪೂರ್ವಭಿಮುಖ

ಅರಸೀಕೆರೆ ಗ್ರಾಮದಿಂದ ಪಶ್ಚಿಮಕ್ಕೆ ೫ ಕಿ.ಮೀ ದೂರದ ಎತ್ತರವಾದ ಸ್ಥಳದಲ್ಲಿ ಈ ದೇವಾಲಯವಿದೆ. ತಾಲೂಕು ಕೇಂದ್ರ ಹರಪನಹಳ್ಳಿಯಿಂದ ಸುಮಾರು ೨೨ ಕಿ.ಮೀ ದೂರದಲ್ಲಿದೆ. ಸ್ಥಳೀಯರು ಅಡವಿ ಮಲ್ಲಯ್ಯ, ಮಲ್ಲಯ್ಯ, ಮೈಲಾರ ಎಂಬ ಹೆಸರಿನಿಂದ ಕರೆಯುತ್ತಾರೆ. ಅಡವಿ ಮಲ್ಲಯ್ಯ ಎಂಬ ಹೆಸರಿನಿಂದ ಕರೆಯಲು ಕಾರಣ ದೇವಾಲಯವು ಜನವಸತಿ ಇಲ್ಲದ ಪ್ರದೇಶವನ್ನು ಬಿಟ್ಟು ಊರ ಹೊರಗಡೆ ದಟ್ಟವಾದ ಕಾಡಿನಲ್ಲಿದೆ. ಈ ದೇವಾಲಯಕ್ಕೆ ಯಾವುದೇ ಶಾಸನಾಧಾರವಿಲ್ಲ. ಆದರೆ ಅಲ್ಲಿರುವ ವಾಸ್ತು ಲಕ್ಷಣ ಹಾಗೂ ಬಳಸಿದ ಕಲ್ಲಿನಿಂದ ದೇವಾಲಯದ ಕಾಲಮಾನವನ್ನು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿಬಹುದೆಂದು ಊಹಿಸಬಹುದು. ಎತ್ತರವಾದ ಗುಡ್ಡ ಪರಿಸರದಲ್ಲಿ ಪೂರ್ವಾಭಿಮುಖವಾದ ದೇವಾಲಯ ಇದಾಗಿದೆ. ಗರ್ಭಗೃಹ, ಅಂತರಾಳ, ತೆರೆದ ಮಂಟಪಗಳನ್ನು ಹೊಂದಿರುವ ದೇವಾಲಯವು ಗರ್ಭಗೃಹದಲ್ಲಿ ಮೈಲಾರನ ಶಿಲ್ಪವನ್ನು ಪೂಜಿಸಲಾಗುತ್ತದೆ. ದೇವಾಲಯ ಪೂಜಾವಿಧಿಗಳನ್ನು ಲಿಂಗಾಯತ ಸಮುದಾಯದವರು ಮಾಡುತ್ತಾರೆ. ಹೂವಿನಹಡಗಲಿಯ ಮೈಲಾರದಂತೆ ಇಲ್ಲಿಯೂ ಸರಪಳಿ ಪವಾಡ, ಶಸ್ತ್ರ ಪವಾಡ, ದೋಣಿ ಸೇವೆ ಇನ್ನಿತರ ಆಚರಣೆಗಳನ್ನು ಮಾಡಲಾಗುತ್ತದೆ. ಭರತ ಹುಣ್ಣಿಮೆಯ ಒಂದು ತಿಂಗಳು ಮೊದಲು ಇಲ್ಲಿ ಅದ್ಧೂರಿಯಾಗಿ ಜಾತ್ರೆಯಾಗುತ್ತದೆ. ಸಾಂಸ್ಕೃತಿಕವಾಗಿ ಜೀವಂತಿಕೆಯಿಂದ ಕೂಡಿದ ಸ್ಥಳ ಇದಾಗಿದೆ. ವಿಶಾಲವಾದ ಪ್ರಾಂಗಣದಲ್ಲಿ ಮೈಲಾರನಿಗೆ ಸಂಬಂಧಿಸಿದ ಅವಶೇಷಗಳಿವೆ. ಗಂಗೆ ಮಾಳಿಯಮ್ಮನ ಗುಡಿ, ನಾಗಶಿಲ್ಪಗಳು, ಶಿಬಾರಕಟ್ಟೆ, ಭೈರವ, ಭೈರವಿ ಶಿಲ್ಪಗಳು ಹಾಗೂ ಸಾಲುಮಂಟಪಗಳಿಂದ ದೇವಾಲಯದ ಪ್ರಾಂಗಣವೂ ಒಳಗೊಂಡಿದೆ.

**ಕಡೂರು ಮೈಲಾರಲಿಂಗೇಶ್ವರ**

ಸ್ಮಾರಕದ ಹೆಸರು : ಮೈಲಾರಲಿಂಗೇಶ್ವರ ದೇವಾಲಯ

ಸ್ಥಳ : ಗ್ರಾಮದ ಮಧ್ಯಭಾಗದಲ್ಲಿ

ತಾಲೂಕು : ಕಡೂರು

ಕಾಲ : ವಿಜಯನಗರೋತ್ತರ

ಸ್ಥಿತಿ : ಉತ್ತಮ

ಅಭಿಮುಖ : ಪಶ್ಚಿಮಾಭಿಮುಖ

ಮಲೆನಾಡು ಭಾಗದಲ್ಲಿ ಮೈಲಾರನಿಗೆ ಸಂಬಂಧಿಸಿದ ಪ್ರಮುಖವಾದ ದೇವಾಲಯ ಇದಾಗಿದೆ. ಕಡೂರು ನಗರದಿಂದ ದಕ್ಷಿಣಕ್ಕೆ ಸುಮಾರು ೩ ಕಿ.ಮೀ ಅಂತರದಲ್ಲಿ ಈ ದೇವಾಲಯವಿದೆ. ದೇವಾಲಯ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿದೆ. ದೇವಾಲಯದ ನಿರ್ಮಾಣದ ಬಗೆಗೆ ಯಾವುದೇ ಶಾಸನವಿಲ್ಲ. ಪೂರ್ವಾಭಿಮುಖವಾಗಿರುವ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿರುವ ಮೈಲಾರ ಶಿಲ್ಪ ಬಂಗಾರದಿಂದ ಮಾಡಲಾಗಿದೆ. ದಸರಾ ಹಬ್ಬದಂದು ಎರಡು ದಿನಗಳ ಕಾಲ ಮೈಲಾರ ದೇವರ ಜಾತ್ರೆ ನಡೆಯುತ್ತದೆ. ಅಕ್ಕಪಕ್ಕದ ಜಿಲ್ಲೆಗಳಿಂದ ಈ ಜಾತ್ರೆಯನ್ನು ನೋಡಲು ಭಕ್ತರು ಬರುತ್ತಾರೆ. ಭಂಡಾರ ಸೇವೆ, ಚಾಟಿ ಸೇವೆ, ಚಾಮರ ಸೇವೆ, ದೋಣಿ ಸೇವೆ, ದೀಡುನಮಸ್ಕಾರ, ಶಸ್ತ್ರ ಚುಚ್ಚಿಕೊಳ್ಳುವುದು, ನಂಬಿಕೆ ಆಚರಣೆಗಳು ನಡೆಯುತ್ತವೆ. ಎರಡನೆ ದಿನ ಮೈಲಾರನ ಚಿನ್ನದ ಶಿಲ್ಪವನ್ನು ಮೆರವಣಿಗೆ ಮಾಡಲಾಗುತ್ತದೆ. ಗೊರವರು ಈ ದೇವಾಲಯಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರಿದ್ದಾರೆ. ಇವರು ಜಾತ್ರೆಯ ಸಮಯದಲ್ಲಿ ಗೊರವರ ಕುಣಿತವನ್ನು ಮಾಡುತ್ತಾರೆ. ಡೊಳ್ಳಕುಣಿತ, ಹಣ್ಣು ತುಪ್ಪಸೇವೆ ಈ ಮೆರವಣಿಗೆಯಲ್ಲಿ ನಡೆಯುತ್ತದೆ. ಸಾಂಸ್ಕೃತಿಕವಾಗಿ ಜೀವಂತಿಕೆಯಿಂದ ಮೈಲಾರನ ಆರಾಧನೆ ಈ ಸ್ಥಳದಲ್ಲಿ ಕಾಣಬಹುದಾಗಿದೆ.

**ತುರುವನೂರು ಮೈಲಾರಲಿಂಗೇಶ್ವರ**

ಸ್ಮಾರಕದ ಹೆಸರು : ಮೈಲಾರಲಿಂಗೇಶ್ವರ ದೇವಾಲಯ

ಸ್ಥಳ : ತುರುವನೂರು ಗ್ರಾಮದ ಮಧ್ಯಭಾಗದಲ್ಲಿ

ತಾಲೂಕು : ಚಿತ್ರದುರ್ಗ

ಕಾಲ : ವಿಜಯನಗರೋತ್ತರ

ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ತುರುವನೂರು ಗ್ರಾಮವೂ ತಾಲೂಕು ಕೇಂದ್ರವಾದ ಚಿತ್ರದುರ್ಗದಿಂದ ಸುಮಾರು ೨೩ ಕಿ. ಮೀ ದೂರದಲ್ಲಿದೆ. ದೇವಾಲಯದ ರಚನೆಗೆ ಸಂಬಂಧಿಸಿದಂತೆ ಯಾವುದೇ ಶಾಸನಾಧಾರವಿಲ್ಲ. ಗ್ರಾಮದ ಮಧ್ಯಭಾಗದಲ್ಲಿ ಗರ್ಭಗೃಹ ಹಾಗೂ ತೆರೆದ ಮಂಟಪಗಳಿಂದ ಕೂಡಿದೆ. ಪೂರ್ವಾಭಿಮುಖವಾದ ದೇವಾಲಯವಾಗಿದೆ. ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಭೈರವ ಮತ್ತು ಭೈರವಿ ಶಿಲ್ಪಗಳನ್ನು ಆರಾಧನೆಗೆ ಒಳಪಟ್ಟಿದೆ. ಭೈರವ ಮತ್ತು ಭೈರವಿ ಶಿಲ್ಪಗಳು ಒಂದೇ ತೆರನಾದ ಲಕ್ಷಣಗಳನ್ನು ಹೊಂದಿದ್ದು, ಕೈಗಳಲ್ಲಿ ತ್ರಿಶೂಲ, ಡಮರುಗ, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ವಿಜಯನಗರೋತ್ತರ ಕಾಲದಿಂದ ಪ್ರಸ್ತುತದವರೆಗೆ ದೇವಾಲಯ, ಜೀರ್ಣೋದ್ಧಾರಗೊಂಡಿದೆ. ಸಭಾಮಂಟಪದಲ್ಲಿ ವಿಷ್ಣುವಿನ ಶಿಲ್ಪ, ಗಣೇಶನ ಶಿಲ್ಪ ಹಾಗೂ ಮುಂಭಾಗದಲ್ಲಿ ಪಾದುಕೆಗಳನ್ನು ಕಾಣಬಹುದು. ದೇವಾಲಯ ಉತ್ತಮ ಸ್ಥಿತಿಯಲ್ಲಿ ಮೈಲಾರನಿಗೆ ಸಂಬಂಧಿಸಿದ ಕೆಲವು ನಂಬಿಕೆ ಆಚರಣೆಗಳನ್ನು ಕಾಣಬಹುದು. ಪಾಳೇಗಾರರ ಆಡಳಿತಕ್ಕೆ ಒಳಪಟ್ಟ ಈ ಪ್ರದೇಶವು ಮೈಲಾರ ದೇವಾಲಯ ನಿರ್ಮಾಣವಾಗಿರುವ ಸಾಧ್ಯತೆ ಹೆಚ್ಚಿದೆ.

**ತವಂದಿ ಮೈಲಾರಲಿಂಗೇಶ್ವರ**

ಸ್ಮಾರಕದ ಹೆಸರು : ಮೈಲಾರಲಿಂಗೇಶ್ವರ ದೇವಾಲಯ

ಸ್ಥಳ : ಗ್ರಾಮದ ಕೆರೆಯ ತೋಟದಲ್ಲಿ

ತಾಲೂಕು : ಹಿರಿಯೂರು

ಕಾಲ : ವಿಜಯನಗರೋತ್ತರ

ಸ್ಥಿತಿ : ಮಧ್ಯಮ

ಅಭಿಮುಖ : ಪೂರ್ವ

ಹಿರಿಯೂರು ತಾಲೂಕು ಕೇಂದ್ರದಿಂದ ೧೫ ಕಿ. ಮೀ ದೂರದಲ್ಲಿ ತವಂದಿ ಗ್ರಾಮವಿದೆ. ಗ್ರಾಮದಲ್ಲಿ ಮೈಲಾರಲಿಂಗೇಶ್ವರ ದೇವಾಲಯವೂ ಕೆರೆಯ ಹಿಂಬದಿಯ ತೋಟದಲ್ಲಿ ಪೂರ್ವಾಭಿಮುಖವಾದ ದೇವಾಲಯವಾಗಿದೆ. ಸ್ಥಳೀಯರು ಈ ದೈವವನ್ನು ಬೆನಕಪ್ಪ, ಮೈಲಾರ ಎಂಬ ಹೆಸರಿನಿಂದ ಕರೆಯುತ್ತಾರೆ. ದೇವಾಲಯದ ನಿರ್ಮಾಣದ ಬಗ್ಗೆ ಯಾವುದೇ ಶಾಸನಾಧಾರವಿಲ್ಲ. ಪೂರ್ವಾಭಿಮುಖವಾದ ದೇವಾಲಯದ ಗರ್ಭಗುಡಿಯಲ್ಲಿ ಮೈಲಾರ ಗಂಗೆಮಾಳಮ್ಮ ಶಿಲ್ಪಗಳಿದ್ದು ಭೈರವ ಭೈರವಿಗಳನ್ನೇ ಸ್ಥಳೀಯರು

ಮೈಲಾರನೆಂದು ಪೂಜಿಸುತ್ತಾರೆ. ಕೈಗಳಲ್ಲಿ ತ್ರಿಶೂಲ, ಡಮರುಗ, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ಮೈಲಾರ ದೇವಾಲಯದ ಪಕ್ಕದಲ್ಲಿ ಗಣೇಶನ ಗುಡಿ ಇದ್ದು ಗರ್ಭಗೃಹದಲ್ಲಿ ಗಣೇಶನ ಶಿಲ್ಪವನ್ನು ಕಾಣಬಹುದು. ದೇವಾಲಯದ ಪಕ್ಕದ ಎಡಭಾಗದಲ್ಲಿ ವೀರಗಲ್ಲು ಇದೆ.

**ಚಿಕ್ಕಜಾಜೂರು ಮೈಲಾರಲಿಂಗೇಶ್ವರ**

| | | |
|---|---|---|
| ಸ್ಮಾರಕದ ಹೆಸರು | : | ಮೈಲಾರಲಿಂಗೇಶ್ವರ ದೇವಾಲಯ |
| ಸ್ಥಳ | : | ಚಿಕ್ಕಜಾಜೂರು ಮಧ್ಯಭಾಗದಲ್ಲಿ |
| ತಾಲೂಕು | : | ಹೊಳಲ್ಕೆರೆ |
| ಕಾಲ | : | ವಿಜಯನಗರೋತ್ತರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ಚಿಕ್ಕಜಾಜೂರು ಸ್ಥಳವೂ ತಾಲೂಕು ಕೇಂದ್ರದಿಂದ ಸುಮಾರು ೧೧ ಕಿ.ಮೀ ದೂರದಲ್ಲಿದೆ. ಗ್ರಾಮದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾದ ಮೈಲಾರಲಿಂಗೇಶ್ವರ ದೇವಾಲಯನ್ನು ಕಾಣಬಹುದು. ದೇವಾಲಯವು ಗರ್ಭಗೃಹ, ಅಂತರಾಳಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಮೈಲಾರ ಮತ್ತು ಗಂಗೆಮಾಳಮ್ಮನ ಶಿಲ್ಪಗಳಿವೆ. ಕೈಗಳಲ್ಲಿ ತ್ರಿಶೂಲ, ಡಮರುಗ, ಪಾನಪಾತ್ರೆ ಹಿಡಿದಿರುವರು. ಅಂತರಾಳದ ಹಲವು ಶಾಖೆಗಳನ್ನು ಹೊಂದಿದೆ. ಲಲಾಟದಲ್ಲಿ ಗಣೇಶನ ಶಿಲ್ಪವನ್ನು ಕಾಣಬಹುದು. ದೇವಾಲಯ ಗ್ರಾಮದ ಜನರು ಹಬ್ಬ ಹರಿದಿನಗಳಲ್ಲಿ ಮೈಲಾರನಿಗೆ ಪೂಜಾವಿಧಾನಗಳನ್ನು ಮಾಡುತ್ತಾರೆ.

**ದುಮ್ಮಿಯ ಮೈಲಾರಲಿಂಗೇಶ್ವರ**

| | | |
|---|---|---|
| ಸ್ಮಾರಕದ ಹೆಸರು | : | ಮೈಲಾರಲಿಂಗೇಶ್ವರ ದೇವಾಲಯ |
| ಸ್ಥಳ | : | ದುಮ್ಮಿಯ ಗ್ರಾಮದ ಮಧ್ಯಭಾಗದಲ್ಲಿ |
| ತಾಲೂಕು | : | ಹೊಳಲ್ಕೆರೆ |
| ಕಾಲ | : | ವಿಜಯನಗರೋತ್ತರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ದುಮ್ಮಿ ಗ್ರಾಮವು ಹೊಳಲ್ಕೆರೆ ಹಾಗೂ ಚನ್ನಗಿರಿಗೆ ಹೋಗುವ ದಾರಿಯಲ್ಲಿ ಹೊಳಲ್ಕೆರೆ ತಾಲೂಕು ಕೇಂದ್ರದಿಂದ ಸುಮಾರು ೧೪ ಕಿ. ಮೀ ದೂರದಲ್ಲಿ ಈ ಗ್ರಾಮವಿದೆ. ದೇವಾಲಯವೂ ಪೂರ್ವಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಕುದುರೆಯ ಮೈಲಾರ ಶಿಲ್ಪವನ್ನು ಪೂಜಿಸುತ್ತಾರೆ. ಅಂತರಾಳದಲ್ಲಿ ಸ್ಥಳೀಯವಾಗಿ ಕಾಳಹಸ್ತಮ್ಮ ಮತ್ತು ತಿಮ್ಮಪ್ಪನೆಂದು ಕರೆಯುವ ವಿಷ್ಣುವಿನ ಶಿಲ್ಪಗಳನ್ನು ಪೂಜಿಸುತ್ತಾರೆ. ದೇವಾಲಯದ ಮುಂಭಾಗದಲ್ಲಿ ಶಿಬಾರಕಟ್ಟೆ ಹಾಗೂ ಪಾದಗಳಿವೆ. ಈ ಪಾದಗಳು ಮೈಲಾರ ಗಂಗೆಮಾಳಮ್ಮನ ಪಾದಗಳೆಂದು ಸ್ಥಳೀಯರ ನಂಬಿಕೆಯಾಗಿದೆ.

**೩.೨. ಮೈಲಾರನಿಗೆ ಸಂಬಂಧಿಸಿದ ಇತರೆ ದೇವಾಲಯಗಳು**

ಕರ್ನಾಟಕದಲ್ಲಿ ಕಂಡುಬರುವ ಮೈಲಾರನ ಕ್ಷೇತ್ರಗಳಲ್ಲಿ ಮೈಲಾರ ದೇವಾಲಯ ಪರಿಸರದಲ್ಲಿ ಅನೇಕ ದೇವಾಲಯಗಳನ್ನು ಕಾಣಬಹುದು. ಈ ದೇವಾಲಯಗಳು ಶಾಸನೋಕ್ತವಾಗಿ ಕೆಲವು ದೇವಾಲಯಗಳು ನಿರ್ಮಾಣವಾದರೆ, ಇನ್ನೂ ಕೆಲವು ದೇವಾಲಯಗಳು ಪ್ರಾಚೀನತೆಯಿಂದ ಕೂಡಿವೆ. ಸಾಮಾನ್ಯವಾಗಿ ಮೈಲಾರ ದೇವಾಲಯದ ಪಕ್ಕದಲ್ಲೆ ಗಂಗೆಮಾಳಮ್ಮನ ದೇವಾಲಯವಿರುತ್ತದೆ. ಗಂಗೆಮಾಳಮ್ಮನಿಗೆ ದೇವಾಲಯವು ಇದ್ದು ಮೂರ್ತಿಶಿಲ್ಪವಿರುವುದನ್ನು ನಾವು ಕಾಣಬಹುದು. ಹಾಗೆಯೇ ಪ್ರಮುಖವಾಗಿ ಮೈಲಾರನಿಗೆ ಸಂಬಂಧಿಸಿದಂತೆ ಚಿಕ್ಕ ಗುಡಿಗಳನ್ನು ದೇವಾಲಯದ ಪರಿಸರದಲ್ಲಿ ಕಾಣಬಹುದು. ಹೂವಿನಹಡಗಲಿಯ ಮೈಲಾರದಲ್ಲಿ ಶಾಸನೋಕ್ತವಾದ ಹೆಗ್ಗಪ್ಪನ ದೇವಾಲಯವಿದೆ. ಗಂಗೆಮಾಳಮ್ಮನ ದೇವಾಲಯಗಳಿಗೆ ಸಂಬಂಧಿಸಿದಂತೆ ದೇವಿಹೊಸೂರಿನ ಬನಶಂಕರಿ ದೇವಾಲಯ ಪ್ರಾಚೀನತೆಯಲ್ಲಿ ಮಹತ್ವದ ಸ್ಥಾನ ಪಡೆಯುತ್ತದೆ. ಹೀಗೆ ಕಂಡುಬರುವ ಕರ್ನಾಟಕದ ವಿವಿಧ ನೆಲೆಗಳಲ್ಲಿರುವ ಮೈಲಾರನಿಗೆ ಸಂಬಂಧಿಸಿದಂತೆ ಪ್ರಮುಖವಾದ ದೇವಾಲಯಗಳ ಚರ್ಚೆಯನ್ನು ಇಲ್ಲಿ ಮಾಡಲಾಗುವುದು. ದೇವಾಲಯಗಳ ಪ್ರಾಚೀನತೆ, ವಾಸ್ತು, ಶಾಸನ, ದೇವಾಲಯಕ್ಕೆ ಇರುವ ವಿಶೇಷವಾದ ಸ್ಥಾನಮಾನ ಕುರಿತು ಚರ್ಚಿಸುವ ಉದ್ದೇಶವನ್ನು ಹೊಂದಿದ್ದಾನೆ. ಮೈಲಾರ ಹಾಗೂ ಈ ದೇವಾಲಯಕ್ಕೆ ಇರುವ ಸಂಬಂಧವನ್ನು ತಿಳಿಸುವ ಪ್ರಯತ್ನ ಇಲ್ಲಿನದು. ಕರ್ನಾಟಕದಲ್ಲಿ ಹೂವಿನ ಹಡಗಲಿ, ದೇವರಗುಡ್ಡ, ಕಾರೀಮನಿ, ದೇವಿಹೊಸೂರು, ಗುಡೂರು, ಹನುಮಸಾಗರದ ಬಳಿಯ ಚಂದ್ರಗಿರಿ, ದೇವಾಲಯಗಳನ್ನು ಇಲ್ಲಿ ಚರ್ಚಿಸಲಾಗುವುದು.

**ದೇವಿಹೊಸೂರು – ಬನಶಂಕರಿ**

ಸ್ಮಾರಕದ ಹೆಸರು : ಬನಶಂಕರಿ ದೇವಾಲಯ

ಸ್ಥಳ : ಗ್ರಾಮದ ಮಧ್ಯಭಾಗದಲ್ಲಿ

ತಾಲೂಕು : ಹಾವೇರಿ

ಕಾಲ : ಕ್ರಿಶ ೧೦ನೇ ಶತಮಾನ

ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ದೇವಿಹೊಸೂರು ಬನಶಂಕರಿ ದೇವಾಲಯವು ಮೈಲಾರನಿಗೆ ಸಂಬಂಧಿಸಿದ ಪ್ರಮುಖ ದೇವಾಲಯವಾಗಿದೆ. ಮಾಳಚಿ ಎಂಬ ಉಲ್ಲೇಖವಿರುವ ಪ್ರಾಚೀನವಾದ ಶಾಸನ ಇದಾಗಿದೆ. ದೇವಾಲಯಕ್ಕೆ ಕ್ರಿ.ಶ. ೧೦೬೩ ರ ಶಾಸನವೂ ಕಲ್ಯಾಣ ಚಾಲುಕ್ಯ ಅರಸ ೧ನೇ ಸೋಮೇಶ್ವರನ ಆಳ್ವಿಕೆಯಲ್ಲಿ ಇಂದಪ್ಪಯ್ಯ ಎಂಬ ಅಧಿಕಾರಿ ಮಾಳಚಿ ದೇವಾಲಯದ ಮಕರ ತೋರಣವನ್ನು ಕಟ್ಟಿಸಿಕೊಟ್ಟ ಉಲ್ಲೇಖವಿದೆ.[೪೨] ಇದೇ ದೇವಾಲಯದ ಇನ್ನೊಂದು ಶಾಸನದಲ್ಲಿ ಕಲ್ಯಾಣ ಚಾಲುಕ್ಯ ವಂಶದ ಚಕ್ರವರ್ತಿ ಜಗದೇಕ ಮಲ್ಲನ ಆಳ್ವಿಕೆಯ ಕ್ರಿ.ಶ ೧೧೪೮ರಲ್ಲಿ ಮಹಾಸಾಮಂತಾಧಿಪತಿ ಸೇನಾಧಿಪತಿ ರೇಚರಸನು ಬನವಾಸಿ ಪ್ರಾಂತ್ಯವನ್ನು ಬಳ್ಳಿಗಾವೆ ರಾಜಧಾನಿಯಿಂದ ಆಳುತ್ತಿದ್ದನು. ದೇಯ್ವದ ಹೊಸವೂರ ಎಂದರೆ ದೇವಿಹೊಸರಿನ ಮಾಳಚಿ ದೇವಿಯ ಭಕ್ತನಾಗಿದ್ದ ಈತನು ತಾನು ಆ ದೇವಿಗೆ ಬೇಡಿಕೊಂಡಿದ್ದ ಹರಕೆಯನ್ನು ಸಲ್ಲಿಸಲು ಬಂದವನಾಗಿ ಮಾಳಚಿದೇವಿಯ ಪ್ರಸಾದಕ್ಕೆ ಪಾತ್ರರಾದ ಅಲ್ಲಿಯ ಒಂದು ಸಾವಿರ ಮಹಾಜನಗಳ ಹಾಗೂ ಸ್ಥಾನಿಕ ಅಧಿಕಾರಿಗಳ ಸಮ್ಮುಖದಲ್ಲಿ ಆ ದೇವಿಯ ನೈವೇದ್ಯ ನಂದಾದೀಪಕ್ಕೆ ದತ್ತಿ ಬಿಡಲಾಗಿದೆ.[೪೩] ಈ ಎರಡು ಶಾಸನಗಳಿಂದ ಕ್ರಿ.ಶ. ೧೦ನೇ ಶತಮಾನದ ಪೂರ್ವದಲ್ಲಿ ಮೈಲಾರ ಮಾಳಚಿ ದೇವಾಲಯಗಳು ಆರಾಧನೆಗೊಳ್ಳುತ್ತಿದ್ದವು. ಹಾಗೂ ರಾಜವಂಶಗಳು ದೇವಾಲಯಗಳಿಗೆ ದಾನ ದತ್ತಿ ಬಿಡಲಾಗಿದೆ ಎನ್ನುವುದನ್ನು ತಿಳಿಯಬಹುದಾಗಿದೆ. ಮೈಲಾರನಿಗೆ ಸಂಬಂಧಿಸಿದ ಕ್ರಿ.ಶ ೧೦೧೭ರ ತೆಕ್ಕಲಕೋಟೆ ಶಾಸನ ಹಾಗೂ ದೇವಿಹೊಸೂರು ಶಾಸನಗಳು ಪ್ರಾಚೀನ ಶಾಸನಗಳಾಗಿದ್ದು, ದೇವಾಲಯಗಳಿಗೆ ದತ್ತಿ ಬಿಟ್ಟ ಶಾಸನಗಳಲ್ಲಿ ಪ್ರಾಚೀನವಾಗಿವೆ.

ಪ್ರಸ್ತುತ ದೇವಾಲಯ ಹಿರೇಕೆರಿ ಎಂಬ ಕೆರೆಯ ಮೇಲೆ ನಿರ್ಮಿಸಲಾಗಿದೆ. ದೇವಾಲಯವೂ ಪೂರ್ವಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿರುವ ಬನಶಂಕರಿ ಶಿಲ್ಪವೂ ಎತ್ತರವಾದ ಪೀಠದ ಮೇಲೆ ಹಿಂದಿನ ಭಾಗದಲ್ಲಿ ಪ್ರಭಾವಳಿಯನ್ನು ಹೊಂದಿದೆ. ಕೈಗಳಲ್ಲಿ ತ್ರಿಶೂಲ, ಡಮರುಗ, ಖಡ್ಗ, ಪಾನಪಾತ್ರೆಯನ್ನು ಹೊಂದಿ ಸಿಂಹಮುಖದ ಮೇಲೆ ಕುಳಿತಿರುವ ಶಿಲ್ಪವಾಗಿದೆ. ಎಡಭಾಗದಲ್ಲಿ ಗಣೇಶನ ಶಿಲ್ಪವನ್ನು ಕಾಣಬಹುದಾಗಿದೆ. ಬರಿದಾದ

ಅಂತರಾಳವೂ ಎರಡು ಬದಿಯಲ್ಲಿ ಜಾಲಂಧ್ರಗಳನ್ನು ಒಳಗೊಂಡಿದೆ. ಪ್ರವೇಶ ದ್ವಾರವೂ ಸರಳತೆಯಿಂದ ಕೂಡಿದೆ. ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವನ್ನು ಕಾಣಬಹುದಾಗಿದೆ. ಅಂತರಾಳದ ಗೋಡೆಗೆ ಹೊಂದಿಕೊಂಡಂತೆ ಎಡ ಮತ್ತು ಬಲಭಾಗದಲ್ಲಿ ನಾಗ ಶಿಲ್ಪಗಳಿವೆ. ನವರಂಗವೂ ವಿಶಾಲವಾಗಿದ್ದು, ನಾಲ್ಕು ಕಲ್ಯಾಣ ಚಾಲುಕ್ಯ ಕಾಲದ ಕಂಬಗಳನ್ನು ಕಾಣಬಹುದಾಗಿದೆ. ಮುಖಮಂಟಪವೂ ವಿಶಾಲವಾಗಿದ್ದು, ದೇವಾಲಯ ಮುಂಭಾಗದಲ್ಲಿ ಬಲಿಪೀಠವನ್ನು ಇಡಲಾಗಿದೆ. ದೇವಾಲಯದ ಪ್ರಾಕಾರವೂ ವಿಶಾಲವಾಗಿದ್ದು, ಚಿಕ್ಕ ಚಿಕ್ಕ ಗುಡಿಗಳಿವೆ. ಎತ್ತರವಾದ ಶಿಖರವನ್ನು ಹೊಂದಿರುವ ದೇವಾಲಯವಾಗಿದೆ. ದೇವಾಲಯದ ಮುಂಭಾಗದಲ್ಲಿ ಇರುವ ಮಕರ ತೋರಣವಿದ್ದು ಕೆಳಭಾಗದಲ್ಲಿ ಶಾಸನವನ್ನು ಕಾಣಬಹುದಾಗಿದೆ. ಮಕರತೋರಣದ ಮಧ್ಯಭಾಗದಲ್ಲಿ ದೇವಿಯ ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದಾಳೆ. ಅಕ್ಕಪಕ್ಕದಲ್ಲಿ ಕುದುರೆ, ಸಿಂಹ, ನಂದಿಯ ಮೇಲೆ ಕುಳಿತ ಮನುಷ್ಯನ ಉಬ್ಬುಶಿಲ್ಪಗಳನ್ನು ಕಾಣಬಹುದಾಗಿದೆ. ಕಲ್ಯಾಣ ಚಾಲುಕ್ಯರಿಂದ ಇಂದಿನವರೆಗೂ ದೇವಾಲಯವೂ ಅನೇಕ ಬದಲಾವಣೆಗಳಾಗಿವೆ. ಹಾಗಾಗಿ ಇನ್ನೂ ಅನೇಕ ಅವಶೇಷಗಳು ಜೀರ್ಣೋದ್ಧಾರ ಸಮಯದಲ್ಲಿ ಕಣ್ಮರೆಯಾಗಿರುವ ಸಾಧ್ಯತೆ ಇದೆ. ಒಟ್ಟಿನಲ್ಲಿ ಪ್ರಾಚೀನವಾಗಿ ಶಾಸನೋಕ್ತವಾಗಿ ಮಾಳಚಿ ದೇವಾಲಯಕ್ಕೆ ದತ್ತಿ ಬಿಟ್ಟ ಉಲ್ಲೇಖ ಸಿಗುವುದು ದೇವಿಹೊಸೂರು ಶಾಸನದಲ್ಲಿ ಹಾಗೂ ವಾಸ್ತುಶಿಲ್ಪವೂ ಸಹ ೧೧ನೇ ಶತಮಾನಕ್ಕೆ ಕೊಂಡ್ಯೊಯುತ್ತದೆ.

**ದೇವರಗುಡ್ಡದ ಗಂಗೆಮಾಳಮ್ಮ**

| | | |
|---|---|---|
| ಸ್ಮಾರಕದ ಹೆಸರು | : | ಗಂಗೆಮಾಳಮ್ಮ ದೇವಾಲಯ |
| ಸ್ಥಳ | : | ದೇವರಗುಡ್ಡದ ಗ್ರಾಮದಲ್ಲಿ |
| ತಾಲೂಕು | : | ರಾಣೆಬೆನ್ನೂರು |
| ಕಾಲ | : | ವಿಜಯನಗರೋತ್ತರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ದೇವರಗುಡ್ಡದ ಮಾಲತೇಶ ದೇವಾಲಯ ಎಡಭಾಗದಲ್ಲಿ ದೇವಾಲಯವಿದೆ. ಮೈಲಾರನ ಹೆಂಡತಿ ಗಂಗೆಮಾಳಮ್ಮ ದೇವಾಲಯವು ಸಾಮಾನ್ಯವಾಗಿ ಎಡಭಾಗದಲ್ಲಿರುತ್ತದೆ. ಅದೇ ರೀತಿ ದೇವರಗುಡ್ಡದಲ್ಲಿಯೂ ಎಡಭಾಗದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳ, ಮತ್ತು ತೆರೆದ ಮಂಟಪಗಳಿಂದ ಕೂಡಿದೆ. ದೇವಾಲಯದ ಎದುರಿಗೆ ದೀಪಸ್ತಂಭ ಹಾಗೂ ಶಿಬಾರಗಳನ್ನು ಕಾಣಬಹುದಾಗಿದೆ.

ಸ್ಥಳೀಯವಾಗಿ ಮೂಲಸಾಂಬ ದೇವಾಲಯ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ದೇವಾಲಯದ ನಿರ್ಮಾಣದ ಬಗ್ಗೆ ಶಾಸನಾಧಾರಗಳಿಲ್ಲ. ಗರ್ಭಗೃಹದಲ್ಲಿ ಗಂಗೆಮಾಳಮ್ಮನ ಶಿಲ್ಪವೂ ಬೆಳ್ಳಿಯ ಲೋಹದಿಂದ ಮಾಡಿದೆ. ಮಾಳಮ್ಮನ ಶಿಲ್ಪದ ಹೊರಭಾಗದಲ್ಲಿ ದೊಡ್ಡದಾದ ಪ್ರಭಾವಳಿಯನ್ನು ಹೊಂದಿದೆ. (ಮೂರ್ತಿ ಲಕ್ಷಣಗಳನ್ನು ಗಮನಿಸಲು ಪ್ರಯತ್ನಿಸಿದೆ ಆದರೆ ಸಂಪೂರ್ಣ ಬಟ್ಟೆಯಿಂದ ಶಿಲ್ಪಕ್ಕೆ ಹೋದಿಸಲಾಗಿತ್ತು.) ಅಂತರಾಳದಲ್ಲಿ ಮಾಳಮ್ಮನಿಗೆ ಸಂಬಂಧಿಸಿದ ಅವಶೇಷಗಳಿವೆ. ಅಂತರಾಳದ ಪ್ರವೇಶದ್ವಾರ ಹಲವು ಪಟ್ಟಿಕೆಗಳಿಂದ ಕೂಡಿದೆ. ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವನ್ನು ಕಾಣಬಹುದಾಗಿದೆ. ಅಂತರಾಳದ ಪ್ರವೇಶದಲ್ಲಿ ಶೈವ ದ್ವಾರಪಾಲಕರನ್ನು ಕಾಣಬಹುದಾಗಿದೆ. ದೇವಾಲಯಕ್ಕೆ ಎತ್ತರವಾದ ಶಿಖರವನ್ನು ಹೊಂದಿದೆ.

**ಹೂವಿನ ಹಡಗಲಿ ಮೈಲಾರದ ಗಂಗೆಮಾಳಮ್ಮ**

| | | |
|---|---|---|
| ಸ್ಮಾರಕದ ಹೆಸರು | : | ಗಂಗೆಮಾಳಮ್ಮ ದೇವಾಲಯ |
| ಸ್ಥಳ | : | ಮೈಲಾರ ಗ್ರಾಮದ ಮಧ್ಯಭಾಗದಲ್ಲಿ |
| ತಾಲೂಕು | : | ಹೂವಿನಹಡಗಲಿ |
| ಕಾಲ | : | ವಿಜಯನಗರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ಮೈಲಾರ ಗ್ರಾಮದ ಮಧ್ಯಭಾಗದಲ್ಲಿ ಗಂಗೆಮಾಳಮ್ಮ ದೇವಾಲಯ ಮೈಲಾರ ದೇವಾಲಯದ ಎಡಭಾಗದಲ್ಲಿದೆ. ಗರ್ಭಗೃಹ ಹಾಗೂ ಸಭಾಮಂಟಪಗಳಿಂದ ಕೂಡಿದ ಪೂರ್ವಾಭಿಮುಖವಾದ ದೇವಾಲಯವಾಗಿದೆ. ಗರ್ಭಗೃಹದಲ್ಲಿರುವ ಗಂಗೆಮಾಳಮ್ಮ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿರುವಳು, ಸಭಾಮಂಟಪದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯಿಂದ ಕೂಡಿದ ನಾಲ್ಕು ಕಂಬಗಳಿವೆ. ದೇವಾಲಯದ ಮುಂಭಾಗದಲ್ಲಿ ಎತ್ತರವಾದ ದೀಪಸ್ತಂಭವಿದೆ. ಈ ದೇವಾಲಯವನ್ನು ವಿಜಯನಗರ ಕಾಲದಲ್ಲಿ ನಿರ್ಮಾಣವನ್ನು ಮಾಡಿರಬಹುದು. ಗಂಗೆಮಾಳಮ್ಮ ದೇವಾಲಯದ ಮುಂದೆ ಜಾತ್ರೆಯ ಸಮಯದಲ್ಲಿ ಚಾಟಿ ಸೇವೆ, ದೀಡು ನಮಸ್ಕಾರ, ಕಂಚಾವೀರರ ಪವಾಡಗಳು, ದೇವಾಲಯದ ಎದುರಿಗೆ ನಡೆಯುತ್ತವೆ. ಮೈಲಾರನಷ್ಟೆ ಪ್ರಾಮುಖ್ಯತೆಯನ್ನು ಹೂವಿನಹಡಗಲಿಯ ಮೈಲಾರದ ಗಂಗೆಮಾಳಮ್ಮನಿಗೆ ನೀಡಲಾಗಿದೆ. ದೇವಾಲಯದ ನಿರ್ಮಾಣದ ಬಗೆಗೆ ಶಾಸನಾಧಾರಗಳಿಲ್ಲ. ಮೈಲಾರ ಹಾಗೂ ಹೆಗ್ಗಪ್ಪ ದೇವಾಲಯದಲ್ಲಿ ಜೀರ್ಣೋದ್ಧಾರಗೊಳಿಸಿ ದತ್ತಿಬಿಟ್ಟ ಉಲ್ಲೇಖಗಳು ದೊರೆಯುತ್ತವೆ.

**ಮೈಲಾರದ ಹೆಗ್ಗಪ್ಪ**

| | | |
|---|---|---|
| ಸ್ಮಾರಕದ ಹೆಸರು | : | ಹೆಗ್ಗಪ್ಪ ದೇವಾಲಯ |
| ಸ್ಥಳ | : | ಗ್ರಾಮದ ಮಧ್ಯಭಾಗದಲ್ಲಿ |
| ತಾಲೂಕು | : | ಹರಪನಹಳ್ಳಿ |
| ಕಾಲ | : | ಕ್ರಿ.ಶ. ೧೩ನೇ ಶತಮಾನ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ಮೈಲಾರ ಗ್ರಾಮದ ಮೈಲಾರ ದೇವಾಲಯ ಉತ್ತರ ದಿಕ್ಕಿನಡೆಗೆ ಸಾಗಿದರೆ ಹೆಗ್ಗಪ್ಪ ದೇವಾಲಯವಿದೆ. ಹೆಗ್ಗಪ್ಪನನ್ನು ಏಳುಕೋಟಿ ಜನರಿಗೆ ಪ್ರಧಾನಿಯಾದ್ದರಿಂದ ಹೆಗ್ಗಡೆ ಎಂದು ಕರೆಯುತ್ತಾರೆ. ಹೆಗ್ಗಪ್ಪನ ದೇವಾಲಯ ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿರುವ ಹೆಗ್ಗಪ್ಪ ಶಿಲ್ಪವೂ ಮುಖದ ಮೇಲೆ ಮೀಸೆ, ತ್ರಿಶೂಲ, ಡಮರು, ಅಂಕುಶ, ಪಾಶಗಳನ್ನು ಹಿಡಿದಿದ್ದಾನೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿವೆ. ವಿಜಯನಗರ ಕಾಲದಲ್ಲಿ ಈ ದೇವಾಲಯವೂ ಜೀರ್ಣೋದ್ಧಾರಗೊಂಡಿದೆ. ಈ ದೇವಾಲಯಕ್ಕೆ ಕ್ರಿ.ಶ. ೧೪೪೩ ರ ಶಾಸನದಲ್ಲಿ ಮೈಲಾರದೇವರ ಭಂಡಾರದ ಅಧಿಕಾರಿ ನಾಗಣ್ಣನ ಮಗ ಗಂಗಯ್ಯನು ಹೆಗ್ಗಡೆ ದೇವರಿಗೆ ಕಲ್ಲಿನ ಮಂಟಪ ಕಟ್ಟಿಸಿದ್ದಾನೆ ಎಂದು ಉಲ್ಲೇಖವಿದೆ.[೪೧] ಮೈಲಾರನಿಗೆ ಸಂಬಂಧಿಸಿದ ಕರ್ನಾಟಕದ ಹೆಗ್ಗಪ್ಪ ದೇವಾಲಯಕ್ಕೆ ಮಂಟಪವನ್ನು ಕಟ್ಟಿಸಿದ ಪ್ರಮುಖ ಶಾಸನ ಇದಾಗಿದೆ. ಗಂಗೆಮಾಳಮ್ಮ ದೇವಾಲಯದ ನಂತರ ಕರ್ನಾಟಕದಲ್ಲಿ ಹೆಗ್ಗಪ್ಪ ಉಲ್ಲೇಖವಿರುವ ದೇವಾಲಯ ಇದಾಗಿದೆ.

**ಚಂದ್ರಗಿರಿಯ ಗಂಗೆಮಾಳಮ್ಮ**

| | | |
|---|---|---|
| ಸ್ಮಾರಕದ ಹೆಸರು | : | ಗಂಗೆಮಾಳಮ್ಮ ದೇವಾಲಯ |
| ಸ್ಥಳ | : | ಚಂದಾಲಿಂಗೇಶ್ವರ ದೇವಾಲಯ ಪಕ್ಕದಲ್ಲಿ |
| ತಾಲೂಕು | : | ಕುಷ್ಟಗಿ |
| ಕಾಲ | : | ವಿಜಯನಗರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪೂರ್ವ |

ಸ್ಥಳೀಯವಾಗಿ ಚಂದಾಲಿಂಗೇಶ್ವರ ಎಂದು ಕರೆಯುವ ಮೈಲಾರ ದೇವಾಲಯವೂ ಕುಷ್ಟಗಿ ತಾಲೂಕಿನ ಹನುಮಸಾಗರದಿಂದ ಪಶ್ಚಿಮಕ್ಕೆ ೫ ಕಿ.ಮೀ ದೂರದಲ್ಲಿದೆ. ಚಂದಾಲಿಂಗೇಶ್ವರ ದೇವಾಲಯು ಪಕ್ಕದಲ್ಲಿ ಗಂಗೆವಮಾಳಮ್ಮ ದೇವಾಲಯು ಪೂರ್ವಾಭಿಮುಖವಾಗಿದೆ. ವಿಶಾಲವಾದ ಪ್ರಾಂಗಣದ ಮಧ್ಯಭಾಗದಲ್ಲಿ ಗಂಗೆಮಾಳಮ್ಮ ದೇವಾಲಯವಿದೆ. ಗರ್ಭಗೃಹ, ಅಂತರಾಳ, ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹವೂ ನವೀಕರಿಸಲಾಗಿದೆ. ಎತ್ತರವಾದ ಪೀಠದ ಮೇಲೆ ಗಂಗೆ ಮಾಳಮ್ಮನ ಶಿಲ್ಪವಿದೆ. ಕಪ್ಪು ಶಿಲೆಯಿಂದ ಕೂಡಿದೆ. ಅಂತರಾಳದ ಪ್ರವೇಶದ್ವಾರವೂ ಸರಳತೆಯಿಂದ ಕೂಡಿದೆ. ಲಲಾಟದಲ್ಲಿ ಗಣೇಶನ ಉಬ್ಬುಶಿಲ್ಪವಿದೆ. ಎತ್ತರವಾದ ಶಿಖರವನ್ನು ಒಳಗೊಂಡಿದ್ದು, ದೇವಾಲಯವನ್ನು ಕಾಲ ಕಾಲಕ್ಕೆ ಜೀರ್ಣೋದ್ಧಾರಗೊಳಿಸಲಾಗಿದೆ.

**ಗುಡೂರು ಗಂಗೆಮಾಳಮ್ಮ**

| | | |
|---|---|---|
| ಸ್ಮಾರಕದ ಹೆಸರು | : | ಗಂಗೆಮಾಳಮ್ಮ ದೇವಾಲಯ |
| ಸ್ಥಳ | : | ಗ್ರಾಮದ ಮಧ್ಯಭಾಗದಲ್ಲಿ |
| ತಾಲೂಕು | : | ಹುನಗುಂದ |
| ಕಾಲ | : | ವಿಜಯನಗರೋತ್ತರ |
| ಸ್ಥಿತಿ | : | ಉತ್ತಮ |
| ಅಭಿಮುಖ | : | ಪಶ್ಚಿಮ |

ಗುಡೂರು ಹುಲ್ಲಪ್ಪ ದೇವಾಲಯ ವಾಯುವ್ಯ ಮೂಲೆಯ ಕಡೆ ಗಂಗೆಮಾಳಮ್ಮನ ದೇವಾಲಯವಿದೆ. ದೇವಾಲಯವೂ ಗರ್ಭಗೃಹ, ಸಭಾಮಂಟಪವನ್ನು ಹೊಂದಿರುವ ದೇವಾಲಯದ ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಗಂಗೆಮಾಳಮ್ಮನ ಶಿಲ್ಪವಿದೆ. ಆಸೀನ ಭಂಗಿಯಲ್ಲಿರುವ ಈ ಶಿಲ್ಪವೂ ಕೈಗಳಲ್ಲಿ ಖಡ್ಗ ಮತ್ತು ಪಾನಬಟ್ಟಲು ಹಿಡಿದಿದೆ. ಗಂಗೆಮಾಳಮ್ಮನ ಶಿಲ್ಪದ ಮುಂಭಾಗದಲ್ಲಿ ದೊಡ್ಡದಾದ ಎರಡು ಗುಂಡುಗಳನ್ನು ಕಾಣಬಹುದು. ಗರ್ಭಗೃಹದಲ್ಲಿ ಭುವನೇಶ್ವರಿ ಇದ್ದು, ವಿಶೇಷವಾಗಿದೆ. ಗರ್ಭಗೃಹದ ಪ್ರವೇಶದ್ವಾರವೂ ಸರಳವಾಗಿದ್ದು, ಲಲಾಟದಲ್ಲಿ ಇತ್ತೀಚಿಗೆ ಜೋಡಿಸಲಾದ ದೇವಿಯ ಶಿಲ್ಪವಿದೆ. ಮುಖಮಂಟಪದಲ್ಲಿ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾದ ನಾಲ್ಕು ಕಂಬಗಳನ್ನು ಕಾಣಬಹುದು. ಸಭಾಮಂಟಪಕ್ಕೆ ಹತ್ತಲು ಇತ್ತೀಚಿಗೆ ನಿರ್ಮಿಸಿದ ಮೆಟ್ಟಿಲುಗಳನ್ನು ಕಾಣಬಹುದು. ಸಭಾಮಂಟಪದ ಬಲ ಮತ್ತು ಎಡಭಾಗದಲ್ಲಿ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಗುಡೂರಿನ ಜನರು ಈ ದೇವತೆಯನ್ನು ನಿತ್ಯವೂ ಆರಾಧನೆ ಮಾಡುತ್ತಾರೆ.

ಜಾತ್ರೆಯ ಹಾಗೂ ಹಬ್ಬಗಳ ದಿನದಲ್ಲಿ ವಿಶೇಷವಾದ ಮನ್ನಣೆಯನ್ನು ಗಂಗೆಮಾಳಮ್ಮ ಪಡೆಯುತ್ತಾಳೆ.

**ಕಾರೀಮನಿ ಗಂಗೆಮಾಳಮ್ಮ**

ಸ್ಮಾರಕದ ಹೆಸರು : ಗಂಗೆಮಾಳಮ್ಮ ದೇವಾಲಯ

ಸ್ಥಳ : ಮಲ್ಲಯ್ಯನ ದೇವಾಲಯದ ಎಡಭಾಗದಲ್ಲಿ

ತಾಲೂಕು : ಸವದತ್ತಿ

ಕಾಲ : ವಿಜಯನಗರೋತ್ತರ

ಸ್ಥಿತಿ : ಉತ್ತಮ

ಅಭಿಮುಖ : ದಕ್ಷಿಣ

ಸವದತ್ತಿ ತಾಲೂಕಿನಲ್ಲಿ ಕಂಡುಬರುವ ಮಲ್ಲಯ್ಯನ ದೇವಾಲಯಕ್ಕೆ ತಾಗಿದಂತೆ ಎಡಭಾಗದಲ್ಲಿ ಗಂಗೆಮಾಳಮ್ಮ ದೇವಾಲಯವಿದೆ. ದೇವಾಲಯ ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಚತುರ್ಭುಜ ದಾರಿಯಾದ ಗಂಗೆಮಾಳಮ್ಮನ ಶಿಲ್ಪವೂ ಕಪ್ಪು ಶಿಲೆಯಿಂದ ಕೂಡಿದೆ. ಕೈಗಳಲ್ಲಿ ಕ್ರಮವಾಗಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿರುವಳು. ದೇವಾಲಯವನ್ನು ಕ್ರಿ.ಶ. ೧೯೯೩ ರಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಭೈರವಿ ಲಕ್ಷಣಗಳನ್ನು ಹೊಂದಿರುವ ಶಿಲ್ಪವಾಗಿದೆ. ಕಾರೀಮನಿಯ ಪರಿಸರದಲ್ಲಿ ಭಕ್ತರು ಈ ದೇವಿಗೆ ವಿಶೇಷವಾಗಿ ಪೂಜಿಸುತ್ತಾರೆ. ದೇವಾಲಯಕ್ಕೆ ಎತ್ತರವಾದ ಶಿಖರಗಳಿವೆ.

ಹೀಗೆ ಕರ್ನಾಟಕದಲ್ಲಿ ಕಂಡುಬರುವ ಮೈಲಾರ ಮತ್ತು ಮೈಲಾರನಿಗೆ ಸಂಬಂಧಿಸಿದ ಇತರೆ ದೇವಾಲಯಗಳನ್ನು ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಅಧ್ಯಾಯದ ಉದ್ದೇಶ ದೇವಾಲಯದ ಸ್ಥಳದ ಪರಿಚಯ, ಶಾಸನೋಕ್ತ, ದೇವಾಲಯದ ಪ್ರಾಚೀನತೆ, ದೇವಾಲಯದ ವಾಸ್ತು ಲಕ್ಷಣ ಹಾಗೂ ದೇವಾಲಯದ ವಿಶೇಷತೆಯನ್ನು ತಿಳಿಸುವುದಾಗಿದೆ. ಕರ್ನಾಟಕದಲ್ಲಿ ಕಂಡುಬರುವ ಮೈಲಾರ ದೇವಾಲಯ ಮಾಳಚಿ ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಾಲದಿಂದ ಆರಂಭವಾಗಿ ವಿಜಯನಗರದವರೆಗೆ ದೇವಾಲಯಗಳು ನಿರ್ಮಾಣವಾಗಿವೆ. ಉತ್ತರ ಕರ್ನಾಟಕದ ಕೆಲವು ಶಾಸನಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೆಲವು ಅವಶೇಷಗಳು ದೇವಾಲಯಗಳ ನಿರ್ಮಾಣದ ಬಗೆಗೆ ಆಧಾರಗಳಿವೆ. ಆದರೆ ವಿಜಯನಗರ ಕಾಲದಲ್ಲಿ ಈ ದೈವದ ಪ್ರಸಿದ್ಧಿಯಿಂದಾಗಿ ದಕ್ಷಿಣ ಕರ್ನಾಟಕ ಕೆಲವು ಭಾಗಗಳಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಲಾಗಿದೆ. ದಕ್ಷಿಣ ಕರ್ನಾಟಕದ ಎಲ್ಲಾ ದೇವಾಲಯ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣ ಮಾಡಲಾಗಿದೆ. ಹೀಗೆ ಮೈಲಾರನ

ಪ್ರಾಚೀನತೆಯನ್ನು ದಕ್ಷಿಣ ಕರ್ನಾಟಕದಲ್ಲೇ ಹುಡುಕದೇ ಉತ್ತರ ಕರ್ನಾಟಕದ ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪದ ಹಿನ್ನೆಲೆಯಲ್ಲಿ ಪತ್ತೆ ಹಚ್ಚಬೇಕಾಗಿದೆ. ದೇವಾಲಯಗಳು ಮೈಲಾರನ ಪ್ರಾಚೀನತೆಯನ್ನು ತಿಳಿಸಲು ಬಹುಮುಖ್ಯ ಆಕರ ಸಾಮಗ್ರಿಗಳಾಗಿವೆ.

**ಕೊನೆ ಟಿಪ್ಪಣಿಗಳು**

೧. ಅರ್ಪಣ. ಕೂ. ಸ. ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ ಪು.೧

೨. ಅದೇ ಪು.೨

೩. ಮನೋಜ್. ಜಿ. - ೨೦೧೫, ದೇವಾಲಯ ವಾಸ್ತು ವಿಜ್ಞಾನ, ಪು.೧೭

೪. ಅದೇ, ಪು.೧೧

೫. ಪ್ರಭಾಕರ, ೨೦೧೧ ದೇವಾಲಯ ವಾಸ್ತು, ಪು.೧೭

೬. ಅರ್ಪಣ ಕೂ. ಸ. ಪೂರ್ವೋಕ್ತ, ಪು.೮

೭. ಅದೇ, ಪು.೯

೮. ಅದೇ, ಪು.೧೦

೯. ಜಯಮ್ಮ ಕರಿಯಣ್ಣ, ೨೦೧೦ ಶಾಸನಗಳಲ್ಲಿ ದಾನದತ್ತಿಗಳು, ಪು.೪೬

೧೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೧, ೧೯೯೮, ಬಳ್ಳಾರಿ ಜಿಲ್ಲೆ, ಪು.೧೩೨

೧೧. ಪಾಂಡುರಂಗರಾವ್ ದೇಸಾಯಿ, ೧೯೫೯, ಮೈಲಾರಲಿಂಗ ಐತಿಹಾಸಿಕ ವಿಮರ್ಶೆ ಪು.೧೧೭

೧೨. ಅದೇ, ಪು.೧೧೮

೧೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ - ೦೧, ಪೂರ್ವೋಕ್ತ ಪು.೩೩೩

೧೪. ಅದೇ, ಪು.೩೩೪

೧೫. ಅದೇ, ಪು.೩೩೫

೧೬. ಅದೇ, ಪು.೩೩೬

೧೭. ಅದೇ, ಪು.೩೩೫

೧೮. ಅದೇ, ಪು.೩೩೫

೧೯. ಅದೇ, ಪು.೩೩೩

೨೦. ಅದೇ, ಪು.೩೩೩

೨೧. ಅದೇ, ಪು.೩೩೪

೨೨. ಅದೇ, ಪು.೩೩೬

೨೩. ಅದೇ ಪು.೧೩೨

೨೪. ಅದೇ, ಪು.೧೩೪-೧೪೫

೨೫. ಅದೇ, ಪು.೧೩೨

೨೬. ನೇಗಿನಹಾಳ. ಎಂ.ಬಿ., ೧೯೯೨ ಮೈಲಾರಲಿಂಗ-ಖಂಡೋಬಾ ಪು.೨೬

೨೭. ವಾಸುದೇವ ಬಡಿಗೇರ (ಲೇ), ೨೦೦೩, ರಾಮಕೃಷ್ಣ, ಕೆ.ಆರ್. ಮತ್ತು ಇತರರು (ಸಂ) ವಿಜಯನಗರ ಅಧ್ಯಯನ ಸಂ - ೦೮ ಪು.೧೪೫

೨೮. ಸುರೇಶ. ಕೆ. ಎಮ್., ವಾಸುದೇವ ಬಡಿಗೇರ, ಸೋಮಶೇಖರ್ ಎಸ್.ವೈ., ಮಾಡಲಗೇರಿ ಕೊಟ್ರೇಶ್, ೧೯೯೯ ಕರ್ನಾಟಕ ದೇವಾಲಯ ಕೋಶ ಬಳ್ಳಾರಿ ಜಿಲ್ಲೆ, ಪು.೬೭

೨೯. ಸೂರ್ಯನಾಥ್ ಯು. ಕಾಮತ್(ಸಂ), ಭಾರತದ ಗ್ಯಾಸೆಟಿಯರ್ - ಧಾರವಾಡ ಜಿಲ್ಲೆ, ಪು.೯೬

೩೦. ಅದೇ, ಪು.೯೭

೩೧. ದೇವರಕೊಂಡಾರೆಡ್ಡಿ (ಸಂ), ಭಟ್‌ಸೂರಿ. ಕೆ.ಜಿ., ಕಲವೀರ ಮನ್ವಾಚಾರ್, ಪರಮಶಿವ ಮೂರ್ತಿ, ಡಿ.ವಿ. ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂಪುಟ-೦೨ ಪು.೩೦೫

೩೨. ನೇಗಿನಹಾಳ. ಎಂ.ಬಿ., ಪೂರ್ವೋಕ್ತ, ಪು.೨೯

೩೩.ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೦೮, ಬೀದರ್ ಜಿಲ್ಲೆ, ೨೦೦೬, ಪು.೨೩

೩೪. ಅದೇ, ಪು.೧೦೪

೩೫. ಅದೇ, ಪು.೭೪

೩೬. ಅದೇ, ಪು.೧೨೦

೩೭. ಅದೇ, ಪು.೧೭೦-೧೭೧

೩೮. ಅದೇ, ಪು.೧೭೨ ರಿಂದ ೧೭೬

೩೯. ಅದೇ, ಪು.೧೮೦

೪೦. ಶ್ರೀನಿವಾಸ್ ರಿತ್ತಿ, ೧೯೭೦, ಮೈಲಾರ ದೇವರು, ಪು.೩೭

೪೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ - ೦೧ ಪೂರ್ವೋಕ್ತ, ಪು.೩೩೫

೪೨. ಪಾಂಡುರಂಗರಾವ್ ದೇಸಾಯಿ ಪೂರ್ವೋಕ್ತ, ಪು.೧೧೭

೪೩. ಅದೇ, ಪು.೧೧೮



# ಅಧ್ಯಾಯ : ನಾಲ್ಕು

## ಮೂರ್ತಿಶಿಲ್ಪಗಳು

೪.೧. ಮೈಲಾರನ ಶಿಲ್ಪಗಳು

೪.೨. ಗಂಗೆಮಾಳಮ್ಮನ ಶಿಲ್ಪಗಳು

೪.೩. ಇತರೆ ಶಿಲ್ಪಗಳು

## ಅಧ್ಯಾಯ: ನಾಲ್ಕು

## ಮೂರ್ತಿಶಿಲ್ಪಗಳು

ಇತಿಹಾಸ ಮತ್ತು ಪರಂಪರೆಯಲ್ಲಿ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳಿಗೆ ಮಹತ್ವದ ಸ್ಥಾನವಿದೆ. ಯಾವುದೇ ಒಂದು ಪರಂಪರೆಯನ್ನು ಅರಿಯಬೇಕಾದರೆ ಮೂರ್ತರೂಪ, ಅಮೂರ್ತ ಮುಖಗಳಿರುತ್ತವೆ. ಒಂದು ಸಂಸ್ಕೃತಿಯಲ್ಲಿ ಭಾವನೆಗಳು ಅಮೂರ್ತ ರೂಪದಲ್ಲಿ ಮೊದಲು ಕಾಣಿಸಿಕೊಳ್ಳುತ್ತದೆ. ಅಮೂರ್ತ ರೂಪಗಳನ್ನು ಸಾಕಾರಗೊಳಿಸಿ ಅವುಗಳಿಗೆ ಮೂರ್ತರೂಪವನ್ನು ನೀಡುವುದೇ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪದ ಪ್ರಮುಖಗುರಿ.[೧] ಯಾವುದೇ ಮೂರ್ತಿಶಿಲ್ಪದ ಅಧ್ಯಯನದ ಹಿನ್ನೆಲೆಯಲ್ಲಿ ಭಾವನೆಗಳ ಸಮುಚ್ಚಯ ಅಮೂರ್ತವಾಗಿ ಅಡಗಿರುತ್ತದೆ. ಆದ್ದರಿಂದ ಒಂದು ಪರಂಪರೆಯ ಮೂರ್ತಿಶಿಲ್ಪವನ್ನು ಅಧ್ಯಯನ ಮಾಡುವಾಗ ಆಯಾ ಕಾಲ, ಪರಿಸರ, ಸಾಮಾಜಿಕ ನಂಬಿಕೆಗಳು, ಆಚರಣೆಗಳು ಮತ್ತು ಇತರೆ ಅನೇಕ ಅಂಶಗಳನ್ನು ಗಮನಿಸುವುದು ಅವಶ್ಯಕವಾಗಿದೆ. ಭಾರತೀಯ ಇತಿಹಾಸ ಪರಂಪರೆಯಲ್ಲಿ ಶಿಲ್ಪಗಳು ಮಹತ್ವವಾದ ಸ್ಥಾನಮಾನವನ್ನು ಪಡೆದುಕೊಂಡಿವೆ. ನಮ್ಮ ನಾಡಿನ ಸಂಸ್ಕೃತಿಯನ್ನು ಮುಂಚೂಣೆಗೆ ಕೊಂಡೊಯ್ಯಲು ಪ್ರಮುಖವಾದ ಪಾತ್ರವನ್ನು ಬೀರಿವೆ. ಪ್ರಾಚೀನ ಕಾಲದಲ್ಲಿ ಮಾನವ ನಿಸರ್ಗವನ್ನು ಪೂಜಿಸುತ್ತಿದ್ದ, ತನ್ನಲ್ಲಿರುವ ಕಲೆಯನ್ನು ಬಳಸಿ ಅದಕ್ಕೊಂದು ಆಕಾರವನ್ನು ನೀಡಿ, ದೈವಿ ಸ್ವರೂಪದ ಭಾವಾರ್ಥ ಕಲ್ಪಿಸಿ ಅದನ್ನು ಪೂಜಿಸತೊಡಗಿದ.[೨] ಸಂಸ್ಕೃತದ ಶಿಲ್ಪವೆಂಬ ಶಬ್ಧ 'ಶೀಲ ಸಮುದೌ' ಎನ್ನುವ ಧಾತುವಿನಿಂದ ಒದಗಿ ಬಂತು. ಮನಸ್ಸಿನ ಏಕಾಗ್ರತೆ ಏಕಾನಾತೆಯಿಂದ ಹೊಂದಿ ಬಂದುದೆಲ್ಲ ಶಿಲ್ಪವೆಂದು ಹೇಳಲಾಗುತ್ತದೆ, ಹಾಗೂ ಶಿಲ್ಪೋಪನಿಷತ್ತಿನಲ್ಲಿ ಬರುವ "ಮನಸಾಯತ್ ಸೃಜ್ಯತೆ ವಿಶ್ವ ಕೃತಸ್ತತ್ ಸರ್ವ ಶಿಲ್ಪ ಮೇವ ಭವತಿ" ಎಂಬ ಶ್ಲೋಕವು 'ಬ್ರಹ್ಮನು ತನ್ನ ಮನಸ್ಸಿನಿಂದ ಮಾಡಿದಿದುದೆಲ್ಲ ಶಿಲ್ಪವೇ ಎಂದು ಉಲ್ಲೇಖಿಸುತ್ತದೆ.[೩] ಶಿಲ್ಪವೂ ಪ್ರಾರಂಭವಾದುದೇ ವಿಶ್ವದ ಸೃಷ್ಟಿಯಿಂದ ಇಂತಹ ಸೃಷ್ಠಿಯನ್ನೇ ವೇದವು ಶಿಲ್ಪ ಎಂದು ಹೇಳುತ್ತದೆ. "ಶಿಲ್ಪಂ ಜಗಜ್ಜೀವನಂ" ಎಂಬ ಉಕ್ತಿಯಂತೆ ಜಗಜ್ಜೀವನವೆಲ್ಲಾ ಶಿಲ್ಪವೇ ನಾವು ನೋಡುವ ಈ ಜಗತ್ತು ಭಗವಂತನ ಶಿಲ್ಪವಾಗಿದೆ.[೪] ಶಿಲ್ಪ ಎಂಬ ಪದವೂ

ವ್ಯಾಪಕವಾದ ವಿಸ್ತಾರವನ್ನು ಪಡೆದಿದೆ. ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿದೆ. ಪ್ರಸಿದ್ದವಾದ ಅರವತ್ನಾಲ್ಕು ಕಲೆಗಳಲ್ಲಿ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ಶಿಲ್ಪದ ಹುಟ್ಟನ್ನು ಮಾನಸಾರ ಹೀಗೆ ಹೇಳುತ್ತದೆ. ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ, ತ್ವಷ್ಟ ಮತ್ತು ಮನು ಹುಟ್ಟಿದರು. ಇವರ ನಾಲ್ಕು ಜನ ಮಕ್ಕಳು ಕ್ರಮವಾಗಿ ಸ್ಥಪತಿ, ಸೂತ್ರಗ್ರಾಹಿ, ವರ್ಧರೆ, ಮತ್ತು ತಕ್ಷಕ ಎಂಬುವರು, ಇವರಿಂದ ವಾಸ್ತುಶಿಲ್ಪ ಕಲೆ ಹಾಗೂ ಮೂರ್ತಿಶಿಲ್ಪ ಕಲೆ ಹುಟ್ಟಿತು ಎಂದು ಮಾನಸಾರ ಶಾಸ್ತ್ರ ಹೇಳುತ್ತದೆ.[೫]

ಶಿಲ್ಪ ಎನ್ನುವ ಪದ ವ್ಯಾಪಕವಾದ ಅರ್ಥವಿಸ್ತಾರವನ್ನು ಪಡೆದಿದೆ. ಪ್ರಾರಂಭದಲ್ಲಿ ಆದಿ ಮಾನವನು ನಿಸರ್ಗವನ್ನು ಮತ್ತು ಅದರ ಶಕ್ತಿಯನ್ನು ನಿರಾಕಾರದಲ್ಲಿ ಪೂಜಿಸುತ್ತಿದ್ದ. ನಂತರ ತನ್ನಲ್ಲಿರುವ ಕಲೆಯನ್ನು ಬಳಸಿ ಅದಕ್ಕೊಂದು ಆಕಾರವನ್ನು ನೀಡಿ ದೈವೀ ಸ್ವರೂಪದ ಭಾವಾರ್ಥ ಕಲ್ಪಿಸಿ ಅದನ್ನು ಪೂಜಿಸತೊಡಗಿದ. ಹೀಗೆ ಶಿಲ್ಪಕಲೆಯು ರೂಪ ತಾಳಿದೆ.[೬] ಶಿಲ್ಪಕಲೆಯು ಹಲವು ಬಗೆಯ ವಸ್ತುಗಳು, ಯಂತ್ರಗಳು, ಕಲ್ಲು, ಲೋಹ, ಮಣ್ಣು, ಉಪಕರಣ, ಕಟ್ಟಡಗಳನ್ನು ಶಿಲ್ಪ ಎನ್ನಲಾಗುತ್ತದೆ. ಕಟ್ಟಡಗಳು, ಕೋಟೆಕೊತ್ತಲಗಳು, ದೇವಾಲಯಗಳು, ವಾಸಗೃಹಗಳು, ಪಟ್ಟಣಗಳು, ಕೆರೆಕಟ್ಟೆಗಳು, ಬಾವಿಗಳು, ನಾಲೆಗಳು, ಆಭರಣಗಳು, ಸಿಂಹಾಸನಗಳು, ನೃತ್ಯ, ವಾದ್ಯಗಳಲ್ಲಿ ಮೂರ್ತಿಶಿಲ್ಪಗಳು ಅಡಕವಾಗಿವೆ.[೭] ಶಿಲ್ಪಗಳ ಉಗಮಕ್ಕೆ ಧಾರ್ಮಿಕ ನಂಬಿಕೆ ಆಚರಣೆಗಳು ಕಾರಣವಾಗಿವೆ, ಇವುಗಳ ಉಗಮ ಮತ್ತು ವಿಕಾಸಕ್ಕೆ ಧರ್ಮವೇ ಕಾರಣವಾಗಿದೆ, ಧರ್ಮದ ಅಮೂರ್ತ ಕಲ್ಪನೆಗಳಿಗೆ ಮೂರ್ತಿಶಿಲ್ಪವೂ ಸಾಕಾರವನ್ನು ಒದಗಿಸುತ್ತದೆ, ಶಿಲ್ಪಗಳ ಧಾರ್ಮಿಕ ಅವಶ್ಯಕತೆಗಳನ್ನು ಪೂರೈಸುವ ವಸ್ತುಗಳಾಗಿ ರೂಪಗೊಂಡಿವೆ. ವಿಕಾಸದತ್ತ ಸಾಗಿದಾಗ ಇವುಗಳ ಭಾವರೂಪಕ್ಕೆ ಶಿಲ್ಪವನ್ನು ಒದಗಿಸಲಾಯಿತು. ಅಮೂರ್ತವಾದ ಭಗವಂತನ ಸಾಕ್ಷಾತ್ಕಾರಕ್ಕೆ ಮೂರ್ತಿ ಒಂದು ಸಾಧನವಾಗಿದೆ, ಭಾರತದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಮೂರ್ತಿ ಪೂಜೆ ಅಸ್ತಿತ್ವದಲ್ಲಿದ್ದು, ಭಾರತೀಯ ಪರಂಪರೆಯಲ್ಲಿ ಮೂರ್ತಿಶಿಲ್ಪಗಳಿಗೆ ಮಹತ್ವವಾದ ಸ್ಥಾನವಿದೆ. ಅಷ್ಟೇ ಅಲ್ಲದೇ ಭಾರತೀಯ ಸಂಸ್ಕೃತಿಯು ಅಮೂರ್ತ ಮತ್ತು ಮೂರ್ತ, ನಿರ್ಗುಣ ಮತ್ತು ಸದ್ಗುಣ ಉಪಾಸನೆಗಳಿಗೆ ಸಮಾನವಾದ ಅವಕಾಶಗಳನ್ನು ಕಲ್ಪಿಸಿಕೊಟ್ಟಿದೆ. ಈ ಹಿನ್ನೆಲೆಯಲ್ಲಿ ಭಾರತದಾದ್ಯಂತ ಎರಡು ಪ್ರಕಾರದ ಮೂರ್ತಿಶಿಲ್ಪಗಳು ಅಪಾರವಾಗಿ ವಿಕಾಸಗೊಂಡು ಬೆಳೆದು ಬಂದಿರುವುದನ್ನು ಕಾಣುತ್ತೇವೆ.[೮] ಮೂರ್ತಿಶಿಲ್ಪಕ್ಕೆ ಪ್ರಾಚೀನವಾದ ಇತಿಹಾಸವಿದೆ. ಕ್ರಿ. ಶ. ೩೦೦೦ ವರ್ಷದ ಹಿಂದೆ ಸುಂದರವಾದ ಮೂರ್ತಿಗಳು ನಮ್ಮ ಭಾರತ ದೇಶದಲ್ಲಿ ದೊರಕಿವೆ. ಹರಪ್ಪಾ ನಾಗರೀಕತೆಗಳಲ್ಲಿ ಕಂಡು ಬಂದ ಲಿಂಗ, ಪ್ರಾಣಿಪಟ್ಟ, ವೃಷಭ, ಮತ್ತು ಇನ್ನಿತರ ಶಿಲ್ಪಗಳು ಪತ್ತೆ ಹಚ್ಚಲಾಗಿದೆ.[೯]

ಕರ್ನಾಟಕದ ಚಾರಿತ್ರಿಕ ಕಾಲ ಘಟ್ಟದಲ್ಲಿ ವಿವಿಧ ರಾಜಮನೆತನಗಳ ಆಳ್ವಿಕೆ ಮಾಡಿದ್ದಾರೆ, ಮೌರ್ಯರಿಂದ ಹಿಡಿದು ವಿಜಯನಗರೋತ್ತರ ಕಾಲದವರೆಗೆ ವಾಸ್ತುಶಿಲ್ಪ ಮತ್ತು ಶಿಲ್ಪಕ್ಕೆ ತಮ್ಮದೇ ಆದ ಕಾಣಿಕೆಗಳನ್ನು ನೀಡಿದ್ದಾರೆ. ಅಂತಹ ಸ್ಥೂಲವಾಗಿ ಗಮನಿಸುವುದಾದರೆ ಕರ್ನಾಟಕದಲ್ಲಿ ಪ್ರಥಮ ಆಳ್ವಿಕೆ ಮಾಡಿದವರು ಮೌರ್ಯರು ಎನ್ನಬಹುದು, ಇವರು ಪ್ರಮುಖವಾಗಿ ಶಿಲ್ಪಕಲೆಯನ್ನು ಆರಂಭ ಮಾಡಿದವರು ಎನ್ನಬಹುದು. ಏಕೆಂದರೆ ಇವರ ಕಾಲದಲ್ಲಿ ಅಶೋಕ ಸ್ತಂಭಗಳು, ಸ್ತೂಪಗಳು, ಹೆಚ್ಚಿನ ಸಂಖ್ಯೆಯಲ್ಲಿ ರಚನೆಯಾಗಿವೆ, ನಂತರದಲ್ಲಿ ಆಳ್ವಿಕೆ ಮಾಡಿದ ಗುಪ್ತರ ಕಾಲದಲ್ಲಿ ಶಿಲ್ಪಕಲೆಗೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರು. ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ರಚನೆಗೆ ಇವರ ಕಾಲವೂ ಸುವರ್ಣಯುಗವಾಗಿದೆ, ಶಾತವಾಹನರ ಕಾಲದಲ್ಲಿ ಶಿಲ್ಪಕಲೆಯೂ ವಿಶೇಷವಾಗಿ ಅಭಿವೃದ್ಧಿ ಹೊಂದುತ್ತಾ ಸಾಗಿತು, ಪಲ್ಲವರ ಕಾಲದಲ್ಲಿ ಶಿಲ್ಪಕಲೆಯನ್ನು ವೃದ್ಧಿಪಡಿಸಿದರು. ಇಲ್ಲಿನವರೆಗೆ ನಿಧಾನಗತಿಯಿಂದ ಸಾಗಿದ ಕರ್ನಾಟಕದ ಶಿಲ್ಪಕಲೆಯೂ ಪಲ್ಲವರ ನಂತರದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳು ಶಿಲ್ಪಕಲೆಗೆ ವಿಶೇಷವಾದ ಪ್ರಾಧಾನ್ಯತೆಯನ್ನು ನೀಡಿದರು. ಶಿಲ್ಪಕಲೆಯೂ ಕರ್ನಾಟಕದಲ್ಲಿ ಪ್ರಮುಖ ಶ್ರೇಷ್ಠಮಟ್ಟದಲ್ಲಿ ಮುಂದುವರಿಯಲು ಕಲ್ಯಾಣ ಚಾಲುಕ್ಯರು, ನೊಳಂಬರು, ರಾಷ್ಟ್ರಕೂಟರು, ಹೊಯ್ಸಳರು, ಹಾಗೂ ವಿಜಯನಗರ ಸಾಮ್ರಾಜ್ಯಗಳು ಶಿಲ್ಪಕಲೆಗೆ ಕೊಟ್ಟ ಕೊಡುಗೆ ಅಪಾರವಾದದು.

ಪ್ರಸ್ತುತ ಕರ್ನಾಟಕದಲ್ಲಿ ಮೈಲಾರ ಪರಂಪರೆಗೆ ಸಂಬಂಧಿಸಿದಂತೆ ಮೈಲಾರನ ಮೂರ್ತಿಶಿಲ್ಪಗಳು ಎಲ್ಲಿಂದ ಆರಂಭವಾದವು? ಆರಂಭವಾಗಲು ಕಾರಣವೇನು? ಮೈಲಾರನ ಮೂರ್ತಿಶಿಲ್ಪದ ಲಕ್ಷಣಗಳೇನು ಎಂಬ ಪ್ರಶ್ನೆ ಮೂಡುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಿದರೆ, ಮೈಲಾರದೇವರು ಆರಂಭವಾಗಿರುವುದೇ ಕಲ್ಯಾಣ ಚಾಲುಕ್ಯರ ಕಾಲದಿಂದ ಎಂಬುದು ಶಾಸನಗಳಿಂದ ದೃಢಪಡುತ್ತದೆ, ಕಲ್ಯಾಣ ಚಾಲುಕ್ಯ ಹಾಗೂ ನೊಳಂಬರ ಕಾಲದಲ್ಲಿ ಭೈರವನಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದ್ದರು. ಇವರ ಕಾಲಕ್ಕೆ ಸಂಬಂಧಿಸಿದಂತೆ ಅನೇಕ ಭೈರವ ಶಿಲ್ಪಗಳು ನಾಡಿನ ತುಂಬೆಲ್ಲ ಹರಡಿಕೊಂಡಿವೆ, ಭೈರವನ ೬೪ ರೂಪಗಳಿವೆ. ಅದರಲ್ಲಿ ಪ್ರಮುಖವಾದ ಎಂಟು ರೂಪಗಳೆಂದರೆ, ಅಸಿತಾಂಗ ಭೈರವ, ರುರುಭೈರವ, ಚಂಡಭೈರವ, ಕ್ರೋಧಭೈರವ, ಉನ್ಮತ್ತಭೈರವ, ಕಪಾಲಭೈರವ, ಭೀಷಣಭೈರವ, ಸಂಹಾರಭೈರವ ಹೀಗೆ ಕಂಡು ಬರುತ್ತವೆ. ಮೈಲಾರನು ಅಸಿತಾಂಗ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಅಸಿತಾಂಗ ರೂಪದಲ್ಲಿ ವಿಶಾಲಾಕ್ಷ, ಮಾರ್ತಾಂಡ, ಮೋದಕಪ್ರಿಯ, ಸ್ವಚ್ಛಂದ, ವಿಘ್ನ ಸಂತುಷ್ಟ, ಕೇಚರ, ಸಚರಾಚರ, ಇವೆಲ್ಲಿವೂ ಸ್ವರ್ಣವರ್ಣ ಆಕರ್ಷಕ ದೇಹವನ್ನು ಹೊಂದಿದ್ದು, ತ್ರಿಶೂಲ, ಡಮರು, ಪಾಶ, ಖಡ್ಗ ಆಯುಧಗಳನ್ನು ಹೊಂದಿರುತ್ತವೆ.[೧೦] ಈ ರೀತಿಯಾಗಿ ೬೪ ರೂಪಗಳನ್ನು ಹೊಂದಿರುವ ಭೈರವ ಶಿಲ್ಪಗಳ

ರಚನೆ ಹೆಚ್ಚಿನ ಸಂಖ್ಯೆಯಲ್ಲಿ ಕರ್ನಾಟಕದ ತುಂಬಾ ಕಂಡು ಬರುತ್ತವೆ, ೬೪ ಭೈರವ ರೂಪಗಳನ್ನು ಆದಿಚುಂಚನಗಿರಿಯ ಶ್ರೀ ಕಾಲಭೈರವೇಶ್ವರ ದೇವಾಲಯದಲ್ಲಿ ಕಾಣಬಹುದಾಗಿದೆ. ಕಲ್ಯಾಣ ಚಾಲುಕ್ಯ ಸಾಮಂತ ಅರಸರು ಭೈರವನ ಆರಾಧಕರು, ಇವರ ಆರಾಧ್ಯದೈವ ಹೆಂಜೇರು ಸಿದ್ದೇಶ್ವರ, ಇವರು ಆಳ್ವಿಕೆ ಮಾಡಿದ ಸ್ಥಳಗಳಲ್ಲಿ ತಮ್ಮ ಇಷ್ಟ ದೈವವಾದ ಹೆಂಜೇರು ಸಿದ್ದೇಶ್ವರನನ್ನು ಸ್ಥಾಪಿಸುತ್ತಿದ್ದರು. ಹಾಗಾಗಿ ನೊಳಂಬರ ಕಾಲಾವಧಿಯಲ್ಲಿ ಭೈರವನ ರೂಪವನ್ನು ಹೊಂದಿರುವ ಹೆಂಜೇರು ಸಿದ್ದೇಶ್ವರ ಮೂರ್ತಿ ಶಿಲ್ಪದ ಲಕ್ಷಣವೂ ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ಭೈರವನ ಪ್ರತಿರೂಪವಾಗಿರುವ ಮೈಲಾರನು ಕೆಲವೊಂದು ವ್ಯತ್ಯಾಸಗಳನ್ನು ಗಮನಿಸಬಹುದು, ಭೈರವ ಮತ್ತು ಮೈಲಾರನಿಗೆ ವಾಹನಗಳು ನಾಯಿ, ಹಾಗೂ ಕುದುರೆ. ಕರ್ನಾಟಕದ ಕೆಲವು ಭಾಗಗಳಲ್ಲಿ ಭೈರವನನ್ನೇ ಮೈಲಾರನೆಂದು ಪೂಜಿಸುವ ಪರಿಪಾಠವಿದೆ. ಕಲ್ಯಾಣ ಚಾಲುಕ್ಯರ ಸಾಮಂತ ಅರಸರು ರಾಜಧಾನಿಯನ್ನು ಕಂಪ್ಲಿಗೆ ವರ್ಗಾಹಿಸಿದಾಗ ತಮ್ಮ ದೈವವನ್ನು ತಮ್ಮ ಜೊತೆಗೆ ಕರೆದುಕೊಂಡು ಬಂದಿದ್ದಾರೆ. ಇದಕ್ಕೆ ಆಧಾರ ಎನ್ನುವಂತೆ ಪ್ರಸ್ತುತ ಕಂಪ್ಲಿಯ ಸೋಮೇಶ್ವರದ ಅಂತರಾಳದಲ್ಲಿರುವ ಭಗ್ನಗೊಂಡ ಭೈರವನ ಶಿಲ್ಪವನ್ನು ಕಾಣಬಹುದು. ಶಿಲ್ಪವೂ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿದ್ದು, ಕೆಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪವಿದೆ. ಇದೇ ಶಿಲ್ಪದ ಕಾಲಾವಧಿಯಲ್ಲಿ ತೆಕ್ಕಲಕೋಟೆಯ ಕ್ರಿ.ಶ. ೧೦೧೭ನೇ ಶತಮಾನದ ಕಲ್ಯಾಣ ಚಾಲುಕ್ಯರ ಸಾಮಂತ ಅರಸನಾದ ಇರುವ ನೊಳಂಬ ಮೈಲಾರ ದೇವಾಲಯಕ್ಕೆ ದತ್ತಿ ಬಿಡಲಾಗಿದೆ, ಹಾಗಾಗಿ ಕಲ್ಯಾಣ ಚಾಲುಕ್ಯರಿಗೂ ನೊಳಂಬರಿಗೂ, ಭೈರವ ಹಾಗೂ ಮೈಲಾರನಿಗೂ ಅವಿನಾಭಾವ ಸಂಬಂಧವಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಭೈರವನ ಆರಾಧನೆ ಹೆಚ್ಚಿನ ಸಂಖ್ಯೆಯಲ್ಲಿ ಆರಾಧನೆಗೊಂಡು ಮುಂದುವರೆದು ಇವರ ಸಾಮಂತ ಅರಸರಾದ ನೊಳಂಬರ ಕಾಲದಲ್ಲಿ ಮೈಲಾರನ ಮೂರ್ತಿಶಿಲ್ಪ ಜನ್ಮ ತಾಳಿತು ಎಂದು ನನ್ನ ಅಭಿಪ್ರಾಯವಾಗಿದೆ. ಭೈರವನಿಗೆ ಸಂಬಂಧಿಸಿದಂತೆ ಶ್ರೀಶೈಲ ಹಾಗೂ ಆದಿಚುಂಚನಗಿರಿಗಳು ಪ್ರಮುಖವಾದ ಕ್ಷೇತ್ರಗಳು. ಶ್ರೀಶೈಲದಿಂದ ಭೈರವ ಪರಂಪರೆಯ ಪ್ರಭಾವದಿಂದ ನಾಡಿನ ಉದ್ದಗಲಕ್ಕೂ ಹರಡಿರುವ ಸಾಧ್ಯತೆ ಇದೆ ಎಂದು ನನ್ನ ಊಹೆಯಾಗಿದೆ.

ಕರ್ನಾಟಕದಲ್ಲಿ ಮೈಲಾರನ ಶಿಲ್ಪಗಳು ಎಲ್ಲಾ ಪರಿಸರದಲ್ಲೂ ಕಂಡು ಬರುತ್ತವೆ. ನನ್ನ ಕ್ಷೇತ್ರಕಾರ್ಯದಲ್ಲಿ ನಾಲ್ಕು ವಿಧಗಳಲ್ಲಿ ಮೈಲಾರನ ಶಿಲ್ಪಗಳನ್ನು ಗಮನಿಸಿ ಛಾಯಾಚಿತ್ರಗಳನ್ನು ಸಂಗ್ರಹಿಸಿ ಇಟ್ಟುಕೊಂಡಿದ್ದೇನೆ. ಮೊದಲನೆಯದಾಗಿ ಭದ್ರವಾದ ಪೀಠದ ಮೇಲೆ ಮೈಲಾರನು ಕುಳಿತಿದ್ದು ಕೈಗಳಲ್ಲಿ ಕ್ರಮವಾಗಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿ ತಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪವಿರುತ್ತದೆ. ಸಾಮಾನ್ಯವಾಗಿ ಈ ಸ್ವರೂಪವನ್ನು

ಹೊಂದಿರುವ ಶಿಲ್ಪಗಳು ಮೈಲಾರ ದೇವಾಲಯದ ಗರ್ಭಗೃಹದಲ್ಲಿ ಕಾಣಬಹುದು. ನಂತರದಲ್ಲಿ ಮೈಲಾರನು ಗಂಗೆಮಾಳಮ್ಮನನ್ನು ತೊಡೆಯ ಮೇಲೆ ಕೂರಿಸಿಕೊಂಡು ಬಿಳಿಕುದುರೆಯನ್ನೇರಿ ಕತ್ತಿ ಹಿಡಿದು ವೀರಾವೇಶದಿಂದ ಹೊರಟ ಮೈಲಾರನ ಸುತ್ತಲು ಬೇಟೆ ನಾಯಿಗಳಿರುತ್ತವೆ. ಇದಕ್ಕೆ ಪುಷ್ಟಿ ನೀಡುವಂತೆ ಧ್ಯಾನ ಶ್ಲೋಕದಲ್ಲಿ ಸ್ಪಷ್ಟವಾಗಿದೆ.

ಧ್ಯಾಯೇನ್ಮಲ್ಲಾರಿದೇವಂ ಕನಕಗಿರಿನಿಭಂ ಮ್ಹಾಲಸಾಭೂಷಿತಾಂಕಂ ।

ಶ್ವೇತಾಶ್ವಂ ಖಡ್ಗ ಹಸ್ತಂ ವಿಬುಧಬುಧಗಣೈಃಸೇವ್ಯಮಾನಂ ಕೃತಾರ್ಥೈ-

ರ್ಯುಕ್ತಾಂಘ್ರಿಂ ದೈತ್ಯ ಮೂರ್ಧ್ನಿ ಡಮರು ವಿಲಸಿತಂ ನೈಶಚೂರ್ಣಾಭಿರಾಮಂ।

ನಿತ್ಯಂ ಭಕ್ತೇಷು ತುಷ್ಟಂ ಶ್ವಗಣಪರಿವೃತಂ ನಿತ್ಯಮೋಂಕಾರಗಮ್ಯಂ॥[೧೧]

ಮೂರನೇ ಬಗೆಯ ಮೈಲಾರ ಮೂರ್ತಿಶಿಲ್ಪದ ಸ್ವರೂಪ ಎಂದರೆ ಮೈಲಾರ ಕುದುರೆಯ ಮೇಲೆ ಕುಳಿತಿರುವ ಶಿಲ್ಪ. ಅಂದರೆ ಕುದುರೆಯ ಮೇಲೆ ಕುಳಿತ ಮೈಲಾರನ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿರುತ್ತಾನೆ. ಶಿಲೆಯಿಂದ ಮಾಡಿದ ಎರಡು ಶಿಲ್ಪಗಳು ನನಗೆ ದೊರೆಕಿವೆ. (ಗದಗದ ಕಾಲ ಕಾಲೇಶ್ವರ ದೇವಾಲಯ ಹಾಗೂ ತೆಕ್ಕಲಕೋಟೆ ಹರಿವಿನ ಮಲ್ಲಯ್ಯ ದೇವಾಲಯದಲ್ಲಿ) ಕ್ರಿ.ಶ. ೧೪ನೇ ಶತಮಾನದ ನಂತರ ಲೋಹದಿಂದ ಮಾಡಿದ ಹೆಚ್ಚಿನ ಶಿಲ್ಪಗಳು ಈ ಸ್ವರೂಪದಿಂದ ಕೂಡಿದೆ. ಇನ್ನೂ ಕೊನೆಯ ಬಗೆಯ ಮೈಲಾರನ ಮೂರ್ತಿಶಿಲ್ಪವೆಂದರೆ ಮೈಲಾರನ ತೊಡೆಯ ಮೇಲೆ ಗಂಗೆಮಾಳಮ್ಮ ಭದ್ರವಾದ ಪೀಠದಲ್ಲಿ ಕುಳಿತಿದ್ದು, ಕೈಗಳಲ್ಲಿ ತ್ರಿಶೂಲ, ಡಮರು. ಖಡ್ಗ, ಪಾನಪಾತ್ರೆಗಳನ್ನು ಹೊಂದಿ, ಶಿಲ್ಪದ ಕೆಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪವನ್ನು ಹೊಂದಿರುತ್ತದೆ. (ದೇವರಗುಡ್ಡದ ಉತ್ತರಬದಿಯ ಗೋಡೆಯ ಮೇಲೆ) ಇಂತಹ ಲಕ್ಷಣಗಳನ್ನು ಹೊಂದಿರುವ ಶಿಲ್ಪಗಳನ್ನು ಮೈಲಾರನ ಶಿಲ್ಪಗಳೆನ್ನಬಹುದು. ಇದುವರೆಗೂ ಮೈಲಾರನ ಶಿಲ್ಪಗಳಿಗೆ ಸಂಬಂಧಿಸಿದಂತೆ ಅಧ್ಯಯನ ವಿರಳವೆನ್ನಬಹುದು. ಹಾಗಾಗಿ ಪ್ರಸ್ತುತ ಅಧ್ಯಾಯದಲ್ಲಿ ಕ್ಷೇತ್ರಕಾರ್ಯದಲ್ಲಿ ದೊರೆಕಿದ ಮೈಲಾರ ಶಿಲ್ಪಗಳನ್ನು ಗಮನಿಸಿ ಗುರ್ತಿಸಿದ್ದೇನೆ.

ಹಾಗಾಗಿ ಈ ಶಿಲ್ಪದ ಸ್ವರೂಪವನ್ನು ಅದು ಯಾವ ಕಾಲಕ್ಕೆ ಸಂಬಂಧಿಸಿದೆ, ಹಾಗೂ ಶಿಲ್ಪಕ್ಕೆ ಸಂಬಂಧಿಸಿದಂತೆ ನನ್ನ ಅಧ್ಯಯನದ ದೃಷ್ಟಿಯಿಂದ ಕಂಡು ಬರುವ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಉದ್ದೇಶವನ್ನು ಹೊಂದಿದ್ದೇನೆ. ಈಗಾಗಲೇ ಕೆಲವು ಬಿಡಿ ಲೇಖನಗಳನ್ನು ವಿದ್ವಾಂಸರುಗಳಾದ ರಾಮಚಂದ್ರರಾವ್‌ಎಸ್.ಕೆ., ವಾಸುದೇವ ಬಡಿಗೇರ, ರಾಂ.ಚಿ.ಢೇರೆ, ಹಾಗೂ ನೇಗಿನಹಾಳ ಎಂ.ಬಿ. ಅವರುಗಳು ಮೈಲಾರ ಶಿಲ್ಪಗಳ ಬಗೆಗೆ ತಮ್ಮದೇ ಆದ ಅಭಿಪ್ರಾಯವನ್ನು ತಮ್ಮ ಕೃತಿ ಹಾಗೂ ಲೇಖನಗಳಲ್ಲಿ ವಿವರಿಸಿದ್ದಾರೆ. ಹಾಗಾಗಿ ವಿದ್ವಾಂಸರು ಬರೆದ ಆನುಷಂಗಿಕ ಆಧಾರಗಳು ಹಾಗೂ ಶಿಲ್ಪದ ಸ್ವರೂಪ ತಿಳಿಸುವ ಪ್ರಯತ್ನ ಇಲ್ಲಿನದು.

ಆದರೆ ಆಗಮಗಳು, ಪುರಾಣಗಳು, ಹಾಗೂ ಇತರ ಶಾಸ್ತ್ರಗ್ರಂಥಗಳ ಆಧಾರದಿಂದ ಶಿಲ್ಪಗಳ ಬಗೆಗೆ ತಿಳಿಸುವ ಉದ್ದೇಶ ಈ ಅಧ್ಯಾಯವೂ ಹೊಂದಿರುವುದಿಲ್ಲ.

ಕರ್ನಾಟಕದಲ್ಲಿ ಮೈಲಾರನಿಗೆ ಸಂಬಂಧಿಸಿದ ಹಲವು ಮೈಲಾರ ದೇವಾಲಯಗಳ ಗರ್ಭಗೃಹದಲ್ಲಿ, ದೇವಾಲಯದ ಹೊರಭಾಗದಲ್ಲಿ ಮೈಲಾರ ಶಿಲ್ಪಗಳನ್ನು ಕಾಣಬಹುದು. ಈ ಮೈಲಾರನ ಶಿಲ್ಪಗಳು ವಿಶೇಷತೆಯಿಂದ ಕೂಡಿದ್ದು, ಜನರ ಆರಾಧನೆಯಿಂದ ಪ್ರಾಮುಖ್ಯತೆ ಪಡೆದಿವೆ. ಹಾಗಾಗಿ ಕ್ಷೇತ್ರಕಾರ್ಯದಲ್ಲಿ ದೊರೆಕಿದ ಮೈಲಾರನಿಗೆ ಸಂಬಂಧಿಸಿದಂತೆ ಅಧ್ಯಯನ ದೃಷ್ಟಿಯಿಂದ ಮೂರು ಭಾಗಗಳಾಗಿ ಮಾಡಿಕೊಂಡಿದ್ದೇನೆ.

* ಮೈಲಾರನ ಶಿಲ್ಪಗಳು
* ಗಂಗೆಮಾಳಮ್ಮ ಶಿಲ್ಪಗಳು
* ಇತರೆ ಶಿಲ್ಪಗಳು

**೪.೧ ಮೈಲಾರನ ಶಿಲ್ಪಗಳು**

**ಮೈಲಾರ ಶಿಲ್ಪ - ಮೈಲಾರ**

ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನ ಮೈಲಾರ ಗ್ರಾಮದ ಮಧ್ಯಭಾಗದಲ್ಲಿ ಶ್ರೀ ಮೈಲಾರಲಿಂಗೇಶ್ವರ ದೇವಾಲಯವಿದೆ. ದೇವಾಲಯದ ಗರ್ಭಗೃಹದಲ್ಲಿ ಗೋಡೆಗೆ ಹೊಂದಿಕೊಂಡಂತೆ ಮಣ್ಣಿನಿಂದ ಮಾಡಿದ ಮೈಲಾರ ಶಿಲ್ಪವನ್ನು ಕಾಣಬಹುದು. ಈ ಶಿಲ್ಪವೂ ಪದ್ಮಾಸನದಲ್ಲಿದ್ದು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಮತ್ತು ಪಾನಪಾತ್ರೆಗಳಿವೆ. ತಲೆಯ ಮೇಲೆ ಸುತ್ತಿ ಕಟ್ಟಿದ ಜಟೆ, ಇಳಿಬಿದ್ದ ಗಡ್ಡ, ಎದ್ದು ತೋರುವ ಮೀಸೆಯನ್ನು ಹೊಂದಿದೆ. ಶಿಲ್ಪದ ಕೆಳಭಾಗದಲ್ಲಿ ಮಲ್ಲಾಸುರ ಮತ್ತು ಮಣಿಕಾಸುರ ಶಿರಗಳ ಉಬ್ಬು ಶಿಲ್ಪಗಳಿವೆ. ಅಕ್ಕಪಕ್ಕದಲ್ಲಿ ಚಾಮರ ಧಾರಿಯರು ಹಾಗೂ ಶಿಲ್ಪದ ಸುತ್ತಲೂ ಪ್ರಭಾವಳಿ ಮತ್ತು ಕೀರ್ತಿ ಮುಖಗಳಿವೆ. ಶಿಲ್ಪದ ವಿಶೇಷತೆಯನ್ನು ಗಮನಿಸಿದಾಗ ಮಣ್ಣಿನಿಂದ ಮಾಡಿದ ಪ್ರಾಚೀನ ಶಿಲ್ಪ ಇದಾಗಿದೆ ಎಂದು ವಿದ್ವಾಂಸರಾದ ಸೊಂತೆಮೀರ್‌ರವರು ಶಿಲ್ಪವು ಪ್ರಾಚೀನತೆಯಿಂದ ಕೂಡಿದೆ ಎಂದು ಅಭಿಪ್ರಾಯಪಡುತ್ತಾರೆ. ಶಿಲ್ಪವನ್ನು ನನ್ನ ಅಧ್ಯಯನದ ದೃಷ್ಟಿಯಿಂದ ಅಂತರ್‌ಜಾಲದಿಂದ ಸಂಗ್ರಹಿಸಿದ್ದೇನೆ ಹಾಗೂ ವಿದ್ವಾಂಸರಾದ ವಾಸುದೇವ ಬಡಿಗೇರ ಅವರು ಬರೆದ ಲೇಖನವನ್ನು ಅಧ್ಯಯನ ಮಾಡಿದ್ದೇನೆ. ಗರ್ಭಗೃಹದಲ್ಲಿರುವ ಮೈಲಾರನ ಶಿಲ್ಪವನ್ನು ಕರ್ನಾಟಕದ ವಿವಿಧ ಭಾಗಗಳಿಂದ ದೇವರನ್ನು ನೋಡಲು ಜನರು ಬರುತ್ತಾರೆ. ಸೀಮಿತ ವ್ಯಕ್ತಿಗಳಿಗೆ ಮಾತ್ರ ಗರ್ಭಗೃಹಕ್ಕೆ ಹೋಗುವ ಅವಕಾಶ ಹೊಂದಿರುವುದು ಕಂಡು ಬರುತ್ತದೆ.

**ಮೈಲಾರ ಶಿಲ್ಪ – ಮೈಲಾರ**

ಈ ಶಿಲ್ಪವೂ ಸಹ ಮೈಲಾರ ಗ್ರಾಮದಲ್ಲಿ ಕಂಡು ಬರುತ್ತದೆ. ದೇವಾಲಯದ ವಾಯುವ್ಯ ದಿಕ್ಕಿನಲ್ಲಿ ಕಂಡು ಬರುವ ಶಿಲ್ಪವಾಗಿದೆ. ಗರ್ಭಗೃಹದಲ್ಲಿರುವ ಮೈಲಾರನ ಶಿಲ್ಪಕ್ಕೆ ಈ ಶಿಲ್ಪವೂ ಹೋಲುತ್ತದೆ. ಕಲ್ಲಿನಿಂದ ಮಾಡಿದ ಶಿಲ್ಪವೂ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿದೆ. ಹಿಂಭಾಗದಲ್ಲಿ ಪ್ರಭಾವಳಿ ಸಿಂಹಮುಖವನ್ನು ಹೊಂದಿದೆ. ತಲೆಯಲ್ಲಿ ಜಟೆ, ಕೊರಳಲ್ಲಿ ಸರ, ಹಾಗೂ ಮುಖದಲ್ಲಿ ಎದ್ದು ಕಾಣುವ ಮೀಸೆಯನ್ನು ಕಾಣಬಹುದು. ಈ ಶಿಲ್ಪವೂ ಭೈರವ ಶಿಲ್ಪದಂತೆ ಕಂಡರು ಸ್ಥಳೀಯರು ಈ ಶಿಲ್ಪವನ್ನು ಮೈಲಾರನೆಂದು ಪೂಜೆ ಮಾಡುತ್ತಾರೆ. ಭೈರವನನ್ನೇ ಮೈಲಾರನೆಂದು ಪೂಜಿಸುವ ಪರಿಪಾಠ ಹಲವು ಕಡೆ ಕಾಣಬಹುದಾಗಿದೆ. ಮೈಲಾರ ದೇವಾಲಯದ ಪ್ರಾಂಗಣದಲ್ಲಿ ಎತ್ತರವಾದ ಕಟ್ಟೆಯ ಮೇಲೆ ಶಿಲ್ಪವನ್ನು ಕಾಣಬಹುದಾಗಿದೆ.

**ಮೈಲಾರ ಶಿಲ್ಪ – ದೇವರಗುಡ್ಡ**

ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲೂಕಿನ ದೇವರಗುಡ್ಡ ಗ್ರಾಮದ ಮುಖ್ಯ ಗರ್ಭಗೃಹದಲ್ಲಿ ಕಂಡುಬರುವ ಶಿಲ್ಪವಾಗಿದೆ. ಗರ್ಭಗೃಹದ ಎತ್ತರವಾದ ಪೀಠದ ಮೇಲೆ ಇರುವ ಶಿಲ್ಪವೂ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಗಳನ್ನು ಒಳಗೊಂಡಿದೆ. ಶಿಲ್ಪದ ಹಿಂಭಾಗದಲ್ಲಿ ಪ್ರಭಾವಳಿಯನ್ನು ಹೊಂದಿದ್ದು, ಸಿಂಹಮುಖವನ್ನು ಹೊಂದಿದೆ, ಶಿಲ್ಪದ ತಲೆಯಲ್ಲಿ ಕಿರೀಟ, ಉಬ್ಬಿದ ಮೀಸೆ ಹಾಗೂ ತೀಕ್ಷ್ಣ ಕಣ್ಣುಗಳನ್ನು ಹೊಂದಿದ ಶಿಲ್ಪವಾಗಿದೆ, ಶಿಲ್ಪದ ಮುಂಭಾಗದಲ್ಲಿ ಸ್ವಯಂಬು ಲಿಂಗವಿದೆ. ಇದನ್ನು ಸ್ಥಳಿಯರು ಉದ್ಭವಲಿಂಗ ಎಂದು ಕರೆಯುತ್ತಾರೆ. ಗರ್ಭಗೃಹದಲ್ಲಿರುವ ಮೈಲಾರನ ಶಿಲ್ಪವನ್ನು ಮಾಲತೇಶ ಎಂದು ಕರೆಯುತ್ತಾರೆ, ಶಿಲ್ಪದ ವಿಶೇಷತೆಯನ್ನು ಗಮನಿಸಿದಾಗ ಶಿಲ್ಪವೂ ವಿಜಯನಗರ ಕಾಲದ್ದಾಗಿದೆ.

**ಮೈಲಾರ ಶಿಲ್ಪ – ದೇವರಗುಡ್ಡ**

ಮಾಲತೇಶ ದೇವಾಲಯದ ಉತ್ತಾರಾಭಿಮುಖವಾದ ಭಿತ್ತಿಯಲ್ಲಿ ಕಂಡು ಬರುತ್ತದೆ. ದೇವಾಲಯವೂ ವಿಜಯನಗರ ಕಾಲಕ್ಕೆ ಸಂಬಂಧಿಸಿರುವುದರಿಂದ ಶಿಲ್ಪವೂ ಸಹ ಇದೇ ಕಾಲಕ್ಕೆ ಸಂಬಂಧಿಸಿರಬಹುದು. ಪ್ರಮುಖವಾಗಿ ಈ ಶಿಲ್ಪದ ಸ್ವರೂಪವನ್ನು ತಿಳಿಯುವುದಾದರೆ, ಉತ್ತಾರಾಭಿಮುಖವಾದ ಗೋಡೆಯ ಮೇಲೆ ಶಿಲ್ಪಗಳ ಸಾಲಿನ ಮಧ್ಯಭಾಗದಲ್ಲಿ ಮೈಲಾರ–ಗಂಗೆಮಾಳಮ್ಮ ಶಿಲ್ಪವಿದೆ. ಶಿಲ್ಪವೂ ಮೈಲಾರನ ತೊಡೆಯ ಮೇಲೆ ಗಂಗೆಮಾಳಮ್ಮ ಕುಳಿತಿದ್ದು, ಕೈಗಳಲ್ಲಿ ಕ್ರಮವಾಗಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಒಳಗೊಂಡಿದೆ. ಶಿಲ್ಪದ ತಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪ ಹಾಗೂ ಮಧ್ಯಭಾಗದಲ್ಲಿ ನರಬಲಿ

ಶಿಲ್ಪವನ್ನು ಕಾಣಬಹುದು. ಕುದುರೆಯ ಉಬ್ಬು ಶಿಲ್ಪವನ್ನು ಹೊಂದಿರುವುದರಿಂದ ನಿಖರವಾಗಿ ಮೈಲಾರ ಶಿಲ್ಪವೆಂದು ಸ್ಪಷ್ಟಪಡಿಸಬಹುದು. ಹಾಗೂ ನರಬಲಿ ಶಿಲ್ಪವೂ ಮಧ್ಯಭಾಗದಲ್ಲಿರುವುದರಿಂದ ಮೈಲಾರನಿಗೆ ನರಬಲಿ ಆಚರಣೆ ಇರುವ ಸಂಕೇತವಾಗಿ ಈ ಶಿಲ್ಪವನ್ನು ರಚಿಸಿರಬಹುದು ಎಂದು ನನ್ನ ಊಹೆಯಾಗಿದೆ. ಈ ಮೈಲಾರ ಶಿಲ್ಪದ ಬಲಭಾಗದಲ್ಲಿ ಕುದುರೆಯ ಮೇಲೆ ಮೈಲಾರನು ಕುಳಿತಿರುವಂತೆ ಕಂಡು ಬರುತ್ತದೆ. ಆದರೆ ಶಿಲ್ಪದ ಲಕ್ಷಣಗಳಲ್ಲಿ ಕೈಗಳಲ್ಲಿರುವ ಆಯುಧಗಳು ಅಸ್ಪಷ್ಟತೆಯಿಂದ ಕೂಡಿದ್ದು, ಮಣಿ ಮಲ್ಲರೊಂದಿಗೆ ಯುದ್ಧವನ್ನು ಮಾಡುವಂತೆ ಈ ಶಿಲ್ಪವೂ ಕಂಡು ಬರುತ್ತದೆ. ಕರ್ನಾಟಕದಲ್ಲಿ ಕಂಡು ಬರುವ ಎಲ್ಲಾ ಮೈಲಾರ ದೇವಾಲಯಗಳಲ್ಲಿ ಪ್ರಮುಖವಾಗಿರುವ ಮೈಲಾರನ ಶಿಲ್ಪ ಇದಾಗಿದೆ. ಈ ಶಿಲ್ಪವನ್ನು ಹೊರತುಪಡಿಸಿ ಬೇರೆ ಯಾವ ನೆಲೆಗಳಲ್ಲಿ ಇಂತಹ ಮೈಲಾರ ಶಿಲ್ಪ ಕಂಡು ಬಂದಿರುವುದಿಲ್ಲ.

**ಮೈಲಾರ ಶಿಲ್ಪ –ಮಲ್ಲಯ್ಯನ ಗುಡ್ಡ**

ತೆಕ್ಕಲಕೋಟೆಯ ಹರಿವಿನಮಲ್ಲಯ್ಯ ದೇವಾಲಯವೂ ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ. ಪ್ರಸ್ತುತ ಈ ಶಿಲ್ಪವೂ ದೇವಾಲಯದ ಹೊರಭಾಗದಲ್ಲಿ ಕಾಣಬಹುದು. ಮೈಲಾರನು ಕುದುರೆಯ ಮೇಲೆ ಕುಳಿತು ಕೈಯಲ್ಲಿ ಖಡ್ಗ ಹಿಡಿದು ಬರುತ್ತಿದ್ದಾನೆ. ತ್ರಿಶೂಲ, ಡಮರು, ಹಿಡಿದ ಗೊರವ ದೀವಟಿಗೆ ಹಾಗೂ ಮೃದಂಗ ಬಾರಿಸುತ್ತಿರುವ ವ್ಯಕ್ತಿಗಳು ದೇವರನ್ನು ಬರಮಾಡಿಕೊಳ್ಳುತ್ತಿದ್ದಾರೆ. ಶಿಲ್ಪವೂ ಮೈಲಾರವೆಂಬುದು ಖಚಿತವಾಗಿದೆ. ಏಕೆಂದರೆ ಪ್ರಾಚೀನವಾದ ಶಾಸನೋಕ್ತ ದೇವಾಲಯ ಇದಾಗಿದ್ದು, ಕಲ್ಯಾಣ ಚಾಲುಕ್ಯರ ಸಾಮಂತ ಅರಸರಾದ ನೊಳಂಬರ ಕಾಲಾವಧಿಯಲ್ಲಿ ಶಿಲ್ಪವೂ ರಚನೆಯಾಗಿರಬಹುದು ಎಂದು ನನ್ನ ಊಹೆಯಾಗಿದೆ. ಮೈಲಾರನ ಶಿಲ್ಪಗಳಲ್ಲಿ ಪ್ರಮುಖ ಹಾಗೂ ವಿಶೇಷವಾದ ಶಿಲ್ಪ ಇದಾಗಿದೆ. ಕರ್ನಾಟಕದಲ್ಲಿ ಮೈಲಾರನ ಎಲ್ಲಾ ಕ್ಷೇತ್ರಗಳಲ್ಲಿ ಇಂತಹ ಲಕ್ಷಣಗಳನ್ನು ಹೊಂದಿರುವ ಶಿಲ್ಪ ಕಂಡು ಬಂದಿರುವುದಿಲ್ಲ.

**ಮೈಲಾರನ ಶಿಲ್ಪ- ಮಲ್ಲಯ್ಯನ ಗುಡ್ಡ**

ತೆಕ್ಕಲಕೋಟೆ ಹರಿವಿನ ಮಲ್ಲಯ್ಯ ದೇವಾಲಯದ ಗೋಡೆಯ ಬದಿಯಲ್ಲಿರುವ ಮೈಲಾರನ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದಿದ್ದಾನೆ. ಮೈಲಾರನ ಪ್ರಾಚೀನ ಶಿಲ್ಪಗಳಲ್ಲಿ ಒಂದಾಗಿದ್ದು, ಮೈಲಾರನ ಮೂಲ ಶಿಲ್ಪವಾಗಿ ಗರ್ಭಗೃಹದಲ್ಲಿ ಪೂಜಿಸುತ್ತಿದ್ದಿರಬಹುದು. ಕಾಲ ನಂತರದಲ್ಲಿ ದೇವಾಲಯದ ಜೀರ್ಣೋದ್ಧಾರ ಸಮಯದಲ್ಲಿ ಭಗ್ನಗೊಂಡು ದೇವಾಲಯದ ಹೊರಗೆ ತಂದು ಇಡಲಾಗಿದೆ ಎಂದು ನನ್ನ ಅಭಿಪ್ರಾಯವಾಗಿದೆ.

**ಮೈಲಾರನ ಶಿಲ್ಪ - ಕಾಲಕಾಲೇಶ್ವರ ಗುಡ್ಡ**

ಗದಗ ಜಿಲ್ಲೆಯ ರೋಣ ತಾಲೂಕಿನ ಕಾಲಕಾಲೇಶ್ವರ ದೇವಾಲಯವೂ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯವಾಗಿದೆ. ದೇವಾಲಯ ಆವರಣದಲ್ಲಿ ಕಂಡು ಬರುವ ಶಿಲ್ಪ ಇದಾಗಿದೆ. ಈ ಶಿಲ್ಪವೂ ಅಸ್ಪಷ್ಟತೆಯಿಂದ ಕೂಡಿದೆ, ಆದರೂ ಸಹ ಶಿಲ್ಪವನ್ನು ಮೈಲಾರ ಶಿಲ್ಪ ಎನ್ನುವುದು ನನ್ನ ಊಹೆಯಾಗಿದೆ. ಕುದುರೆಯ ಮೇಲೆ ಕುಳಿತ ಮೈಲಾರನು ಆಯುಧಗಳನ್ನು ಹಿಡಿದಿದ್ದಾನೆ. ಕೈಗಳಲ್ಲಿ ತ್ರಿಶೂಲ, ಡಮರು ಖಡ್ಗ ಪಾನಪಾತ್ರೆ ಹಿಡಿದಿದೆ ಎಂದು ನನ್ನ ಅಭಿಪ್ರಾಯವಾಗಿದೆ. ಸ್ಪಷ್ಟವಾಗಿ ಈ ಶಿಲ್ಪವು ಕುದುರೆಯ ಮೇಲೆ ಕುಳಿತಿದೆ. ಸ್ಥಳೀಯರು ಈ ಶಿಲ್ಪದ ಮೇಲೆ ಎಣ್ಣೆ ಇನ್ನಿತರ ವಸ್ತುಗಳನ್ನು ಹಚ್ಚಿರುವುದರಿಂದ ಶಿಲ್ಪದ ಸ್ಪಷ್ಟತೆ ಗೋಚರಿಸುವುದಿಲ್ಲ. ಮೈಲಾರನ ಸ್ವರೂಪವನ್ನು ಈ ಶಿಲ್ಪವು ಹೊಂದಿದೆ ಎಂದು ನನ್ನ ಅಭಿಪ್ರಾಯವಾಗಿದೆ.

**ಮೈಲಾರನ ಶಿಲ್ಪ -ಧಾರವಾಡ**

ಧಾರವಾಡ ವಿದ್ಯಾಗಿರಿಯಲ್ಲಿರುವ ಎತ್ತರವಾದ ಬೆಟ್ಟದ ಮೇಲೆ ಮೈಲಾರನ ದೇವಾಲಯವಿದೆ. ಗರ್ಭಗೃಹದಲ್ಲಿರುವ ಮೈಲಾರನ ಶಿಲ್ಪ ಕರ್ನಾಟಕದಲ್ಲಿ ಕಂಡು ಬರುವ ಮೈಲಾರನ ಶಿಲ್ಪಗಳಲ್ಲಿ ವಿಶಿಷ್ಟವಾದದ್ದು, ಗೋಡೆಗೆ ಹೊಂದಿಕೊಂಡಂತೆ ಶಿಲೆಯಿಂದ ಇರುವ ಶಿಲ್ಪವೂ ಕ್ರಿ. ಶ. ೧೩-೧೪ನೇ ಶತಮಾನಕ್ಕೆ ಸೇರಿಸಬಹುದು, ಕಪ್ಪುಶಿಲೆಯಿಂದ ಶಿಲ್ಪವನ್ನು ರಚಿಸಲಾಗಿದೆ. ಪ್ರಮುಖವಾಗಿ ಈ ಶಿಲ್ಪದ ಲಕ್ಷಣಗಳನ್ನು ಗಮನಿಸಿದಾಗ, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿದೆ. ತಲೆಯಲ್ಲಿ ಸುತ್ತಿ ಕಟ್ಟಿದ ಜಟೆ, ಕಿರೀಟ, ಕಿರೀಟದಲ್ಲಿ ಸಿಂಹಮುಖ ಆಕರ್ಷಕ ಹೊಳಪುಳ್ಳ ಕಣ್ಣುಗಳು, ಉಬ್ಬಿನ ಮೀಸೆ, ಉದ್ದನೆಯ ಮೂಗು, ಹಾಗೂ ಕೊರಳಲ್ಲಿ ಸರವನ್ನು ಹೊಂದಿದೆ. ವಿಶೇಷವಾಗಿ ಶಿಲ್ಪದಲ್ಲಿ ಗುರ್ತಿಸುವ ಅಂಶವೆಂದರೆ ಪರಿವಾರ ದೇವತೆಗಳಾದ ಗಂಗೆ, ಗಣೇಶ, ಶಿವಲಿಂಗ, ನಂದಿ ಸೂರ್ಯ, ಚಂದ್ರ, ಕುದುರೆ ಹಾಗೂ ನಾಯಿಯ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ಶಿಲ್ಪದ ಕೆಳಭಾಗದ ಎಡದಲ್ಲಿ ಕುದುರೆ ಹಾಗೂ ಬಲಭಾಗದಲ್ಲಿ ನಾಯಿಯ ಉಬ್ಬುವಿದೆ. ಮೈಲಾರನಿಗೆ ಕುದುರೆ ಮತ್ತು ನಾಯಿ ಶಿಲ್ಪಗಳು ವಾಹನಗಳಿವೆ. ಮೈಲಾರನ ಅಪರೂಪದ ಶಿಲ್ಪಗಳಲ್ಲಿ ಒಂದಾಗಿದೆ ಎಂದು ನನ್ನ ಅಭಿಪ್ರಾಯವಾಗಿದೆ.

**ಮೈಲಾರನ ಶಿಲ್ಪ- ಕಂಪ್ಲಿ**

ಕರ್ನಾಟಕದ ಪ್ರಾಚೀನ ನೆಲೆಗಳಲ್ಲಿ ಕಂಪ್ಲಿಯ ಸೋಮೇಶ್ವರ ದೇವಾಲಯವು ಪ್ರಮುಖವಾಗಿದೆ. ನೊಳಂಬರು ರಾಜಧಾನಿಯನ್ನು ಹೆಂಜೇರಿನಿಂದ ಕಂಪ್ಲಿಗೆ ವರ್ಗಾಹಿಸಿದಾಗ ಇಷ್ಟ ದೈವವಾದ ಭೈರವ ಶಿಲ್ಪವನ್ನು ತಮ್ಮ ಜೊತೆಯಲ್ಲಿಯೇ ತಂದಿದ್ದಾರೆ. ಕಂಪ್ಲಿಯ

ಸೋಮೇಶ್ವರ ದೇವಾಲಯದ ಅಂತರಾಳದಲ್ಲಿ ಶಿಲ್ಪವಿದೆ. ಶಿಲ್ಪವೂ ಈ ಮೊದಲು ಗರ್ಭಗೃಹದಲ್ಲಿ ಪೂಜೆಗೊಳ್ಳುತ್ತಿದ್ದಿರಬಹುದು ಕಾಲ ನಂತರದಲ್ಲಿ ಅಂತರಾಳದಲ್ಲಿ ತಂದಿಡಲಾಗಿದೆ. ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಶಿಲ್ಪದ ಲಕ್ಷಣವನ್ನು ಗಮನಿಸಿದಾಗ ಭಗ್ನಗೊಂಡ ಮೈಲಾರನ ಶಿಲ್ಪವಾಗಿದೆ. ಎತ್ತರವಾದ ಪೀಠದ ಮೇಲೆ ಶಿಲ್ಪವನ್ನು ರಚಿಸಲಾಗಿದೆ. ಶಿಲ್ಪವೂ ನಾಲ್ಕು ಕೈಗಳನ್ನು ಹೊಂದಿದ್ದು ಪ್ರಸ್ತುತ ಎರಡು ಕೈಗಳು ಮಾತ್ರ ಕಾಣುತ್ತವೆ. ಕೈಗಳಲ್ಲಿ ಖಡ್ಗ, ಹಾಗೂ ಪಾನಪಾತ್ರೆಯನ್ನು ಶಿಲ್ಪದಲ್ಲಿ ಗುರ್ತಿಸಬಹುದು. ತಲೆಯಲ್ಲಿ ಪೇಟ, ದೊಡ್ಡದಾದ ಕಿವಿ, ಧ್ಯಾನಸಕ್ತದಲ್ಲಿ ಮುಚ್ಚಿದ ಕಣ್ಣು, ಕೊರಳಲ್ಲಿ ಆಭರಣಗಳ ಸರಗಳು, ಹಾಗೂ ಶಿಲ್ಪದ ತಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪವಿದೆ. ಮೈಲಾರ ಪ್ರಾಚೀನ ಶಿಲ್ಪಗಳಲ್ಲಿ ಕಂಪ್ಲಿಯ ಅಂತರಾಳದಲ್ಲಿ ಕಂಡು ಬರುವ ಮೈಲಾರನ ಶಿಲ್ಪವಾಗಿದೆ. ಇದಕ್ಕೆ ಪುಷ್ಟಿ ನೀಡುವಂತೆ, ಮೈಲಾರ ದೇವರಿಗೆ ಕುದುರೆ ಲಾಂಛನವಿರುತ್ತದೆ. ಈ ಲಾಂಛನವಿರುವ ಶಿಲಾಮೂರ್ತಿ ಎಲ್ಲಾದರೂ ಕಂಡು ಬಂದರೆ ತಿಳಿಸಿ ಎಂದು ನೇಗಿನಹಾಳ ಎಂ.ಬಿ. ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದಾಗ ವಿದ್ವಾಂಸರಾದ ಮಹದೇವ, ಸಿ. ಅವರಿಗೆ ಸೂಚನೆ ಕೊಟ್ಟಿದ್ದರು ಎಂದು ತಮ್ಮ ಸಂಪಾದನೆ ಮಾಡಿರುವ ಮೈಲಾರ (೨೦೧೨)[೧೨] ಕೃತಿಯಲ್ಲಿ ತಮ್ಮ ಅಭಿಪ್ರಾಯವನ್ನು ಹಂಚಿಕೊಂಡಿದ್ದಾರೆ. ಅದಕ್ಕಾಗಿ ಈ ಶಿಲ್ಪವೂ ಪ್ರಾಚೀನ ಮೈಲಾರ ಶಿಲ್ಪಗಳಲ್ಲಿ ಒಂದಾಗಿದೆ ಎಂದು ನನ್ನ ಅಭಿಪ್ರಾಯವಾಗಿದೆ.

**ಮೈಲಾರನ ಶಿಲ್ಪ –ಕುಬಟೂರು**

ಸೊರಬ ತಾಲೂಕಿನ ಕುಬಟೂರು ಗ್ರಾಮದ ದೇವಾಲಯದ ಗರ್ಭಗೃಹದ ಮಧ್ಯಭಾಗದಲ್ಲಿ ಎತ್ತರವಾದ ಪೀಠದ ಮೇಲೆ ಕುಳಿತಿರುವ ಮೈಲಾರನ ಶಿಲ್ಪವೂ ಕೈಗಳಲ್ಲಿ ಕ್ರಮವಾಗಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಒಳಗೊಂಡಿದೆ, ಕಲ್ಲಿನಿಂದ ಮಾಡಿದ ಈ ಶಿಲ್ಪವು ಸುತ್ತಿ ಕಟ್ಟಿದ ಜಟೆ, ಎದ್ದು ಕಾಣುವ ಕಣ್ಣು, ಉದ್ದನೆಯ ಮೂಗು, ಉಬ್ಬಿನ ಮೀಸೆ, ದೊಡ್ಡದಾದ ಕಿವಿ, ಕೊರಳಲ್ಲಿ ಸರ ಹಾಗೂ ಶಿಲ್ಪದ ಕೆಳಭಾಗದಲ್ಲಿ ಕುದುರೆಯ ಉಬ್ಬುಶಿಲ್ಪವನ್ನು ಒಳಗೊಂಡಿದೆ. ಶಿಲ್ಪದ ಕೆಳಭಾಗದಲ್ಲಿ ರುಂಡವನ್ನು ಹೊಂದಿರುವ ಉಬ್ಬು ಶಿಲ್ಪವಿದೆ. ರಾಷ್ಟ್ರಕೂಟರ ಕಾಲದಲ್ಲಿ ಮೈಲಾರ ದೇವಾಲಯವು ಕುಬಟೂರಿನಲ್ಲಿತ್ತು, ಎಂಬುದು ವಿದ್ವಾಂಸರಾದ ಶ್ರೀನಿವಾಸರಿತ್ತಿಯವರ ಅಭಿಪ್ರಾಯ. ಆದರೆ ಈ ಶಿಲ್ಪವನ್ನು ಬಿಟ್ಟು ಮೈಲಾರನಿಗೆ ಸಂಬಂಧಿಸಿದ ಅವಶೇಷಗಳು ಕುಬಟೂರಿನಲ್ಲಿ ಕಂಡು ಬರುವುದಿಲ್ಲ. ಮೈಲಾರನಿಗೆ ಸಂಬಂಧಿಸಿದ ಪ್ರಮುಖ ಶಿಲ್ಪಗಳಲ್ಲಿ ಕುಬಟೂರು ಸ್ಥಳದ ಶಿಲ್ಪ ವಿಶೇಷವಾಗಿದೆ.

**ಮೈಲಾರ ಶಿಲ್ಪ– ಬೀದರ್‌ನ ಮೈಲಾರಪುರ**

ಉತ್ತರ ಕರ್ನಾಟಕದ ತುತ್ತತುದಿಯಲ್ಲಿ ಕಂಡು ಬರುವ ಬೀದರ್ ಜಿಲ್ಲೆಯ ಭಾಲ್ಕಿ

ತಾಲೂಕಿನ ಮೈಲಾರಪುರದ ಗ್ರಾಮದಲ್ಲಿ ಮೈಲಾರ ದೇವಾಲಯವಿದೆ. ದೇವಾಲಯದ ಗರ್ಭಗೃಹದಲ್ಲಿ ಮೈಲಾರನ ಶಿಲ್ಪವಿದೆ, ಶಿಲ್ಪವು ಪದ್ಮಸನದಲ್ಲಿ ಕುಳಿತಿದ್ದು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಗಳನ್ನು ಒಳಗೊಂಡಿದೆ. ಕಪ್ಪು ಶಿಲೆಯಿಂದ ನಿರ್ಮಿತವಾದ ಶಿಲ್ಪವಾಗಿದೆ. ಎತ್ತರವಾದ ಪೀಠದ ಮೇಲೆ ಇರುವ ಶಿಲ್ಪದ ಹಿಂಭಾಗದಲ್ಲಿ ನಂದಿ ಶಿಲ್ಪವನ್ನು ಕಾಣಬಹುದು. ಶಿಲ್ಪದ ತಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪವೂ ಕಂಡು ಬರುತ್ತದೆ. ಮೈಲಾರ ಶಿಲ್ಪದ ಅಕ್ಕಪಕ್ಕದಲ್ಲಿ ಸ್ತ್ರೀಯರು ಕೈ ಮುಗಿದು ನಿಂತುಕೊಂಡಿದ್ದಾರೆ. ಶಿಲ್ಪದ ಹಿಂಬಾಗದಲ್ಲಿ ಲೋಹದಿಂದ ಮಾಡಿದ ಪ್ರಭಾವಳಿ ಇದೆ. ತಲೆಯಲ್ಲಿ ಜಟೆ, ಎದ್ದು ಕಾಣುವ ಕಣ್ಣುಗಳು ಹಾಗೂ ಕೊರಳಲ್ಲಿ ಸರಗಳನ್ನು ಪ್ರಮುಖವಾಗಿ ಕಂಡುಬರವ ಶಿಲ್ಪದ ಲಕ್ಷಣಗಳಾಗಿವೆ. ಮೈಲಾರನ ಶಿಲ್ಪದ ಮುಂಭಾಗದಲ್ಲಿ ಸ್ವಯಾಂಬು ಉದ್ಭವ ಲಿಂಗ, ಪಾದುಕೆಗಳು ಕಂಡು ಬರುತ್ತವೆ.

ಇದೇ ದೇವಾಲಯದ ಆಗ್ನೇಯ ದಿಕ್ಕಿನ ಮೂಲೆಯ ಚಿಕ್ಕ ಗುಡಿಯಲ್ಲಿ ಕುದುರೆಯ ಮೇಲೆ ಕುಳಿತ ಮೈಲಾರನ ಇನ್ನೊಂದು ಶಿಲ್ಪವೂ ಕಂಡು ಬರುತ್ತದೆ. ಶಿಲ್ಪದ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ,ಪಾನಪಾತ್ರೆಯನ್ನು ಹೊಂದಿದೆ. ಕುದುರೆ ಮೇಲೆ ಕುಳಿತ ಮೈಲಾರನ ಶಿಲ್ಪದ ಕೆಳಗೆ ನಾಯಿಯ ಉಬ್ಬು ಶಿಲ್ಪವಿದೆ. ಶಿಲ್ಪವೂ ಪ್ರಾಚೀನವೆಂಬಂತೆ ಕಂಡು ಬರುತ್ತದೆ. ತಲೆಯ ಕಿರೀಟ, ಕೊರಳಲ್ಲಿ ಸರ, ದಿಟ್ಟಿಸಿ ನೋಡುತ್ತಿರುವ ಕಣ್ಣುಗಳು ಹಾಗೂ ಕುದುರೆಯನ್ನು ಎಳೆದು ಹಿಡಿದು ಮಣಿ-ಮಲ್ಲರನ್ನು ಸಂಹಾರ ಮಾಡಲು ಯುದ್ದಕ್ಕೆ ಹೊರಟಂತೆ ಶಿಲ್ಪವನ್ನು ಖಂಡಿರಿಸಲಾಗಿದೆ. ಬೀದರ್‌ನ ಭಾಲ್ಕಿ ತಾಲೂಕಿನಲ್ಲಿ ಕಂಡು ಬರುವ ಈ ಎರಡು ಶಿಲ್ಪವೂ ಪ್ರಮುಖವಾದ ಮೈಲಾರನ ಶಿಲ್ಪಗಳಾಗಿವೆ.

**ಮೈಲಾರ ಶಿಲ್ಪ ಕಾರೀಮನೆ**

ಕರ್ನಾಟಕ ಮೈಲಾರನ ಕ್ಷೇತ್ರಗಳಲ್ಲಿ ಸವದತ್ತಿ ತಾಲೂಕಿನ ಕಾರೀಮನಿಯೂ ಒಂದು. ಮೈಲಾರನ ದೇವಾಲಯವೂ ಈ ಗ್ರಾಮದಿಂದ ೧ ಕಿ.ಮೀ. ದೂರದಲ್ಲಿ ಎತ್ತರವಾದ ಗುಡ್ಡದ ಮೇಲೆ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಕುಳಿತ ಮೈಲಾರ ಉಬ್ಬು ಶಿಲ್ಪವಿದೆ, ಈ ಶಿಲ್ಪವೂ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆ ಒಳಗೊಂಡಿದೆ. ಶಿಲ್ಪದ ತಳಭಾಗದಲ್ಲಿ ಕುದುರೆಯ ಉಬ್ಬು ಶಿಲ್ಪವಿದೆ. ಸ್ಥಳೀಯರು ಈ ಶಿಲ್ಪವನ್ನು ಮಲ್ಲಯ್ಯ ಎಂದು ಪೂಜಿಸುತ್ತಾರೆ.

ಇದೇ ದೇವಾಲಯ ಹೊರಭಾಗದ ದಕ್ಷಿಣಾಭಿಮುಖವಾಗಿರುವ ಚಿಕ್ಕ ಗುಡಿಯಲ್ಲಿ ಮೈಲಾರ ಗಂಗೆಮಾಳಮ್ಮನ ಶಿಲ್ಪವಿದೆ. ಶಿಲ್ಪವೂ ಹೆಚ್ಚು ಆಕರ್ಷಕವಾಗಿದ್ದು ಕಪ್ಪುಶಿಲೆಯಿಂದ ಶಿಲ್ಪವನ್ನು ರಚಿಸಲಾಗಿದೆ. ಮೈಲಾರ ಹಾಗೂ ಗಂಗೆಮಾಳಮ್ಮ ಕುದುರೆಯ ಮೇಲೆ ಕುಳಿತಿದ್ದು

ಮಣಿಕಾಸುರ ಮಲ್ಲಸುರರೊಂದಿಗೆ ಹೋರಾಟ ಮಾಡುವ ಶಿಲ್ಪವಾಗಿದೆ. ಮೈಲಾರನ ಕೈಯಲ್ಲಿ ಖಡ್ಗ, ಗಂಗೆ ಮಾಳಮ್ಮನ ಕೈಯಲ್ಲಿ ತ್ರಿಶೂಲವನ್ನು ಒಳಗೊಂಡಿದೆ. ಮೈಲಾರನು ಖಡ್ಗದಿಂದ ರಾಕ್ಷಸರನ್ನು ಕೊಲ್ಲುವಂತೆ ಶಿಲ್ಪವನ್ನು ಖಂಡರಿಸಲಾಗಿದೆ. ಕೆಳಭಾಗದಲ್ಲಿ ಮೈಲಾರನ ಸಂಗಾತಿ ಬೇಟೆ ನಾಯಿಯೂ ರಾಕ್ಷಸನ ಕಾಲು ಕಚ್ಚುವಂತೆ ತೋರಿಸಲಾಗಿದೆ. ಪುರಾಣ, ಕಾವ್ಯ, ಹಾಗೂ ಮೌಖಿಕ, ಆಕಾರಗಳ ಹಿನ್ನೆಲೆಯಲ್ಲಿ ಮಣಿಮಲ್ಲರನ್ನು ಕೊಲ್ಲಲು ಶಿವನು ಮಾರ್ತಾಂಡ ಭೈರವನಾದ ಬಗೆಗೆ ಈ ಶಿಲ್ಪವೂ ಕಂಡು ಬರುತ್ತದೆ. ಶಿಲೆಯಿಂದ ಮಾಡಿದ ಶಿಲ್ಪವಾಗಿದ್ದು, ಕರ್ನಾಟಕದ ಯಾವ ಪ್ರದೇಶಗಳಲ್ಲೂ ಇಂತಹ ವಿಶೇಷವಾದ ಶಿಲ್ಪ ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತಿರುವುದಿಲ್ಲ, ಹಾಗಾಗಿ ಬಹು ಅಪರೂಪವಾಗಿ ಇರುವ ಶಿಲ್ಪ ಇದಾಗಿದೆ.

ಹೀಗೆ ಶಿಲೆಯಿಂದ ಮಾಡಿದ ಶಿಲ್ಪಗಳು ಮೈಲಾರನ ಕ್ಷೇತ್ರಗಳಲ್ಲಿ ಕಂಡು ಬರುತ್ತವೆ. ಪ್ರಮುಖವಾಗಿ ಮೈಲಾರನ ಶಿಲ್ಪಗಳು ಲೋಹದಿಂದ ಮಾಡಿ ಅದನ್ನು ಗರ್ಭದಲ್ಲಿಟ್ಟು ಪೂಜಿಸುತ್ತಾರೆ. ಕೆಲವೊಮ್ಮೆ ದೇವರ ಉತ್ಸವ, ಜಾತ್ರೆ ಇನ್ನಿತರ ಸಮಯದಲ್ಲಿ ಇವುಗಳನ್ನು ಪೂಜಿಸುತ್ತಾರೆ. ಲೋಹದಿಂದ ಮಾಡಿದ ಶಿಲ್ಪಗಳು ಕುದುರೆಯ ಮೇಲೆ ಕುಳಿತ ಮೈಲಾರನು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನ ಪಾತ್ರೆಯನ್ನು ಹೊಂದಿರುತ್ತದೆ. ಈ ಶಿಲ್ಪಗಳು ದೇವಾಲಯ ಗರ್ಭಗೃಹದಲ್ಲಿ ಕಾಣಬಹುದು. ಯಾದಗಿರಿ, ಚಂದ್ರಗಿರಿ, ಹೂವಿನಹಡಗಲಿ, ಮೈಲಾರ, ದೇವರಗುಡ್ಡ, ಹಾಗೂ ಇನ್ನಿತರ ಮೈಲಾರನ ಕ್ಷೇತ್ರಗಳಲ್ಲಿ ಈ ಶಿಲ್ಪಗಳು ಕಂಡು ಬರುತ್ತವೆ. ಶಿಲ್ಪಗಳ ಪ್ರಾಚೀನತೆಯನ್ನು ಗಮನಿಸುವುದಾದರೆ ವಿಜಯನಗರ ಅರಸರ ಕಾಲಾವಧಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಲೋಹದಿಂದ ಮಾಡಿದ ಮೈಲಾರನ ಶಿಲ್ಪಗಳು ಕಂಡು ಬರುತ್ತವೆ. ಇದಕ್ಕೆ ಆಧಾರವೆಂಬಂತೆ ಹೂವಿನಹಡಗಲಿ ಮೈಲಾರ, ದೇವರಗುಡ್ಡಗಳಲ್ಲಿ ಲೋಹದಿಂದ ಮಾಡಿದ ಶಿಲ್ಪಗಳ ಪ್ರಾಚೀನತೆಯನ್ನು ಸೂಚಿಸುವ ಆಧಾರಗಳಾಗಿವೆ, ಮೈಲಾರನಿಗೆ ವಿವಿಧ ರೂಪಗಳಲ್ಲಿ ಮೈಲಾರನನ್ನು ಆರಾಧಿಸುತ್ತಾರೆ. ಮರದಿಂದ (ಕಾಷ್ಟ) ಮಾಡಿದ ಕುದುರೆ, ನಂದಿ, ಶಿಲ್ಪಗಳನ್ನು ಮೈಲಾರನ ಕ್ಷೇತ್ರಗಳಲ್ಲಿ ಕಾಣಬಹುದು, ದೇವರಗುಡ್ಡ, ಹೂವಿನಹಡಗಲಿ ಮೈಲಾರ, ಯಾದಗಿರಿ, ತೆಕ್ಕಲಕೋಟೆ, ಕಾರೀಮನಿ, ಬೀದರ್‌ನ ಮೈಲಾರಪುರ, ಚಂದ್ರಗಿರಿ ಹಾಗೂ ಇನ್ನೀತರ ಸ್ಥಳಗಳಲ್ಲಿ ಮೈಲಾರನಿಗೆ ಸಂಬಂಧಿಸಿದ ಕಟ್ಟಿಗೆಯಿಂದ (ಮರದಿಂದ) ಮಾಡಿದ ಶಿಲ್ಪಗಳು ಕಂಡು ಬರುತ್ತವೆ. ಮೈಲಾರನಿಗೆ ನಾಡಿನ ಉದ್ದಗಲಕ್ಕೂ ವಿವಿಧತೆಯಿಂದ ಪೂಜಿಸಲಾಗುತ್ತದೆ. ಶಿಲೆ, ಲೋಹ, ಮರ, ಸ್ವಯಾಂಭುಲಿಂಗ ಹೀಗೆ ಅನೇಕ ಸ್ವರೂಪಗಳನ್ನು ನೀಡಿ ಮೈಲಾರನನ್ನು ಆರಾಧಿಸುವುದು ಕಂಡು ಬರುತ್ತದೆ.

## ೪.೨ ಗಂಗೆಮಾಳಮ್ಮನ ಶಿಲ್ಪಗಳು

ಕರ್ನಾಟಕದಲ್ಲಿ ಕಂಡು ಬರುವ ಮೈಲಾರನ ಕ್ಷೇತ್ರಗಳಲ್ಲಿ ಗಂಗೆ ಮಾಳಮ್ಮ ದೇವಾಲಯಗಳು ಮೈಲಾರ ದೇವಾಲಯದ ಪಕ್ಕದಲ್ಲೇ ಕಂಡುಬರುತ್ತವೆ. ಶಿವನ ಪ್ರತಿರೂಪವಾಗಿರುವ ಮೈಲಾರನ ಹೆಂಡತಿ ಗಂಗೆಮಾಳಮ್ಮ ಅಥವಾ ಪಾರ್ವತಿ, ಪ್ರಾಚೀನತೆ ಮತ್ತು ಪ್ರಭಾವದಲ್ಲಿ ಮೈಲಾರನಿಗಿಂತ ಮಾಳಚಿಯೇ ಒಂದು ಕೈ ಮೇಲು ಎಂದು ಹೇಳಬಹುದು. ಮಾಳಚಿಯ ಮಹತ್ವ ಮತ್ತು ಪ್ರಭಾವಗಳಿಂದಲೇ ಮೈಲಾರನ ಪ್ರಭಾವ, ಪ್ರತಿಷ್ಠೆಗಳು ಬೆಳೆದವು. ಮೂಲತಃ ಮಾಳಚಿಯು (ಗಂಗೆಮಾಳಮ್ಮ) ಗ್ರಾಮ ದೇವತೆಯಾಗಿದ್ದು ಮುಂದುವರೆದು ಆದಿಶಕ್ತಿ ಸ್ವರೂಪವಾಗಿ ಕಂಡು ಬರುತ್ತಾಳೆ. ಶಿವನ ಶಕ್ತಿ ಸ್ವರೂಪರಾದ ದುರ್ಗಾ, ಭೈರವಿ, ಚಾಮುಂಡಿ, ಭವಾನಿ, ಮುಂತಾದ ದೇವತೆಗಳ ಶ್ರೇಷ್ಠ ಸ್ಥಾನವನ್ನು ಪಡೆದಿದ್ದಾಳೆ. ಕ್ರಿ.ಶ. ೧೦ ನೇ ಶತಮಾನದಲ್ಲಿ ಅನೇಕ ಶಕ್ತಿ ಪೀಠಗಳು ಪ್ರಚಾರಗೊಂಡು ಭಾರತದಲ್ಲೆ ಪ್ರಭಾವವನ್ನು ಬೀರಿದವು. ಇದರ ಪರಿಣಾಮ ಶಕ್ತಿ ಪೀಠಗಳು ತಲೆ ಎತ್ತಿದವು. ಕುಕ್ಕನೂರು, ದೇವಿಹೊಸೂರು, ಕೊಲ್ಲಾಪುರ, ತುಳಜಾಪುರ, ಸವದತ್ತಿ ಕ್ಷೇತ್ರಗಳು ಪ್ರಸಿದ್ಧ ಕ್ಷೇತ್ರಗಳಾಗಿವೆ. ಈ ದೇವತೆಗಳ ಪ್ರಚಾರ ಪ್ರಭಾವದ ಭರದಲ್ಲಿ ಚಿಕ್ಕ ಪುಟ್ಟ ಗ್ರಾಮದೇವತೆಯರು ಆದಿಶಕ್ತಿ ಸ್ಥಾನಕ್ಕೇರಿದರು.[೧೩] ಎಲ್ಲಮ್ಮ, ಚಂದಲಾಪರಮೇಶ್ವರಿ, ಮಹಾಮಾಯೆ, ಬನಶಂಕರಿ ದೇವತೆಗಳಲ್ಲಿ ಮಾಳಚಿಯೂ ಒಬ್ಬಳು. ಕುಕ್ಕನೂರು ಮಹಾಮಾಯೆ ಎಂದು ಕರೆಯುವ ಜೇಷ್ಠಾದೇವಿಯ ಪೀಠವಾದರೆ ಹಾವೇರಿ ತಾಲೂಕಿನ ದೇವಿಹೊಸೂರು ಮಾಳಚಿ ಪೀಠವಾಗಿದೆ. ಶಾಸನದ ಉಲ್ಲೇಖದಂತೆ ಮಾಳಚಿ ಪೀಠ ಯೋಗ ಪೀಠಕ್ಕಿಂತಲೂ ಹಿರಿದಾದುದು. ಹನ್ನೊಂದು ಶತಮಾನದ ಹೊತ್ತಿಗೆ ಮಾಳಚಿ(ಗಂಗೆ ಮಾಳಮ್ಮ) ಶಕ್ತಿ ಸ್ವರೂಪಳೆನಿಸಿ ದೇವತೆಗಳ ಸಾಲಿನಲ್ಲಿ ಉನ್ನತ ಸ್ಥಾನವನ್ನು ಪಡೆದಳು. ಅಲ್ಲಲ್ಲಿ ಇವಳ ಹಲವಾರು ಕ್ಷೇತ್ರಗಳು ನಿರ್ಮಿತವಾದವು. ಮೈಲಾರನ ಕ್ಷೇತ್ರಗಳಲ್ಲಿ ಭಿನ್ನ ಭಿನ್ನ ರೂಪಗಳಲ್ಲಿ ಮೈಲಾರನೊಂದಿಗೆ ಆರಾಧನೆಗೆ ಒಳಗಾಗಿದ್ದಾಳೆ. ಮಲ್ಲಾರಿ ಮಹಾತ್ಮೆಯಲ್ಲಿ ಹೇಳುವಂತೆ ಲಿಂಗ ರೂಪದಲ್ಲಿ ಉದ್ಭವಿಸಿದ್ದಾಳೆ. ಮೈಲಾರ ಹೆಂಡತಿಯಾಗಿ ಅವನೊಂದಿಗೆ ಕುದುರೆಯ ಮೇಲೆ ಕುಳಿತು ಪೂಜಿಸಲ್ಪಡುತ್ತಾಳೆ. ದೇವರಗುಡ್ಡ, ಮಣ್ಣು ಮೈಲಾರ ಕಾರೀಮನಿ, ಗುಡೂರು, ಚಂದ್ರಗಿರಿ, ಯಾದಗಿರಿಯಲ್ಲಿ ಸ್ವತಂತ್ರ ದೇವತೆಗಳಾಗಿ ಪೂಜಿಸಲ್ಪಡುತ್ತಾಳೆ. ಗಂಗೆಮಾಳಮ್ಮ ಮೂರ್ತಿ ಶಿಲ್ಪಗಳು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯೊಂದಿಗೆ ಭೈರವಿ ಸ್ವರೂಪದಲ್ಲಿ ಕಂಡು ಬರುತ್ತಾಳೆ. ಕೆಲವು ವೇಳೆ ಮೈಲಾರನೊಂದಿಗೆ ದ್ವಿಭುಜಗಳನ್ನು ಹೊಂದಿ ಕಾಣಿಸಿಕೊಳ್ಳುತ್ತಾಳೆ. ಹೀಗೆ ಹಲವಾರು ಸ್ಥಳಗಳಲ್ಲಿ ಗಂಗೆ ಮಾಳಮ್ಮ ಪೂಜಿಸಲ್ಪಡುತ್ತಾಳೆ.

ಕರ್ನಾಟಕದಲ್ಲಿ ಕಂಡು ಬರುವ ಮೈಲಾರ ದೇವಾಲಯಗಳ ಸ್ಥಳಗಳಲ್ಲಿ ಗಂಗೆಮಾಳಮ್ಮ ನೆಲೆಗೊಂಡಿದ್ದಾಳೆ. ಗಂಗೆಮಾಳಮ್ಮನಿಗೆ ದೇವಾಲಯ, ಮೂರ್ತಿಶಿಲ್ಪವೂ ಉಂಟು, ಪ್ರತ್ಯೇಕವಾಗಿ ಬಿಡಿ ಬಿಡಿಯಾದ ಮೂರ್ತಿಶಿಲ್ಪಗಳು ಗಂಗೆಮಾಳಮ್ಮನಿಗೆ ಕಾಣಸಿಗುವುದಿಲ್ಲ. ಭೈರವಿ ಸ್ವರೂಪದಿಂದ ಗಂಗೆಮಾಳಮ್ಮ ಆಸಿನ ಭಂಗಿಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹಿಡಿದು ಗರ್ಭಗೃಹದಲ್ಲಿ ನೆಲೆಗೊಂಡಿರುತ್ತಾಳೆ. ಹಾಗೂ ಮೈಲಾರ ಜೊತೆಯಲ್ಲಿ ಮಣಿ-ಮಲ್ಲರನ್ನು ಕೊಲ್ಲಲು ತ್ರಿಶೂಲವನ್ನು ಹಿಡಿದು ರಾಕ್ಷಸರನ್ನು ಕೊಲ್ಲುವಂತೆ ಶಿಲ್ಪಗಳನ್ನು ಕಾಣಬಹುದಾಗಿದೆ. ಹೀಗೆ ಗಂಗೆಮಾಳಮ್ಮನಿಗೆ ಕರ್ನಾಟಕದಲ್ಲಿ ಮೈಲಾರನ ದೇವತೆಯೊಂದಿಗೆ ಸಮೀಕರಿಸಿ ವಿಶೇಷವಾಗಿ ಆರಾಧನೆಗೆ ಒಳಗಾಗುವ ದೇವತೆ ಗಂಗೆಮಾಳಮ್ಮ ಆಗಿದ್ದಾಳೆ.

### ೪.೩. ಇತರೆ ಶಿಲ್ಪಗಳು

ಸೂರ್ಯನ ಸುತ್ತ ಸುತ್ತುವ ಗ್ರಹಗಳಂತೆ ದೇವರ ಸುತ್ತ ಆತನ ಪರಿವಾರ. ಸ್ವಭಾವತಃ ಸಂಘಜೀವಿಯಾದ ಮನುಷ್ಯ ತನ್ನ ಪರಿಸರ, ಕೌಟುಂಬಿಕ ಪರಿವಾರವನ್ನು ದೇವರಿಗೂ ಅನ್ವಯಿಸಿ ಪ್ರಾಚೀನ ಕಾಲದಿಂದಲೂ ಪೂಜಿಸುತ್ತ ಬಂದಿದ್ದಾನೆ. ಎಲ್ಲಾ ದೇವರುಗಳಂತೆ ಮೈಲಾರ ದೇವರ ಪರಿವಾರ ದೊಡ್ಡದು.[೧೪] ಮೈಲಾರನ ಪರಿವಾರವಾಗಿ ಮೈಲಾರ ದೇವಾಲಯಗಳ ಸುತ್ತಲು ಅನೇಕ ಶಿಲ್ಪಗಳು ಕಂಡುಬರುತ್ತವೆ. ಕರ್ನಾಟಕದಲ್ಲಿ ಪ್ರಸಿದ್ಧ ದೇವರುಗಳಲ್ಲಿ ಮೈಲಾರ ಒಂದು. ದೈವದ ವಿಶಿಷ್ಟತೆಯಿಂದ ನಾಡಿನ ತುಂಬೆಲ್ಲಾ ದೇವಾಲಯಗಳು, ಮೂರ್ತಿ ಶಿಲ್ಪಗಳನ್ನು ಕಾಣಬಹುದು. ಈ ದೈವವೂ ಒಂದಲ್ಲ ಒಂದು ಅವಿನಾಭಾವ ಸಂಬಂಧದ ಬೆಸುಗೆಯಿಂದ ಕೂಡಿರುತ್ತದೆ. ಮೈಲಾರ ದೈವಕ್ಕೆ ಇತರೆ ದೇವತೆಗಳ ಸಂಬಂಧ ಮುಖ್ಯವಾಗಿದೆ. ಒಂದು ದೈವವೂ ಪ್ರಸಿದ್ಧಿಗೆ ಕಾರಣ ತನ್ನ ಪರಿವಾರದಲ್ಲಿರುವ ದೇವತೆಗಳು ಕಾರಣವಾಗುತ್ತವೆ. ಹಾಗೆಯೇ ಮೈಲಾರನು ನಾಡಿನ ತುಂಬೆಲ್ಲಾ ಹರಡಿಕೊಳ್ಳಲು ಇತರ ದೇವತೆಗಳು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಾರಣವಾಗಿರುತ್ತದೆ. ಕರ್ನಾಟಕದಲ್ಲಿ ಕಂಡುಬರುವ ಮೈಲಾರನ ದೇವಾಲಯಗಳಲ್ಲಿ ಇತರೆ ಶಿಲ್ಪಗಳು ನನ್ನ ಕ್ಷೇತ್ರಕಾರ್ಯದಲ್ಲಿ ದೊರಕಿವೆ. ಈ ಶಿಲ್ಪಗಳಿಂದ ಮೈಲಾರ ಹಾಗೂ ಈ ಶಿಲ್ಪಗಳಿಗಿರುವ ಸಂಬಂಧ, ಶಿಲ್ಪಗಳ ಪ್ರಾಚೀನತೆ, ಶಿಲ್ಪಗಳ ಸ್ವರೂಪ ಹಾಗೂ ಶಿಲ್ಪಗಳ ವಿಶೇಷತೆಯನ್ನು ತಿಳಿಸುವುದು ಈ ಉಪಶೀರ್ಷಿಕೆಯೂ ಹೊಂದಿದೆ. ಮೈಲಾರ ದೇವಾಲಯಗಳಲ್ಲಿ ಕಂಡುಬರುವ ಶಿಲ್ಪಗಳನ್ನು ಕೆಳಗಿನಂತೆ ಚರ್ಚಿಸಲಾಗಿದೆ.

#### ಭೈರವ ಶಿಲ್ಪಗಳು

ಭಾರತದಲ್ಲಿ ಭೈರವನು ಪ್ರಚಲಿತವಿರುವ ನಂಬಿಕೆಯಲ್ಲಿ ಒಬ್ಬ ಗ್ರಾಮದೇವತೆ. ಭೈರವನು ಶಿವನ ಒಂದು ಅಂಶ. ಶಿವನ ಅನುಮತಿ ಇಲ್ಲದೆ ಇತರ ದೇವತೆಗಳನ್ನು ನಿಗ್ರಹಿಸಿದ

ರಾಕ್ಷಸ ಸ್ವಭಾವದ ಗುಣದವನು ಭೈರವ.[೧೫] ಕರ್ನಾಟಕದಲ್ಲಿ ಭೈರವನ ಆರಾಧನೆಯೂ ಕಾಪಾಲಿಕರಿಂದ ಬಂದಿರಬೇಕು. ಶೈವ ಧರ್ಮದ ಒಂದು ಶಾಖೆ ವಾಮಚಾರ ಪದ್ಧತಿಯೂ ಕಾಪಾಲಿಕರದ್ದು.[೧೬] ಮೈಲಾರ ಹಾಗೂ ಭೈರವನಿಗೆ ಮೂರ್ತಿ ಸ್ವರೂಪಗಳಲ್ಲಿ ಅಷ್ಟು ವ್ಯತ್ಯಾಸ ಕಂಡುಬರುವುದಿಲ್ಲ. ಕರ್ನಾಟಕದ ಕೆಲವು ಕಡೆ ಭೈರವನನ್ನೇ ಮೈಲಾರನೆಂದು ಪೂಜಿಸಲಾಗುತ್ತದೆ. ಶಿವನ ಅವತಾರವಾದ ಮಾರ್ತಂಡ ಭೈರವನೇ ಇವನೆಂದು ತಿಳಿಯಲಾಗಿದೆ. ವಿಷ್ಣು ಸಂಹರಿಸಿದ ಮಧು-ಕೈಟಭಟ್ಟರ ದೈತ್ಯರ ಅವಶೇಷಗಳಿಂದ ಹುಟ್ಟಿಕೊಂಡ ಮಣಿ-ಮಲ್ಲ ಸಹೋದರರು ವಿಷ್ಣುವಿನ ಮೇಲೆ ಸೇಡು ತೀರಿಸಿಕೊಳ್ಳಲು ಲೋಕ ಕಂಟಕರಾಗುತ್ತಾರೆ. ಕಡೆಗೆ ಶಿವನು ಮಾರ್ತಂಡ ಭೈರವನ ರೂಪ ತಾಳಿ ಮೊದಲು ಮಣಿಯನ್ನು ನಂತರ ಮಲ್ಲನನ್ನು ಕೊಂದು ಮಲ್ಲಾರಿಯಾದನಂತೆ. ಅಲ್ಲದೆ ಈ ಮಣಿಮಲ್ಲನೆಂಬ ದೈತ್ಯ ಒಬ್ಬನೆಯಾಗಿದ್ದು ಅವನಿಗೆ ಎರಡು ತಲೆಗಳಿದ್ದವೆಂದೂ ಹೇಳುವುದಿದೆ.[೧೭] ಹೀಗೆ ವಿವಿಧ ರೀತಿಯಾಗಿ ತನ್ನದೆ ಮಹತ್ವ ಹೊಂದಿದ ಭೈರವನ ಶಿಲ್ಪಗಳು ನಾಡಿನ ಉದ್ದಗಲಕ್ಕೂ ದೊರೆಯುತ್ತವೆ. ಕರ್ನಾಟಕದಲ್ಲಿ ಭೈರವ ಸ್ಥಾನವೆಂದರೆ ಆದಿಚುಂಚನಗಿರಿ ಈ ಸ್ಥಳದಲ್ಲಿ ೬೪ ಬಗೆ ಭೈರವ ಶಿಲ್ಪಗಳು ಕಂಡುಬರುತ್ತವೆ. ಶ್ರೀಶೈಲವೂ ಸಹ ಭೈರವನ ಸ್ಥಾನ ಎಂಬುದು ಹಿರಿಯ ವಿದ್ವಾಂಸರಾದ ಕಲಬುರ್ಗಿಯವರ ಅಭಿಪ್ರಾಯವಾಗಿದೆ. ಮೈಲಾರ ದೇವಾಲಯಗಳಲ್ಲಿ ಭೈರವನ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಶಿಲ್ಪಗಳು ದೇವಾಲಯ ಪ್ರಾಂಗಣದ ಪ್ರತ್ಯೇಕವಾದ ಗುಡಿಗಳಲ್ಲಿ ನೆಲೆಗೊಂಡಿರುತ್ತವೆ. ಹೆಚ್ಚಾಗಿ ದೇವರಗುಡ್ಡದ ಸ್ಥಳದಲ್ಲಿ ಭೈರವನ ಶಿಲ್ಪಗಳು ಕಂಡುಬಂದಿವೆ. ಭೈರವನ ೬೪ ರೂಪಗಳಲ್ಲಿ ಕೆಲವು ಬಗೆಯ ಭೈರವ ಶಿಲ್ಪಗಳು ದೇವರಗುಡ್ಡ ಪರಿಸರದಲ್ಲಿ ಕಂಡುಬಂದಿವೆ. ಹೆಚ್ಚಾಗಿ ಆಸಿತಾಂಗ ಭಂಗಿಯಲ್ಲಿರುವ ಭೈರವ ಶಿಲ್ಪಗಳು ಕೈಯಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿವೆ. ವಿಶೇಷವಾಗಿ ಇನ್ನೊಂದು ಭೈರವ ಶಿಲ್ಪವೂ ದೇವಾಲಯ ಆವರಣದಲ್ಲಿದೆ. ಈ ಶಿಲ್ಪವು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಹಾಗೂ ರುಂಡವನ್ನು ಹಿಡಿದಿದೆ. ರುಂಡದ ರಕ್ತಕ್ಕೆ ನಾಯಿಯೂ ಜಿಗಿಯುತ್ತಿರುವುದು ಕಂಡುಬರುತ್ತದೆ. ಮೈಲಾರ ದೇವಾಲಯಗಳ ಬಳಿ ದೊರೆತ ವಿಶೇಷ ಶಿಲ್ಪ ಇದಾಗಿದೆ. ಇದೇ ತರಹದ ಲಕ್ಷಣಗಳಿರುವ ಭೈರವನ ಶಿಲ್ಪಗಳು ದೇವಾಲಯದ ಆವರಣದಲ್ಲಿ ಕಾಣಬಹುದಾಗಿದೆ. ಹೀಗೆ ಕರ್ನಾಟಕದಲ್ಲಿ ಕಂಡುಬರುವ ಮೈಲಾರ ದೇವಾಲಯಗಳ ಸ್ಥಳಗಳಲ್ಲಿ ಭೈರವ ಶಿಲ್ಪಗಳು ಕಂಡುಬರುತ್ತವೆ. ಹೂವಿನ ಹಡಗಲಿ ಮೈಲಾರ, ದೇವರಗುಡ್ಡ, ಹೊಸದುರ್ಗದ ಮೈಲಾರಪುರಗಳಲ್ಲಿ ಭೈರವ ಶಿಲ್ಪಗಳು ಹೆಚ್ಚಾಗಿ ಆರಾಧನೆಗೆ ಒಳಗಾಗಿವೆ. ಹಾಗೆಯೇ ದಕ್ಷಿಣ ಕರ್ನಾಟಕದ ಬಹುಭಾಗಗಳಲ್ಲಿ ಭೈರವನನ್ನೇ ಮೈಲಾರನೆಂದು ಪೂಜಿಸುವ ಪರಿಪಾಠವಿದೆ. ಹೊಸದುರ್ಗದ ಮೈಲಾರಪುರ ದೇವಾಲಯ ವಿಜಯನಗರೋತ್ತರ ಕಾಲದಲ್ಲಿ

ನಿರ್ಮಾಣವಾದ ದೇವಾಲಯ. ಗರ್ಭಗೃಹದಲ್ಲಿ ಭೈರವ-ಭೈರವಿ ಶಿಲ್ಪಗಳನ್ನೇ ಮೈಲಾರ-ಮಾಳಮ್ಮ ಎಂದು ಪೂಜಿಸುವುದು ವಿಶೇಷವಾಗಿದೆ.

**ವೀರಭದ್ರ ಶಿಲ್ಪಗಳು**

ವೀರಭದ್ರ ಶಿಲ್ಪಗಳು ನಾಡಿನ ತುಂಬಾ ಹರಡಿಕೊಂಡಿವೆ ಹಾಗೆಯೇ ಪ್ರತ್ಯೇಕ ದೇವಾಲಯಗಳಿರುವುದು ಕಂಡುಬರುತ್ತವೆ. ವೀರಭದ್ರ ಹಾಗೂ ಮೈಲಾರನಿಗೆ ಕೆಲವು ವ್ಯತ್ಯಾಸಗಳಿವೆ. ಆದರೆ ನಂಬಿಕೆ ಆಚರಣೆಗಳಲ್ಲಿ ಎರಡು ದೈವಗಳಿಗೆ ಸ್ವಾಮ್ಯತೆಯನ್ನು ಕಾಣಬಹುದು. ಮೈಲಾರ ಆಚರಣೆಗಳಾದ ಶಸ್ತ್ರ ಚುಚ್ಚಿಕೊಳ್ಳುವುದು ವೀರಭದ್ರ ಪರಂಪರೆಯಲ್ಲೂ ಇದೆ. ಅದಕ್ಕಾಗಿ ಮೈಲಾರ ಹಾಗೂ ವೀರಭದ್ರ ದೈವಗಳು ಒಂದಕ್ಕೊಂದು ಸಂಬಂಧವಿದೆ. ಸಾಮಾನ್ಯವಾಗಿ ವೀರಭದ್ರ ಶಿಲ್ಪದ ಲಕ್ಷಣಗಳು ನಾಲ್ಕು ಕೈಗಳನ್ನು ಹೊಂದಿ ಖಡ್ಗ, ಬಾಣ, ಖೇಟಕ ಹಾಗೂ ಧನಸ್ಸುನ್ನು ಹಿಡಿದಿರುತ್ತದೆ. ಕಿರೀಟವನ್ನು ಹೊಂದಿ, ಕೊರಳಲ್ಲಿ ರುಂಡಮಾಲೆಯನ್ನು ಧರಿಸಿರುವನು. ಉಗ್ರಸ್ವರೂಪನಾದ ವೀರಭದ್ರನ ಶಿಲ್ಪದಲ್ಲಿ ಉಬ್ಬಿದ ಮೀಸೆ, ಕೀರ್ತಿಮುಖ ಅಲಂಕೃತ ಪ್ರಭಾವಳಿಯನ್ನು ಹೊಂದಿರುವನು.[೧೮] ಈ ರೀತಿಯ ಲಕ್ಷಣಗಳನ್ನು ಹೊಂದಿರುವ ಶಿಲ್ಪಗಳು ಹೂವಿನ ಹಡಗಲಿ ಮೈಲಾರ ಹಾಗೂ ಗುಡೂರು ಸ್ಥಳಗಳ ಕ್ಷೇತ್ರಕಾರ್ಯದಲ್ಲಿ ದೊರಕಿವೆ. ಗುಡೂರಿನಲ್ಲಿ ಗರ್ಭಗೃಹದಲ್ಲಿ ಮೈಲಾರ ಹಾಗೂ ವೀರಭದ್ರನನ್ನು ಅಕ್ಕಪಕ್ಕದಲ್ಲಿಟ್ಟು ಪೂಜಿಸುವುದು ವಿಶೇಷವಾಗಿದೆ. ವೀರಭದ್ರನು ಮೈಲಾರನೊಂದಿಗೆ ಸಮೀಕರಣಗೊಂಡು ಆರಾಧನೆಗೆ ಒಳಪಟ್ಟಿರುವ ಪ್ರಮುಖ ದೇವಾಲಯ ಇದಾಗಿದೆ. ಹೂವಿನಹಡಗಲಿಯ ದೇವಾಲಯದ ಪ್ರಾಂಗಣದಲ್ಲಿ ವೀರಭದ್ರ ಶಿಲ್ಪವೂ ವಿಶೇಷತೆ ಕೂಡಿದ್ದು ಆರಾಧನೆ ಒಳಪಟ್ಟಿದೆ.

**ತುಪ್ಪದ ಮಾಳಮ್ಮ ಶಿಲ್ಪ**

ತುಪ್ಪದ ಮಾಳಮ್ಮ ಎಂಬ ಹೆಸರಿನಿಂದ ಕರೆಯುವ ಈ ದೇವತೆಯು ಭೈರವಿಯ ಸ್ವರೂಪದವಳು. ಹೂವಿನಹಡಗಲಿ ಹಾಗೂ ದೇವರಗುಡ್ಡಗಳಲ್ಲಿ ದೇವತೆಗೆ ಪ್ರತ್ಯೇಕವಾದ ದೇವಾಲಯಗಳಿವೆ. ಶಿಲ್ಪದ ಲಕ್ಷಣಗಳನ್ನು ಗಮನಿಸಿದಾಗ ಭೈರವಿಯ ಸ್ವರೂಪವನ್ನು ಹೊಂದಿರುವಳು. ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಯನ್ನು ಹೊಂದಿರುವಳು. ದೇವತೆಯನ್ನು ತುಪ್ಪದ ಮಾಳಮ್ಮ ಎಂದು ಕರೆಯುವುದಕ್ಕೆ ಕಾರಣವೆಂದರೆ ತುಪ್ಪದಿಂದ ಈ ದೇವತೆಗೆ ಭಕ್ತರು ಅಭಿಷೇಕವನ್ನು ಮಾಡುವರು. ಮಲ್ಲಾರಿ ಮಹಾತ್ಮದಲ್ಲಿ ಇವಳನ್ನು ಘೃತಮಾರಿ ಎಂದು ಕರೆದಿದ್ದಾರೆ. ಶಿವನು ರಾಕ್ಷಸರೊಂದಿಗೆ ಯುದ್ಧಕ್ಕೆ ಹೊರಡುವ ಮುಂಚೆ ಜಡೆಯಿಂದ ಉದ್ಭವಿಸಿದಳಂತೆ. ರಾಕ್ಷಸರ ವಧೆಯಲ್ಲಿ ಇವಳ ಪಾತ್ರ ಪ್ರಮುಖವಾದುದು. ಇವಳ ಘೋರ ರೂಪವನ್ನು ಕಂಡ ಮುನಿಗಳ ಶಾಂತಿಗಾಗಿ ತುಪ್ಪದಿಂದ

ಅಭಿಷೇಕ ಮಾಡುತ್ತಾರೆ.[೧೯] ಕರ್ನಾಟಕದಲ್ಲಿ ದೇವರಗುಡ್ಡ ಹಾಗೂ ಹೂವಿನಹಡಗಲಿಯ ಮೈಲಾರಗಳನ್ನು ಹೊರತುಪಡಿಸಿ ತುಪ್ಪದ ಮಾಳಮ್ಮ ಎಂಬ ಸ್ಥಳೀಯ ಹೆಸರಿನಿಂದ ಕರೆಯುವ ದೇವತೆ ನನ್ನ ಕ್ಷೇತ್ರಕಾರ್ಯದಲ್ಲಿ ಕಂಡುಬಂದಿಲ್ಲ. ವಿಶೇಷವಾಗಿ ಆರಾಧನೆಯಿಂದ ಭಕ್ತರ ಮನಸ್ಸಿನಲ್ಲಿ ನೆಲೆವೂರಿದ ದೇವತೆಯಾಗಿದ್ದಾಳೆ.

**ಎಲ್ಲಮ್ಮ ಶಿಲ್ಪ**

ಮೈಲಾರನಿಗೂ-ಎಲ್ಲಮ್ಮದೇವಿಗೂ ವಿಶಿಷ್ಟವಾದ ಸಂಬಂಧವಿದೆ. ಮೈಲಾರ-ಎಲ್ಲಮ್ಮನ ನಂಬಿಕೆ-ಆಚರಣೆಗಳು ತೀರಾ ಸಾಮ್ಯತೆಯಿಂದ ಕೂಡಿವೆ. ಎರಡು ದೇವತೆಗಳಲ್ಲಿ ಭಂಡಾರವು ಅಗ್ರಸ್ಥಾನ ಪಡೆಯುತ್ತದೆ. ಭಂಡಾರಕ್ಕೆ ವಿಶೇಷವಾದ ಸ್ಥಾನಮಾನ ಎರಡು ದೈವಗಳ ಭಕ್ತರು ಕೊಟ್ಟಿದ್ದಾರೆ. ಎಲ್ಲಮ್ಮ ಹಾಗೂ ಮೈಲಾರ ಅಣ್ಣ ತಂಗಿಯರು ಎಂಬ ಮೌಖಿಕ ಪರಂಪರೆಯಿಂದ ತಿಳಿಯುತ್ತದೆ. ಸವದತ್ತಿಯ ಎಲ್ಲಮ್ಮ, ಚಂದ್ರಗುತ್ತಿಯ ಎಲ್ಲಮ್ಮ ಹಾಗೂ ಹೊನ್ನತ್ತಿಯ ಹೊನ್ನಮ್ಮ ಈ ಮೂರು ದೇವತೆಗಳು ಮೈಲಾರನ ತಂಗಿಯವರು ಎಂದು ಐತಿಹ್ಯಗಳಿಂದ ತಿಳಿದುಬರುತ್ತದೆ.[೨೦] ಮೈಲಾರ-ಎಲ್ಲಮ್ಮ ದೇವತೆಗಳಲ್ಲಿ ಹಲವಾರು ಸಂಬಂಧಗಳು ಸಾಮ್ಯತೆಗಳಿರುವುದನ್ನು ಗಮನಿಸಬಹುದು. ಎಲ್ಲಮ್ಮ ಭಕ್ತರಲ್ಲಿ ಜೋಗಿಗಳು ಕಂಡುಬಂದರೆ, ಮೈಲಾರನ ಭಕ್ತರಲ್ಲಿ ಗೊರವರನ್ನು ಕಾಣಬಹುದು. ಮೈಲಾರ-ಎಲ್ಲಮ್ಮ ದೇವತೆಗಳಲ್ಲಿ ದೇವದಾಸಿ ಪದ್ಧತಿ ಪ್ರಮುಖವಾದ ಅಂಶವಾಗಿದೆ. ಆದರೆ ಮೈಲಾರ ಪರಂಪರೆಯಲ್ಲಿ ಈ ಮೊದಲು ದೇವದಾಸಿ ಪದ್ಧತಿ ಇದ್ದು ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿರುವುದು ಕಾಣಬಹುದು. ಎಲ್ಲಮ್ಮ ಸಂಪ್ರದಾಯ ಹಾಗೂ ಪರಂಪರೆಯಲ್ಲಿ ದೇವದಾಸಿ ಪದ್ಧತಿಯು ಇನ್ನೂ ಜೀವಂತಿಕೆಯಿಂದ ಕೂಡಿರುವುದು ಕಂಡುಬರುತ್ತದೆ. ಆಧಾರವೆಂಬಂತೆ ಸವದತ್ತಿ ಎಲ್ಲಮ್ಮ ಜಾತ್ರೆಯಲ್ಲಿ ಅನೇಕ ದೇವದಾಸಿಯರನ್ನು ಕಾಣಬಹುದು. ಮೈಲಾರ-ಎಲ್ಲಮ್ಮ ದೇವಾಲಯಗಳ ಮುಂದೆ ಅಥವಾ ಸ್ಥಳದಿಂದ ದೂರದಲ್ಲಿ ಶಿಬಾರಗಳನ್ನು ಕಾಣಬಹುದು. ತ್ರಿಶೂಲ ಆಕಾರದ ವಸ್ತುವನ್ನು ಎಲ್ಲಮ್ಮನ ಭಕ್ತರು ಕೊರಳಿಗೆ ಕಟ್ಟಿಕೊಳ್ಳುತ್ತಾರೆ. ಮೈಲಾರನ ತಂಗಿ ಎಂದು ನಿರೂಪಿತಳಾಗಿರುವ ಎಲ್ಲಮ್ಮನ ದೇವಾಲಯಗಳು ಮೈಲಾರ ದೇವಾಲಯಗಳ ಬಳಿ ಕಂಡುಬರುವುದು ವಿರಳ. ಆದರೆ ಮೈಲಾರನ ಸ್ಥಳವಾದ ಕಾರೀಮನೆಯಲ್ಲಿ ಮೈಲಾರ ದೇವಾಲಯದ ಪಕ್ಕದಲ್ಲೇ ಎಲ್ಲಮ್ಮನ ದೇವಾಲಯವಿದೆ. ಮೂರ್ತಿ ಶಿಲ್ಪ ಲಕ್ಷಣಗಳನ್ನು ಹೊಂದಿದ ಎಲ್ಲಮ್ಮ ಮೈಲಾರ ಪಕ್ಕದಲ್ಲೇ ನೆಲೆಗೊಂಡಿದ್ದಾಳೆ. ಇದಕ್ಕೆ ಪುಷ್ಟಿ ನೀಡುವಂತೆ ಕಾರೀಮನಿ ಹಾಗೂ ಸವದತ್ತಿ ಸ್ಥಳಗಳು ಒಂದೇ ಪರಿಸರದಲ್ಲಿ ಕಂಡುಬರುತ್ತವೆ. ಎರಡು ಸ್ಥಳಗಳಿಗೆ ಭಕ್ತರು ಹೋಗಿ ಬರುವ ಪರಿಪಾಠವನ್ನು ಕಾಣಬಹುದಾಗಿದೆ.

**ನರಬಲಿ ಶಿಲ್ಪಗಳು**

ಮೈಲಾರನಿಗೂ ನರಬಲಿ ಶಿಲ್ಪಗಳಿಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ಮೈಲಾರ ಕ್ಷೇತ್ರಗಳಾದ ಕಂಪ್ಲಿ, ಹೊಸದುರ್ಗದ ಮೈಲಾರಪುರ, ಹೂವಿನಹಡಗಲಿ ಮೈಲಾರ, ತೆಕ್ಕಲಕೋಟೆ ಹಾಗೂ ದೇವರಬೆಳಕೆರೆಗಳಲ್ಲಿ ನರಬಲಿ ಶಿಲ್ಪಗಳನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಕಂಡುಬಂದಿವೆ. ಮೈಲಾರನಿಗೂ ನರಬಲಿ ಶಿಲ್ಪಗಳಿಗೂ ಸಂಬಂಧವನ್ನು ಗಮನಿಸಿದಾಗ ಮೈಲಾರನಿಗೆ ನರಬಲಿ ಆಚರಣೆಗಳನ್ನು ಮಾಡಲಾಗುತ್ತಿತ್ತು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ನರಬಲಿ ಶಿಲ್ಪಗಳು ಲಕ್ಷಣಗಳನ್ನು ತಲೆಯ ಭಾಗವನ್ನು ಮಾತ್ರ ಹೊಂದಿರುತ್ತದೆ. ಇದಕ್ಕೆ ವಿರುದ್ಧವೆಂಬಂತೆ ತೆಕ್ಕಲಕೋಟೆಯ ಹರವಿನ ಮಲ್ಲಯ್ಯ ದೇವಾಲಯದಲ್ಲಿ ತಲೆಯನ್ನು ವ್ಯಕ್ತಿಯು ಕತ್ತರಿಸಿಕೊಳ್ಳುತ್ತಿರುವ ಶಿಲ್ಪಗಳು ದೊರಕಿವೆ. ಮೈಲಾರನಿಗೆ ನರಬಲಿ ಆಚರಣೆ ಇತ್ತು ಎಂಬುದಕ್ಕೆ ಈ ಶಿಲ್ಪಗಳು ಆಕರ ಸಾಮಗ್ರಿಗಳಿವೆ. ಪ್ರಸ್ತುತ ದಿನಗಳಲ್ಲಿ ಮೈಲಾರನ ಭಕ್ತರಾದ ಕಂಚಾವೀರರು ವಿಶೇಷವಾಗಿ ಕೈ–ಕಾಲು ಪವಾಡ, ಶಸ್ತ್ರ ಪವಾಡಗಳನ್ನು ಮಾಡುತ್ತಾರೆ. ಪ್ರಾಚೀನವಾಗಿ ಮೈಲಾರನಿಗೆ ತಮ್ಮ ತಲೆಯನ್ನು ಕತ್ತರಿಸಿ ಮೈಲಾರನಿಗೆ ಅರ್ಪಿಸುತ್ತಿದ್ದರು ಎಂಬುದು ವಿದ್ವಾಂಸರಾದ ವಾಸುದೇವ ಬಡಿಗೇರ ಅವರ ಅಭಿಪ್ರಾಯವಾಗಿದೆ. ಆಂಧ್ರಪ್ರದೇಶದ ಮೀನಗುಂದಿ ಮಲ್ಲಯ್ಯನ ಜಾತ್ರೆಯಲ್ಲಿ ಬಡಿಗೆಯಿಂದ ಹೊಡೆದಾಡಿಕೊಳ್ಳುವ ಪದ್ಧತಿ ಇಂದಿಗೂ ಕಾಣಬಹುದಾಗಿದೆ.

**ವಿಷ್ಣು ಶಿಲ್ಪಗಳು**

ಶೈವ ಹಾಗೂ ವೈಷ್ಣವ ಧರ್ಮದ ಪ್ರತೀಕವಾಗಿ ಮೈಲಾರನ ದೇವಾಲಯಗಳಲ್ಲಿ ವಿಷ್ಣುವಿನ ಶಿಲ್ಪವನ್ನು ಕಾಣಬಹುದು. ಹೂವಿನಹಡಗಲಿಯ ಮೈಲಾರ, ಕಾರೀಮನಿ, ಮಂಗಸೂಳಿ ಹಾಗೂ ತೆಕ್ಕಲಕೋಟೆ ಮೈಲಾರನ ಸ್ಥಳಗಳಲ್ಲಿ ವಿಷ್ಣುವಿನ ಶಿಲ್ಪಗಳನ್ನು ಕಾಣಬಹುದು. ಸಾಮಾನ್ಯವಾಗಿ ವಿಷ್ಣುವಿನ ಶಿಲ್ಪಗಳು ಮೈಲಾರನ ನೆಲೆಗಳಲ್ಲಿ ಎತ್ತರವಾದ ಪೀಠದ ಮೇಲೆ ಧ್ಯಾನಸಕ್ತವಾಗಿ ಕುಳಿತಿರುವ ಕೈಗಳಲ್ಲಿ ಪಾಶ ಮತ್ತು ಹಲಾಯುಧ ಹಿಡಿದಿರುವ, ಆಕರ್ಷಕವಾದ ದೇಹ, ತಲೆಯಲ್ಲಿ ಕಿರೀಟ, ಶಿಲ್ಪಕ್ಕೆ ಹೊಂದಿಕೊಂಡಂತೆ ಸುತ್ತಲೂ ಅಲಂಕೃತವಾದ ಪ್ರಭಾವಳಿಯನ್ನು ವಿಷ್ಣುವಿನ ಶಿಲ್ಪ ಹೊಂದಿರುತ್ತದೆ. ಮೈಲಾರನ ಭಕ್ತರು ವಿಷ್ಣುವಿನ ಲಕ್ಷಣಗಳನ್ನು ಹೊಂದಿದ ಹೆಗ್ಗಪ್ಪನೆಂದು ಭಾವಿಸಿದ್ದಾರೆ. ಸಂಪ್ರದಾಯದಲ್ಲಿ ಹೆಗ್ಗಯ್ಯ, ಹೆಗ್ಗಪ್ಪ, ಹೆಗ್ಗಣ್ಣ, ಪರುದಾನಿ (ಪ್ರಧಾನಿ) ಎಂಬ ಹೆಸರುಗಳು ಕಂಡುಬರುತ್ತವೆ.[೨೧] ಮೈಲಾರನ ಭಕ್ತರಲ್ಲಿ ತಿರುಪತಿ ತಿಮ್ಮಪ್ಪನೇ ಎಂದು ತಿಳಿದು ವಿಷ್ಣುವನ್ನು ಪೂಜಿಸುತ್ತಾರೆ. ಈತ ಕ್ಷೇತ್ರಪಾಲಕ ಎಂಬ ನಂಬಿಕೆ ಜನರಲ್ಲಿದೆ.

**ಗಣೇಶ ಶಿಲ್ಪಗಳು**

ಮೈಲಾರನ ಪರಿವಾರ ದೇವತೆಗಳಲ್ಲಿ ಗಣೇಶನು ಪ್ರಮುಖನಾಗಿದ್ದಾನೆ. ಮೈಲಾರ ಗಂಗೆ ಮಾಳಮ್ಮನ ಮಗನೆಂದು ಭಕ್ತರ ನಂಬಿಕೆಯಾಗಿದೆ. ಕರ್ನಾಟಕದಲ್ಲಿ ಕಂಡುಬರುವ ಬಹುತೇಕ ಮೈಲಾರ ನೆಲೆಗಳಲ್ಲಿ ಗಣೇಶ ಶಿಲ್ಪಗಳು ಕಂಡುಬರುತ್ತವೆ. ದೇವರಗುಡ್ಡ, ಹೂವಿನಹಡಗಲಿ ಮೈಲಾರ, ಚಂದ್ರಗಿರಿ, ಗುಡೂರು, ಮಂಗಸೂಳಿ, ಕಾರೀಮನಿ, ಹೊಸದುರ್ಗದ ಮೈಲಾರಪುರ, ಬೀದರ್‌ನ ಮೈಲಾರಪುರ, ದೇವರಹಿಪ್ಪರಗಿ, ಮೈಲಾರ ಪಟ್ಟಣ ಹಾಗೂ ಇನ್ನಿತರ ಸ್ಥಳಗಳಲ್ಲಿ ಗಣೇಶ ಶಿಲ್ಪಗಳಿವೆ. ದೇವರಗುಡ್ಡ ಹಾಗೂ ಹೂವಿನಹಡಗಲಿಯ ಮೈಲಾರಗಳಲ್ಲಿ ಗಣೇಶನ ಚಿಕ್ಕ ಗುಡಿಗಳನ್ನು ಕಾಣಬಹುದು. ಮೈಲಾರ ದೇವಾಲಯಗಳ ಬಳಿ ಚಿಕ್ಕಯ್ಯ ಎಂದು ಕರೆಯುವ ಗಣೇಶ ಶಿಲ್ಪಗಳು ಕಂಡುಬರುತ್ತವೆ.

**ಶಿವಲಿಂಗ ಶಿಲ್ಪಗಳು**

ಶಿವನ ಪ್ರತಿರೂಪವಾಗಿರುವ ಮೈಲಾರನಿಗೆ ಶಿವಲಿಂಗಗಳು ಮೈಲಾರನ ನೆಲೆಗಳಲ್ಲಿ ಕಂಡುಬರುತ್ತವೆ. ಮೈಲಾರನ ಹಲವು ಕ್ಷೇತ್ರಗಳಲ್ಲಿ ಸ್ವಯಂಭೂ ಶಿವಲಿಂಗಗಳಿವೆ. ವಿಶಿಷ್ಟವಾದ, ವಿಶೇಷವಾದ ಶಿವಲಿಂಗಗಳನ್ನು ಮೈಲಾರ ದೇವಾಲಯಗಳ ಪರಿಸರದಲ್ಲಿ ಕಾಣಬಹುದು. ಶಿವನಿಗೆ ಹಲವು ಮಾನಷ ರೂಪಗಳಿರುವಂತೆ ನಿರಾಕಾರವಾದ ಲಿಂಗದ ಸ್ವರೂಪವಿದೆ. ಸಾಮಾನ್ಯವಾಗಿ ಲಿಂಗ ಎಂದಾಕ್ಷಣ ಎತ್ತರ ಪೀಠದ ಮೇಲೆ ಮೊಟ್ಟೆಯಾಕಾರದ ಲಿಂಗ ಎಂಬುದು ಕಣ್ಣೆದುರಿಗೆ ಬರುತ್ತದೆ. ಲಿಂಗದ ಕುರಿತು ತಕ್ಕಮಟ್ಟಿಗೆ ತಿಳಿದಿರುವವರು ಲಿಂಗ ಎಂದರೆ ಬ್ರಹ್ಮ ಭಾಗ, ವಿಷ್ಣು ಭಾಗ, ಯೋನಿ ಪೀಠ, ಮೇಲ್ಭಾಗದಲ್ಲಿ ಕಾಣುವ ಮುಖ್ಯ ಭಾಗ ರುದ್ರಭಾಗವೇ (ಪೂಜಾಭಾಗ) ಲಿಂಗ ಎಂದು ತಿಳಿದುಬರುತ್ತದೆ.[೨೨] ಗರ್ಭಗೃಹದಲ್ಲಿರುವ ಮೈಲಾರ ಶಿಲ್ಪದ ಮುಂಭಾಗದಲ್ಲಿ ಶಿವಲಿಂಗಗಳು ಕಂಡುಬರುತ್ತವೆ. ಪ್ರಮುಖವಾಗಿ ಧಾರವಾಡ, ಚಂದ್ರಗಿರಿ, ದೇವರಬೆಳಕೆರೆ, ಹೂವಿನಹಡಗಲಿ ಮೈಲಾರ, ಕಾರೀಮನಿ, ತೆಕ್ಕಲಕೋಟೆ ಸ್ಥಳಗಳಲ್ಲಿ ಶಿವಲಿಂಗಗಳನ್ನು ಕಾಣಬಹುದು. ಕೆಲವು ಕಡೆ ಶಿವಲಿಂಗವನ್ನೇ ಮೈಲಾರನೆಂದು ಪೂಜಿಸುವ ಪರಿಪಾಠ ಹಲವು ಕಡೆ ಕಂಡುಬರುತ್ತದೆ.

**ನಂದಿ ಶಿಲ್ಪಗಳು**

ಮೈಲಾರ ದೇವಾಲಯಗಳ ಗರ್ಭಗೃಹದ ಎದುರಿಗೆ ಅಥವಾ ದೇವಾಲಯದ ಹೊರಭಾಗದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಿರುತ್ತಾರೆ. ಶಿವನ ವಾಹನವಾದ ನಂದಿಯನ್ನು ಪೂಜ್ಯತಾ ದೃಷ್ಟಿಯಿಂದ ಆರಾಧನೆ ಮಾಡುತ್ತಾರೆ. ನಂದಿ ಶಿಲ್ಪಗಳು ದೇವರಗುಡ್ಡ, ಧಾರವಾಡ, ಚಂದ್ರಗಿರಿ, ದೇವರಬೆಳಕೆರೆ, ಹೂವಿನಹಡಗಲಿ ಮೈಲಾರ, ಕಂಪ್ಲಿ, ಬೀದರ್‌ನ ಮೈಲಾರಪುರ, ಹೊಸದುರ್ಗದ ಮೈಲಾರಪುರ, ಮೈಲಾರಪಟ್ಟಣ, ಗುಡೂರು ಹಾಗೂ ಮಂಗಸೂಳಿಗಳಲ್ಲಿ ನಂದಿ ಶಿಲ್ಪಗಳಿವೆ. ತೆಕ್ಕಲಕೋಟೆಯ ಹರಿವಿನ ಮಲ್ಲಯ್ಯನ ದೇವಾಲಯದಲ್ಲಿ ಕಪ್ಪು

ಶಿಲೆಯಿಂದ ಮಾಡಿದ ದೊಡ್ಡದಾದ ನಂದಿ ಶಿಲ್ಪವಿದೆ. ಈ ಶಿಲ್ಪವು ಪ್ರಾಚೀನವಾದ ನಂದಿಶಿಲ್ಪ ಎಂದು ವಿದ್ವಾಂಸರಾದ ಜಯಮ್ಮ ಕರಿಯಣ್ಣನವರ ಅಭಿಪ್ರಾಯವಾಗಿದೆ. ಹಾಗೂ ಕುಷ್ಟಗಿ ಸಮೀಪದ ಚಂದ್ರಗಿರಿಯ ಚಂದಾಲಿಂಗೇಶ್ವರನ ದೇವಾಲಯ ಮುಂಭಾಗದಲ್ಲಿ ನಂದಿಮಂಟಪವನ್ನೇ ನಿರ್ಮಿಸಿರುವುದು ವಿಶೇಷತೆಯಿಂದ ಕೂಡಿದೆ. ೬೪ ಭೈರವ ರೂಪಗಳಲ್ಲಿ ೮ ಉಪ ವಿಭಾಗಗಳಿದ್ದು, ರುರು ಭೈರವನಿಗೆ ನಂದಿಯೇ ವಾಹನವಾಗಿದೆ. ಇದಕ್ಕೆ ಪುಷ್ಟಿ ನೀಡುವಂತೆ ಬೀದರ್‌ನ ಮೈಲಾರಪುರದ ಗರ್ಭಗೃಹದ ಮೈಲಾರನಿಗೆ ನಂದಿ ಹಾಗೂ ಕುದುರೆ ಶಿಲ್ಪಗಳು ವಾಹನಗಳಾಗಿವೆ. ಹಾಗೂ ಧಾರವಾಡದ ಮೈಲಾರ ದೇವಾಲಯ ಗರ್ಭಗೃಹದ ಮೈಲಾರನ ಶಿಲ್ಪದ ಜೊತೆ ನಂದಿ ಇರುವುದು ಕಂಡುಬರುತ್ತದೆ. ಹಾಗಾಗಿ ಮೈಲಾರನಿಗೂ ನಂದಿ ಶಿಲ್ಪಕ್ಕೂ ಸಂಬಂಧವಿರುವುದು ಗೋಚರಿಸುತ್ತದೆ.

**ಕುದುರೆ ಶಿಲ್ಪಗಳು**

ಮೈಲಾರ ವಾಹನವಾದ ಕುದುರೆ ಶಿಲ್ಪಗಳು ಮೈಲಾರ ದೇವಾಲಯಗಳ ಎಲ್ಲಾ ಸ್ಥಳಗಳಲ್ಲಿ ಸಾಮಾನ್ಯವಾಗಿ ಕಾಣಬಹುದು. ಉನ್ಮತ್ತ ಭೈರವನಿಗೆ ಕುದುರೆ ವಾಹನವಾಗಿದೆ. ಹಾಗೆಯೇ ಮೈಲಾರನಿಗೆ ಭೈರವ ಎಂಟು ರೂಪಗಳಲ್ಲಿ ಉನ್ಮತ್ತ ಭೈರವನ ಸ್ಥಾನ ನೀಡಲಾಗಿದೆ. ಹೆಚ್ಚಾಗಿ ಮೈಲಾರನ ಶಿಲ್ಪದ ಕೆಳಗೆ ಕುದುರೆಯ ಶಿಲ್ಪವನ್ನು ಕಂಡುಬಂದರೆ ಮೈಲಾರ ಶಿಲ್ಪವೆಂದು ಹೇಳಬಹುದು. ಹಾಗೂ ಕುದುರೆಯ ಮೇಲೆ ಭೈರವ ಲಕ್ಷಣಗಳನ್ನು ಹೊಂದಿದ ಶಿಲ್ಪಗಳು ಸಹ ಕ್ಷೇತ್ರಕಾರ್ಯದಲ್ಲಿ ದೊರೆತಿವೆ. ಕುದುರೆಯ ಮೇಲೆ ಮೈಲಾರ ಗಂಗೆಮಾಳಮ್ಮ ಕುಳಿತಿರುವ ಶಿಲ್ಪಗಳನ್ನು ಈಗಾಗಲೇ ಚರ್ಚಿಸಲಾಗಿದೆ. ಮೈಲಾರನ ಪರಿವಾರದಲ್ಲಿ ಕುದುರೆಯು ಹೆಚ್ಚಿನ ಪ್ರಾಧಾನ್ಯತೆ ಹೊಂದಿರುವುದು ಕಂಡುಬರುತ್ತದೆ. ಕುದುರೆ ಶಿಲ್ಪಗಳು ಶಿಲೆ, ಲೋಹ ಹಾಗೂ ಮರ (ಕಾಷ್ಟ)ದಿಂದ ಮಾಡಿದ ಶಿಲ್ಪಗಳು, ದೇವರ ಹಿಪ್ಪರಗಿ, ದೇವರಬೆಳಕೆರೆ, ಚಂದ್ರಗಿರಿ, ಹೂವಿನಹಡಗಲಿ ಮೈಲಾರ, ಬೀದರ್‌ನ ಮೈಲಾರಪುರ, ಹೊಸದುರ್ಗದ ಮೈಲಾರ, ಮಂಗಸೂಳಿಗಳಲ್ಲಿ ಕಾಣಬಹುದು. ದೇವರಗುಡ್ಡದಲ್ಲಿ ಜೀವಂತ ಕುದುರೆ ಇರುವುದು ವಿಶೇಷವಾಗಿ ಕಂಡುಬರುವ ಅಂಶವಾಗಿದೆ.

**ನಾಗಶಿಲ್ಪಗಳು**

ಮೈಲಾರ ದೇವಾಲಯಗಳ ಪ್ರಾಂಗಣದಲ್ಲಿ ನಾಗಶಿಲ್ಪಗಳನ್ನು ಕಾಣಬಹುದು. ವಿಷ್ಣುವಿನ ವಾಹನವಾದ ನಾಗಶಿಲ್ಪವೂ ಆರಾಧನೆಗೆ ಒಳಗಾಗುತ್ತಿದೆ. ನಾಗಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ದೇವರಗುಡ್ಡ ಸ್ಥಳಗಳಲ್ಲಿ ಕಂಡುಬಂದಿವೆ. ಹಾಗೂ ಚಂದ್ರಗಿರಿ, ದೇವರಬೆಳಕೆರೆ, ದೇವರಹಿಪ್ಪರಗಿ, ಹೂವಿನಹಡಗಲಿ ಮೈಲಾರ, ಮಂಗಸೂಳಿ ಸ್ಥಳಗಳಲ್ಲಿ ಸಹ ನಾಗಶಿಲ್ಪಗಳನ್ನು ಕಾಣಬಹುದು.

**ಶಿಬಾರಗಳು**

ಮೈಲಾರ ನೆಲೆಯನ್ನು ಗುರ್ತಿಸುವಾಗ ಪ್ರಮುಖ ಆಕರವಾಗಿ ತೋರುವುದೇ ಶಿಬಾರ, ಮೈಲಾರನ ದೇವಾಲಯವಿದೆ ಎಂದರೆ ಶಿಬಾರವೂ ಇದ್ದೇ ಇರುತ್ತದೆ. ಎತ್ತರವಾದ ಕಟ್ಟೆಯ ಮೇಲೆ 'ಯು' ಆಕಾರದ ಶಿಬಾರವನ್ನು ನಿಲ್ಲಿಸಲಾಗಿದ್ದು ಅದರ ಮೇಲೆ ತ್ರಿಶೂಲವನ್ನು ನೆಟ್ಟಿರುತ್ತಾರೆ. ಕರ್ನಾಟಕದ ಕೆಲವು ಕಡೆ ಮೈಲಾರನ ದೇವಾಲಯಗಳಲ್ಲಿ ಶಿಬಾರವನ್ನು ಸ್ಥಾಪಿಸಿ ಮೈಲಾರನೆಂದು ಪೂಜಿಸುವ ಪರಿಪಾಠವನ್ನು ಕಾಣಬಹುದು. ಶಿಬಾರಕ್ಕೂ ಎಲ್ಲಮ್ಮದೇವಿಗೂ ಸಂಬಂಧವಿದೆ. ಎಲ್ಲಮ್ಮ ದೇವಾಲಯದ ಮುಂಭಾಗವು ಸಹ ಶಿಬಾರವಿರುವುದನ್ನು ಗಮನಿಸಬಹುದು. ದೇವದಾಸಿಯರು ಶಿಬಾರ ಆಕಾರದ ತಾಳಿಯನ್ನು ಕೊರಳಿಗೆ ಕಟ್ಟಿಕೊಳ್ಳುತ್ತಾರೆ. ಕರ್ನಾಟಕದ ಎಲ್ಲಾ ಮೈಲಾರನ ದೇವಾಲಯದ ಎದುರಿಗೆ ಶಿಬಾರಗಳು ಕಂಡುಬರುತ್ತವೆ.

**ಆಂಜನೇಯ ಶಿಲ್ಪ**

ಪ್ರತಿ ಗ್ರಾಮಕ್ಕೂ ಆಂಜನೇಯ ಶಿಲ್ಪಗಳು ಇರುವಂತೆ, ಮೈಲಾರ ದೇವಾಲಯಗಳಲ್ಲಿ ಕ್ಷೇತ್ರಪಾಲಕನಾಗಿ ಆಂಜನೇಯ ಶಿಲ್ಪಗಳು ಕಂಡುಬರುತ್ತವೆ. ಆಂಜನೇಯ ಶಿಲ್ಪಗಳು ದೇವರಗುಡ್ಡ, ಚಂದ್ರಗಿರಿ, ದೇವರಬೆಳಕೆರೆ, ಹೂವಿನಹಡಗಲಿ ಮೈಲಾರ ಹಾಗೂ ಮಂಗಸೂಳಿಗಳಲ್ಲಿ ದೇವಾಲಯದ ಪ್ರಾಂಗಣದಲ್ಲಿ ಶಿಲ್ಪಗಳು ಕಂಡುಬರುತ್ತವೆ. ಯಾವುದೇ ಒಂದು ಗ್ರಾಮದ ಅಥವಾ ಮೈಲಾರನ ನೆಲೆಗಳಲ್ಲಿ ಊರ ಹೊರಭಾಗದಲ್ಲಿ ಗ್ರಾಮದ ರಕ್ಷಕನಾಗಿ ಆಂಜನೇಯ ಶಿಲ್ಪಗಳಿರುತ್ತವೆ ಎಂಬುದು ಜನರ ನಂಬಿಕೆಯಾಗಿದೆ.

**ಸಪ್ತಮಾತೃಕೆ ಶಿಲ್ಪ**

ಕರ್ನಾಟಕದ ಕೆಲವು ಮೈಲಾರ ದೇವಾಲಯಗಳಲ್ಲಿ ಸಪ್ತಮಾತೃಕೆ ಶಿಲ್ಪಗಳನ್ನು ಕಾಣಬಹುದಾಗಿದೆ. ಮೈಲಾರನಿಗೂ ಸಪ್ತಮಾತೃಕೆ ಶಿಲ್ಪಗಳಿಗೂ ಸಂಬಂಧವಿರುವುದನ್ನು ಗಮನಿಸಬಹುದಾಗಿದೆ. ಸಪ್ತಮಾತೃಕೆಯಲ್ಲಿ ವೈಷ್ಣವಿ, ಮಹೇಶ್ವರಿ, ಇಂದ್ರಾಣೆ, ಬ್ರಹ್ಮಿಣಿ, ಕೌಮರಿ, ವರಹಿ ಹಾಗೂ ಚಾಮುಂಡಿ[೨೩] ಹೀಗೆ ಸಪ್ತಮಾತೃಕೆ ಶಿಲ್ಪಗಳ ಹೆಸರುಗಳನ್ನು ಕಾಣಬಹುದು. ಹಾಗೂ ದೇವರಹಿಪ್ಪರಗಿ, ಮೈಲಾರಪಟ್ಟಣ ಹಾಗೂ ಚಂದ್ರಗಿರಿಗಳಲ್ಲಿ ಸಪ್ತಮಾತೃಕೆ ಶಿಲ್ಪಗಳನ್ನು ಕಾಣಬಹುದು.

ಹೀಗೆ ಕರ್ನಾಟಕದಲ್ಲಿ ಕಂಡುಬರುವ ಮೈಲಾರ ದೇವಾಲಯಗಳಲ್ಲಿ ಮೈಲಾರನ ಶಿಲ್ಪಗಳು, ಗಂಗೆಮಾಳಮ್ಮನ ಶಿಲ್ಪಗಳು ಹಾಗೂ ಇತರೆ ಶಿಲ್ಪಗಳು ಕಂಡುಬರುತ್ತವೆ. ಈ ಶಿಲ್ಪಗಳ ಹಿನ್ನೆಲೆಯಲ್ಲಿ ಮೈಲಾರ ಹಾಗೂ ಶಿಲ್ಪಗಳಿರುವ ಸಂಬಂಧ, ಶಿಲ್ಪಗಳ ಲಕ್ಷಣ, ಶಿಲ್ಪಗಳ ವಿಶೇಷತೆಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ನನ್ನ ಕ್ಷೇತ್ರಕಾರ್ಯದಲ್ಲಿ

ದೊರಕಿದ ಶಿಲ್ಪಗಳ ಹಿನ್ನೆಲೆಯಲ್ಲಿ ಹಾಗೂ ಈಗಾಗಲೇ ಆಗಿರುವ ಕೆಲವು ಅಧ್ಯಯನಗಳ ಬಳಕೆಯಿಂದ ಈ ಅಧ್ಯಾಯವನ್ನು ಚರ್ಚಿಸಿರುತ್ತೇನೆ. ಚಾರಿತ್ರಿಕವಾದ ಮಹತ್ವವನ್ನು ಪಡೆದ ಈ ಶಿಲ್ಪಗಳು ಮೈಲಾರ ಪ್ರಾಚೀನತೆ ಚಾರಿತ್ರಿಕ ಅಂಶಗಳನ್ನು ತಿಳಿಸುವಲ್ಲಿ ನೆರವಿಗೆ ಬರುತ್ತವೆ ಎಂದು ನನ್ನ ಅಭಿಪ್ರಾಯವಾಗಿದೆ.

**ಕೊನೆ ಟಿಪ್ಪಣಿಗಳು**

೧. ಮೈಸೂರು ನಾಗರಾಜ ಶರ್ಮ. ೨೦೧೦, ಹೊಯ್ಸಳ ಶಿಲ್ಪದಲ್ಲಿ ಶಿವ, ಪು.೧

೨. ಮೆಣಸಗಿ ಹೇಮಾವತಿ ಶಿವಾನಂದ. ೨೦೧೬, ಹಂಪಿ ಪರಿಸರದ ಶೈವ ಶಿಲ್ಪಗಳು, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪು.೨

೩. ರಾಮಚಂದ್ರರಾವ್ ಸಾ.ಕೃ., ೧೯೮೦, ಸಂಪ್ರದಾಯ ಶಿಲ್ಪಕಲೆ, ತಿಪ್ಪೇಸ್ವಾಮಿ ಪಿ.ಆರ್ (ಸಂ) ಶಿಲ್ಪಕಲಾ ಪ್ರಪಂಚ, ಪು.೩೫

೪. ಮುತ್ತಾಚಾರ್ಯ ಟಿ.ವಿ., ೧೯೮೭, ಭಾರತೀಯ ಶಿಲ್ಪ ಶಾಸ್ತ್ರಸಾರ ಭಾಗ-೧, ಪು.೧

೫. ತಿಪ್ಪೇರುದ್ರಸ್ವಾಮಿ ಹೆಚ್., ೨೦೧೫, ಕನ್ನಡ ಸಂಸ್ಕೃತಿ ಸಮೀಕ್ಷೆ, ಪು.೫೨೩

೬. ಅಶ್ವಿನಿ ಬಸಪ್ಪ ಕರೀಕಟ್ಟಿ. ೨೦೧೬, ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ (ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ) (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು.೧೨೩

೭. ನಾಗರಾಜಪ್ಪ ಎಸ್., ೨೦೧೬, ಹಂಪಿ ಪರಿಸರದ ಲೌಕಿಕ ಶಿಲ್ಪಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು.೧

೮. ಅಶ್ವಿನಿ ಬಸಪ್ಪ ಕರೀಕಟ್ಟಿ. ಪೂರ್ವೋಕ್ತ, ಪು.೧೨೪

೯. ತಿಪ್ಪೇರುದ್ರಸ್ವಾಮಿ ಹೆಚ್., ಪೂರ್ವೋಕ್ತ, ಪು.೬೨೬

೧೦. ಮೆಣಸಗಿ ಹೇಮಾವತಿ ಶಿವಾನಂದ. ಪೂರ್ವೋಕ್ತ, ಪು.೨೦೫

೧೧. ರಾಮಚಂದ್ರರಾವ್ ಎಸ್.ಕೆ., ೨೦೧೨, ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪು.೨೦೭

೧೨. ಮಹದೇವ ಸಿ., ೨೦೧೨, ಪ್ರಸ್ತಾವನೆ, ಮಹದೇವ ಸಿ. (ಸಂ), ಮೈಲಾರ ಪು.೯-೧೦

೧೩. ಶ್ರೀನಿವಾಸ್ ರಿತ್ತಿ. ೧೯೭೦, ಮೈಲಾರ ದೇವರು, ಪು.ಸಂ. ೩೦

೧೪. ಸೋಮಶೇಖರ್ ಇಮ್ರಾಪುರ (ಸಂ). ೧೯೯೪, ಜಾನಪದ ಸಾಹಿತ್ಯ ದರ್ಶನ ೧೩, ಬಸವಲಿಂಗ ಸೊಪ್ಪಿನಮಠ (ಲೇ), ಮೈಲಾರಲಿಂಗ ಪರಿವಾರ ದೇವತೆಗಳು, ಪು.೨೧

೧೫. ಚಂದ್ರಶೇಖರ ಕಂಬಾರ (ಸಂ). ೧೯೮೫, ಜಾನಪದ ವಿಶ್ವಕೋಶ, ಪು.೧೫೧೬

೧೬. ಚಿದಾನಂದ ಮೂರ್ತಿ ಎಂ., ೧೯೯೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೫೧

೧೭. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೨೦೭

೧೮. ಮೆಣಸಗಿ ಹೇಮಾವತಿ ಶಿವಾನಂದ. ಪೂರ್ವೋಕ್ತ, ಪು.೧೯೩

೧೯. ನೇಗಿನಹಾಳ ಎಂ.ಬಿ., ೧೯೯೯, ನೇಗಿನಹಾಳ ಪ್ರಬಂಧಗಳು, ಪು.ಸಂ. ೧೧೩–೧೧೪

೨೦. ಅದೇ, ಪು.೧೪೯

೨೧. ಅದೇ, ಪು.೧೧೬

೨೨. ಮೆಣಸಗಿ ಹೇಮಾವತಿ ಶಿವಾನಂದ. ಪೂರ್ವೋಕ್ತ, ಪು.೧೨೪, ೧೨೫

೨೩. ಅಂತರಜಾಲದಿಂದ ಪಡೆದ ಮಾಹಿತಿ ದಿನಾಂಕ ೧೫.೦೮.೨೦೧೮



# ಅಧ್ಯಾಯ: ಐದು

## ನಂಬಿಕೆ-ಆಚರಣೆಗಳು

ನಂಬಿಕೆ-ಆಚರಣೆಗಳು ಮಾನವನ ಬದುಕಿನ ಪ್ರಮುಖವಾದ ಕ್ರಿಯಾ ವಿಧಾನಗಳು. ಸೂಕ್ಷ್ಮವಾಗಿ ಗಮನಿಸಿದಾಗ ನಂಬಿಕೆ ಆಚರಣೆಯ ವ್ಯತ್ಯಾಸವನ್ನು ಗಮನಿಸಬಹುದು. ಬಹುತೇಕವಾಗಿ ಧಾರ್ಮಿಕವಾದ, ದೈವಿಕವಾದ ನಂಬಿಕೆಯಿಂದ ರೂಪಗೊಂಡಿರುತ್ತವೆ. ನಂಬಿಕೆ-ಆಚರಣೆಗಳು ನಿರ್ದಿಷ್ಟವಾದ ಫಲಾಪೇಕ್ಷೆ ಇರುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ನಿರ್ದಿಷ್ಟವಾದ ವಿನ್ಯಾಸವಿದ್ದು ಸಂಪ್ರದಾಯಗಳಿಂದ ಸ್ಪಷ್ಟವಾಗಿ ಗೋಚರಿಸುತ್ತವೆ.[೧]

ಯಾವುದೇ ಜನಾಂಗದ ಸಾಂಸ್ಕೃತಿಕವಾದ ಬೆಳವಣಿಗೆಯನ್ನು ಗುರುತಿಸಲು ಸಿಗುವ ಮಹತ್ವಪೂರ್ಣವಾದ ಆಕಾರ ಸಾಮಗ್ರಿಗಳೆಂದರೆ ನಂಬಿಕೆ-ಆಚರಣೆಗಳು.[೨] ನಂಬಿಕೆ-ಆಚರಣೆಗಳು ಮಾನವನ ಬದುಕಿನ ಪ್ರತೀಕಗಳು, ಪ್ರತಿಬಿಂಬಗಳು, ಪ್ರತಿಮೆಗಳು ಇವು ಬದುಕಿನ ಕ್ರಿಯೆಗಳ ಸಾಂಕೇತಿಕ ರೂಪಗಳು, ಅನುಸರಣದ ಆಯಾಮಗಳು. ಮಾನವನ ಬದುಕಿನ ಅಥವಾ ಪ್ರಕೃತಿ ಬದುಕಿನ ಛಾಯಾ-ವರ್ತಿಗಳೇ ಆಚರಣೆಗಳು.[೩] ಒಬ್ಬ ವ್ಯಕ್ತಿಯ ಅಥವಾ ಒಂದು ಸಮುದಾಯ ಬೇಡಿಕೆಗಳ ಸಫಲತೆಗಾಗಿ ನಂಬಿಕೆ ಆಚರಣೆಗಳು ಹುಟ್ಟುತ್ತವೆ. ಪ್ರಕೃತಿ ಹಾಗೂ ಮಾನವನಿಗೆ ನಿಕಟವಾದ ಸಂಬಂಧವಿದ್ದು, ಮನಸ್ಸುಗಳ ಬದಲಾವಣೆಗಳು ಆಚರಣೆಗಳು, ನೇರ ಸಂಬಂಧವಿದೆ. ಸಸ್ಯ, ಪ್ರಾಣಿ, ದೇವರುಗಳು ಆಚರಣೆಯ ಹುಟ್ಟಿಗೆ ದಾರಿಮಾಡಿಕೊಟ್ಟಿವೆ.[೪]

ಮಾನವ ಸಂಘಜೀವಿ ತನ್ನ ಕೆಲಸಗಳನ್ನು ಏಕಾಂಗಿಯಾಗಿ ಮಾಡಲಾರ. ತನ್ನ ಸಮುದಾಯ, ಜನಾಂಗ, ಕುಟುಂಬದಲ್ಲಿ ನಂಬಿಕೆ ಆಚರಣೆಗಳನ್ನು ಮಾಡುತ್ತಾನೆ. ದಿನನಿತ್ಯದ ಬದುಕಿಗೆ ಘಟನಾವಳಿಗಳಿಗೆ ದೈವವೇ ಕಾರಣವೆಂದು ನಂಬಿರುತ್ತಾನೆ. ಇದಕ್ಕಾಗಿ ದೈವಕ್ಕೆ ಶ್ರದ್ಧಾಭಕ್ತಿಯಿಂದ ನಡೆದುಕೊಂಡು ನಂಬಿಕೆ-ಆಚರಣೆಗಳನ್ನು ದಿನ, ವಾರ, ಅಮವಾಸ್ಯೆ, ಹುಣ್ಣಿಮೆ ಹಾಗೂ ಹಬ್ಬ-ಹರಿದಿನಗಳಲ್ಲಿ ಮಾಡುತ್ತಾ ಮಾನಸಿಕವಾಗಿ ಶಾಂತಿಯನ್ನು ಪಡೆಯುತ್ತಾನೆ.

ಮಾನವನು ಪ್ರಕೃತಿಯ ಮಧ್ಯೆ ಹಲವಾರು ಶಕ್ತಿಗಳನ್ನು ನಂಬಿದ್ದು, ಪೂಜಿಸಲು ಪ್ರಾರಂಭಿಸಿ ಅವುಗಳನ್ನು ಒಲಿಸಿಕೊಳ್ಳಲು ಪ್ರಾರಂಭಿಸಿದ. ಜೊತೆಗೆ ಅವುಗಳ ವಿರುದ್ಧವಾಗಿ ದೆವ್ವಗಳ ಅಥವಾ ಭೀತಿಗಳ ಭಯವೋ ಅಧಿಕವಾಗಿ ಕಂಡುಕೊಂಡನು. ತಾನು ಮಾನಸಿಕವಾಗಿ ಸದೃಢನಾಗಲು ಹಾಗೂ ಶಾಂತಿಯನ್ನು ಪಡೆಯಲು ನಂಬಿಕೆ-ಆಚರಣೆಗಳನ್ನು ರೂಢಿಸಿಕೊಂಡನು. ಪ್ರಪಂಚವು ವಿಶಾಲವಾಗಿದ್ದು, ಆಗದವಾದದ್ದು, ಮಾನವನ ಜೀವನದ ಸಕಲ ಮುಖಗಳಲ್ಲಿಯೂ ಇದರ ಇರುವಿಕೆ ಕಂಡುಬರುತ್ತದೆ. ಮಾನವನ ಬದುಕಿಗೂ ಹಾಗೂ ನಂಬಿಕೆ ಆಚರಣೆಗಳಿಗೂ ಅವಿನಾಭಾವ ಸಂಬಂಧವಿದೆ. ಅಲ್ಲದೆ ಪ್ರತಿಯೊಬ್ಬ ಮಾನವರಲ್ಲೂ ಹಾಸು ಹೊಕ್ಕಾಗಿ ಸೇರಿಕೊಂಡಿದೆ.[೫]

ಪ್ರತಿಯೊಂದು ಸಮಾಜವೂ ಅನಾದಿಕಾಲದಿಂದ ತನ್ನದೇ ಆದ ನಂಬಿಕೆ-ಆಚರಣೆಗಳನ್ನು ಇಟ್ಟುಕೊಂಡು ಬಂದಿವೆ. ಕಾಲ, ದೇಶ, ಸ್ಥಳಗಳಿಗೆ ಅನುಗುಣವಾಗಿ ಬದಲಾವಣೆಗೊಳಿಸುತ್ತ ಸಾಗುತ್ತಿವೆ. ನಂಬಿಕೆ-ಆಚರಣೆಗಳು ಜನರ ಜೀವನ ವಿಧಾನಗಳನ್ನು ನೇರವಾಗಿ ಚಿತ್ರಿಸುತ್ತವೆ. ಹಾಗಾಗಿ ಮಾನವನಿಗೆ ನಂಬಿಕೆ-ಆಚರಣೆಗಳಿಗೂ ನಿಕಟವಾದ ಸಂಬಂಧವಿದೆ. ಮಾನವನ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಅಂದರೆ ಜಾತಿ, ವೃತ್ತಿ, ಅಂತಸ್ತು ಭೇದವಿಲ್ಲದೆ ಎಲ್ಲ ಜನಸಮುದಾಯಗಳಲ್ಲೂ ನಂಬಿಕೆ ಆಚರಣೆಗಳು ಇಂದಿಗೂ ನಡೆದುಕೊಂಡು ಬಂದಿವೆ.[೬]

ನಂಬಿಕೆ-ಆಚರಣೆಗಳು ಒಂದು ರೀತಿಯಲ್ಲಿ ಸೂಚನೆ, ನಿಯಮ, ನಿಷೇಧ, ನಿರ್ದೇಶನ, ಆಗ್ರಹ, ಆದೇಶ, ಹಾಗೂ ಆಜ್ಞೆಗಳ ರೂಪದ ಒಂದು ಹೇಳಿಕೆಯಾಗಿದೆ.[೭] ನಂಬಿಕೆ-ಆಚರಣೆಗಳು ಕಿವಿಯಿಂದ-ಕಿವಿಗೆ, ಬಾಯಿಂದ-ಬಾಯಿಗೆ, ಹೇಳಿದ ಜನಪದರು ಅವುಗಳನ್ನು ಕಣ್ಣಾರೆ ಕಂಡು ಸುಖದ ಆಸೆ ತಾಳಿಯೂ, ಮನಸ್ಸಿನ ಸಮಾಧಾನಕ್ಕೊ ಅನುಸರಿಸಿದರು.

ಈ ರೀತಿಯಾಗಿ ಮಾನವನು ಪ್ರಾಚೀನ ಕಾಲದಿಂದಲೂ ತನ್ನ ನಂಬಿಕೆ-ಆಚರಣೆಗಳನ್ನು ಮುಂದುವರಿಸಿಕೊಂಡು ಬಂದಿದ್ದಾನೆ. ಇಂತಹ ನಂಬಿಕೆ ಆಚರಣೆಗಳು ಕಾಲದಿಂದ ಕಾಲಕ್ಕೆ, ಸಮಾಜದಿಂದ ಸಮಾಜಕ್ಕೆ, ತನ್ನದೆ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

ಪ್ರಸ್ತುತ ಅಧ್ಯಯನವು ಮೈಲಾರನ ನಂಬಿಕೆ-ಆಚರಣೆಗೆ ಸಂಬಂಧಿಸಿದಾಗಿದೆ. ಅನಾದಿ ಕಾಲದ. ಮಾನವನ ಜೀವನ ವಿಧಾನದಿಂದ ಹಿಡಿದು ಆಧುನಿಕ ಮಾನವನ ಜೀವನ ವಿಧಾನದ ರೀತಿಯಲ್ಲಿ ಮೈಲಾರನು ಒಂದಲ್ಲ ಒಂದು ರೀತಿಯಲ್ಲಿ ನಂಬಿಕೆ-ಆಚರಣೆಯ ಪ್ರಬಲ ಹಿಡಿತವನ್ನು ಹೊಂದಿ ನೆಲೆಗೊಂಡಿದ್ದಾನೆ. ಕರ್ನಾಟಕದ ಬಹುಭಾಗದಲ್ಲಿ ಮೈಲಾರನ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ನಂಬಿಕೆ-ಆಚರಣೆಗಳು ವಿವಿಧತೆಯಿಂದ ಕೂಡಿದೆ. ಶಿವನ ಪ್ರತಿರೂಪವಾಗಿರುವ ಮೈಲಾರನು ಎಲ್ಲಾ ಜನಸಮುದಾಯಗಳಲ್ಲಿ ಆರಾಧನೆಗೆ ಒಳಪಟ್ಟಿದ್ದಾನೆ. ಹಾಗಾಗಿ ಇವರು ಮಾಡುವ ನಂಬಿಕೆ ಆಚರಣೆಗಳು, ಕರ್ನಾಟಕದ ತುಂಬಾ ಕಂಡುಬರುತ್ತವೆ.

ಪ್ರಮುಖವಾಗಿ ಹೂವಿನಹಡಗಲಿಯ ಮೈಲಾರ, ದೇವರಗುಡ್ಡದ ಮಾಲತೇಶ, ತೆಕ್ಕಲಕೋಟೆಯ ಹರಿವಿನ ಮಲ್ಲಯ್ಯ, ಯಾದಗಿರಿಯ ಮೈಲಾರ, ದೇವರಹಿಪ್ಪರಗಿ ಮಲ್ಲಯ್ಯ, ಕಾರಿಮನಿಯ ಮೈಲಾರ, ಧಾರವಾಡದ ಮೈಲಾರ, ಮಂಗಸೂಳಿಯ ಮಲ್ಲಯ್ಯ, ಹನುಮಸಾಗರದ ಚಂದಾಲಿಂಗೇಶ್ವರ, ಗುಡೂರ ಮೈಲಾರ, ಹೊಸದುರ್ಗದ ಮೈಲಾರ, ನಾಗಮಂಗಲದ ಮೈಲಾರ, ಹೀಗೆ ಇನ್ನು ಅನೇಕ ಸ್ಥಳಗಳಲ್ಲಿ ಮೈಲಾರನಿಗೆ ಸಂಬಂಧಿಸಿದ ಎಲ್ಲಾ ನಂಬಿಕೆ–ಆಚರಣೆಗಳನ್ನು ಒಟ್ಟಾಗಿ ಒಂದೆಡೆ ತರುವುದು ಈ ಅಧ್ಯಾಯದ ಪ್ರಮುಖ ಉದ್ದೇಶವಾಗಿದೆ. ಕರ್ನಾಟಕದಲ್ಲಿ ಕಂಡುಬರುವ ಮೈಲಾರನ ಅನೇಕ ನೆಲೆಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಅಲ್ಲಿ ಗಮನಿಸಿದ ನಂಬಿಕೆ ಆಚರಣೆಗಳನ್ನು ಹಾಗೂ ಈಗಾಗಲೇ ಆಗಿರುವ ಅಧ್ಯಯನಗಳ ವಿಮರ್ಶೆಯನ್ನು ಮಾಡುವ ಉದ್ದೇಶ ಹೊಂದಿದ್ದೇನೆ.

ಮೈಲಾರನಿಗೆ ಸಂಬಂಧಿಸಿದಂತೆ ಕರ್ನಾಟಕದ ಬಹುಭಾಗಗಳಲ್ಲಿ ಮೈಲಾರ ದೇವಾಲಯಗಳಿವೆ. ಈ ದೇವಾಲಯಗಳಲ್ಲಿ ನಿತ್ಯಪೂಜೆ ನಡೆಯುತ್ತದೆ. ವಿಶೇಷ ದಿನಗಳಾದ ಅಮವಾಸ್ಯೆ–ಹುಣ್ಣಿಮೆಗಳಲ್ಲಿ, ಜಾತ್ರೆ–ಉತ್ಸವಗಳು ನಡೆಯುತ್ತವೆ. ಇಂತಹ ಸಂದರ್ಭದಲ್ಲಿ ಅಲ್ಲಿ ನಡೆಯುವ ನಂಬಿಕೆ–ಆಚರಣೆಗಳನ್ನು ಕುರಿತು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿ ಚರ್ಚಿಸುವುದರ ಮೂಲಕ ಮೈಲಾರನ ಎಲ್ಲ ನಂಬಿಕೆ–ಆಚರಣೆಗಳನ್ನು ಒಂದೆಡೆ ತಂದು ಸ್ಥಳದಿಂದ ಸ್ಥಳಕ್ಕೆ ಯಾವ ರೀತಿಯ ವ್ಯತ್ಯಾಸವನ್ನು ಹೊಂದಿದೆ ಎಂಬುದನ್ನು ಚರ್ಚಿಸಲಾಗಿದೆ.

**ನಂಬಿಕೆ–ಆಚರಣೆಗಳು**

**ದೋಣಿ ಸೇವೆ**

ಮೈಲಾರನ ನಂಬಿಕೆ ಮತ್ತು ಆಚರಣೆಗಳಲ್ಲಿ ದೋಣಿಸೇವೆ ಎಂಬುದು ಮುಖ್ಯವಾದ ಕ್ರಿಯಾವಿಧಿ. ತಮ್ಮ ಆರಕೆಗಳನ್ನು, ಬೇಡಿಕೆಗಳನ್ನು ಈಡೇರಿಸುವುದಕ್ಕಾಗಿ ತಲತಲಾಂತರದಿಂದ ಮಾಡಿಕೊಂಡು ಬಂದ ನಂಬಿಕೆಯಾಗಿದೆ. ದೋಣಿಸೇವೆಗೆ ವಿವಿಧ ಹೆಸರುಗಳಿವೆ ದೋಣಿ ಸೇವೆ, ಬೆಣ್ಣೆ ಸೇವೆ, ಕೊಟಮಿ ಸೇವೆ, ಕೋಟಾಂಬಾ ಸೇವೆ, ಎಂಬ ನಾಮಾಂಕಿತದಿಂದ ಈ ನಂಬಿಕೆ–ಆಚರಣೆಗಳನ್ನು ಮಾಡಲಾಗುತ್ತದೆ. ದೋಣಿ ಸೇವೆಯು ಹಬ್ಬ–ಹರಿದಿನಗಳಲ್ಲಿ, ಜಾತ್ರೆಗಳಲ್ಲಿ ವಿಶೇಷವಾದ ದಿನಗಳಾದ ಹುಣ್ಣಿಮೆ, ಅಮವಾಸ್ಯೆ ದಿನಗಳಲ್ಲಿ ಹೆಚ್ಚಾಗಿ ಆಚರಿಸಲಾಗುತ್ತದೆ. ಮೈಲಾರನ ಸೇವಕರಾದ ಗೊರವ– ಗೊರವಿಯರಲ್ಲಿ ದೋಣಿ ಇರಲೇಬೇಕು. ಏಕೆಂದರೆ ದೋಣಿ ದೇವರ ಸಂಕೇತವಾಗಿ ದೋಣಿ ಸೇವೆಯಿಂದ ತಮ್ಮ ಕಾಯಕವನ್ನು ಮಾಡಬೇಕಾಗುತ್ತದೆ. ಎಲ್ಲಮ್ಮನ ಜೋಗಿಗಳಿಗೆ 'ಅಡ್ಡಲಿಗೆ', ದಾಸರಿಗೆ 'ಗೋಪಾಳ ಬುಟ್ಟಿ' ರೇವಣಸಿದ್ಧನ ಭಕ್ತರಿಗೆ 'ಗುಂಡ ಬಟ್ಟಲು ಇರುವಂತೆ' ಗೊರವರಿಗೆ ದೋಣಿ ಇರಲೇಬೇಕು ಗೊರವರು ದೋಣಿಯನ್ನು ಹೊಂದಿದ್ದರೆ ಭಕ್ತರಿಗೆ ಗೌರವ ಸಲ್ಲುತ್ತದೆ.

ಮೈಲಾರನ ಭಕ್ತರು ದೋಣಿ ತುಂಬಿಸುವ ಕಾರ್ಯಕ್ರಮವನ್ನು ಹೆಚ್ಚಾಗಿ ದೇವಾಲಯದ ಮುಂಭಾಗದಲ್ಲಿ ಮಾಡುತ್ತಾರೆ. ಇನ್ನಿತರ ಕೆಲವು ಸಂದರ್ಭಗಳಲ್ಲಿ ತಮ್ಮ ಮನೆಯಲ್ಲಿ ಸಹ ದೋಣಿ ಸೇವೆಯನ್ನು ಮಾಡಲಾಗುತ್ತದೆ. ದೋಣಿ ಸೇವೆ ಮಾಡಲು ಗೊರವ ಬೇಕು. ತಮ್ಮಲ್ಲಿರುವ ದೋಣಿಯನ್ನು ತಂದು ಕರಿ ಕಂಬಳಿ ಮೇಲೆ ಇಡುತ್ತಾರೆ. ದೋಣಿ ತುಂಬುವ ಸೇವೆಯು ಎಷ್ಟು ದೋಣಿಗಳನ್ನು ಇಟ್ಟು ಪೂಜಿಸಬೇಕು, ಎಂಬುದು ಪ್ರಶ್ನಾತೀತ. ಸಾಮಾನ್ಯವಾಗಿ ೧೧. ೨೧. ೫೧. ೧೦೧. ದೋಣಿಗಳನ್ನು ಇಟ್ಟು ಪೂಜಿಸುತ್ತಾರೆ. ವಿಶೇಷ ಸಂದರ್ಭದಲ್ಲಿ ೨೦೧, ೫೦೧ ಹಾಗೂ ೧೦೦೧ ದೋಣಿ ಇಟ್ಟು ಪೂಜಿಸುತ್ತಾರೆ. ಮೊದಲಿಗೆ ದೋಣಿಸೇವೆ ಹೇಗೆ ಮಾಡುತ್ತಾರೆ.? ಪೂಜಿಸುವ ವಿಧಾನವೇನು? ಅಂದರೆ ದೋಣಿಗಳನ್ನು ಸ್ವಚ್ಛಗೊಳಿಸಿ ವಿಭೂತಿ, ಕುಂಕುಮ, ಭಂಡಾರದಿಂದ ಪೂಜಿಸುತ್ತಾರೆ. ನಂತರ ಹೂಗಳಿಂದ ಅಲಂಕರಿಸುತ್ತಾರೆ. ಸಾಲಾಗಿ ಇಟ್ಟಿರುವ ಪ್ರತಿ ದೋಣಿಗೂ ಬಾಳೆಹಣ್ಣು, ಎಲೆ-ಅಡಿಕೆ, ಕೊಬ್ಬರಿ ಚೂರುಗಳು, ಅರಿಶಿನ ತುಂಡು, ಹಾಗೂ ಹಣವನ್ನು ದೋಣಿಯ ಮುಂದೆ ಇಡುತ್ತಾರೆ. ದೋಣಿಗಳ ಜೊತೆಗೆ ಮೈಲಾರನ ಆಯುಧಗಳಾದ ತ್ರಿಶೂಲ, ಡಮರು, ಖಡ್ಗವನ್ನು ಇಟ್ಟು ಪೂಜಿಸುತ್ತಾರೆ.

ದೋಣಿ ಸೇವೆಯನ್ನು ಮಾಡಲು ಯಾವ ಆಹಾರ ಬಳಸುತ್ತಾರೆ? ಅಂದರೆ ಮೈಲಾರನಿಗೆ ಪ್ರಿಯವಾದ ಆಹಾರವೆಂದರೆ 'ಹಣ್ಣುಪ್ಪ' ಹಣ್ಣುಪ್ಪನೆಂದರೆ ಹಣ್ಣುಗಳು ಹಾಗೂ ಸಿಹಿಯಾದ ಪದಾರ್ಥವಾದ ಬೆಲ್ಲವನ್ನು ಮಿಶ್ರಣ ಮಾಡಿ ಹಣ್ಣುಪ್ಪ ತಯಾರಿಸಿ, ದೋಣಿಯನ್ನು ತುಂಬಿಸುತ್ತಾರೆ. ಮೊದಲಿಗೆ ಬಾಳೆಹಣ್ಣು, ತುಪ್ಪ, ಹಾಲು, ಮೊಸರು ಹಾಗೂ ಬೆಲ್ಲ ಸಕ್ಕರೆಯನ್ನು ಮಿಶ್ರಣ ಮಾಡಿ ದೋಣಿಯನ್ನು ತುಂಬಿಸುತ್ತಾರೆ. ನಂತರದಲ್ಲಿ ತಮ್ಮ ಮನೆಯಲ್ಲಿ ಮೀಸಲಿಟ್ಟ ಆಹಾರವನ್ನು ಸಹ ಧೋಣಿಗೆ ತುಂಬಿಸುತ್ತಾರೆ. ವಿಶೇಷವಾಗಿ ಸಿಹಿಯಾದ ಪದಾರ್ಥವಾದ ಹೋಳಿಗೆ ತುಪ್ಪವನ್ನು ದೋಣಿಯಲ್ಲಿ ತುಂಬಿಸಿ ನೈವೇದ್ಯ ಮಾಡುತ್ತಾರೆ. ಈ ರೀತಿಯಾಗಿ ದೋಣಿಯಲ್ಲಿ ಪೂಜಾ ಸಾಮಗ್ರಿಗಳನ್ನು ಹಾಗೂ ಆಹಾರವನ್ನು ಇಟ್ಟುಕೊಂಡು ಗೊರವರು ಮೊದಲು ಪೂಜಿಸುತ್ತಾರೆ. ದೋಣಿ ತುಂಬಿಸುವ ಸಂದರ್ಭದಲ್ಲಿ ಗೊರವರು ಮೊದಲು ತೆಂಗಿನಕಾಯಿ ಒಡೆದು, ಹಣ್ಣನು ಹಿಡಿದು, ನಾಯಿಯಂತೆ ಬೊಗಳುತ್ತಾ, ನೈವೇದ್ಯದ ಎಡೆಯನ್ನು ನಾಯಿಯಂತೆ ತಿನ್ನುತ್ತಾರೆ. ನಂತರದಲ್ಲಿ ಅಲ್ಲಿ ನೆರೆದ ಭಕ್ತಾದಿಗಳಿಗೆ ನೀಡುತ್ತಾರೆ. ಗೊರವರು ದೋಣಿ ಸೇವೆಯಲ್ಲಿ ನೀಡಿದ ಆಹಾರವನ್ನು ಭಕ್ತರಿಗೆ ವಿಶೇಷವಾಗಿ ಕೆಲಭಕ್ತರಿಗೆ ನೀಡುತ್ತಾರೆ. ಅಂತಹ ಸಂದರ್ಭದಲ್ಲಿ ನಮಗೆ ಗೊರವರಿಂದ, ದೋಣಿಯ ನೈವೇದ್ಯದಿಂದ ಪಡೆದ ಆಹಾರವನ್ನು ಸೇವಿಸುವುದು ಶ್ರೇಷ್ಠವೆಂದು ಭಕ್ತರ ನಂಬಿಕೆಯಾಗಿದೆ.

ದೋಣಿ ತುಂಬಿಸುವ ಸಂದರ್ಭದಲ್ಲಿ ಹಲವು ನಂಬಿಕೆಗಳು ಆಚರಣೆಗಳು ಭಕ್ತರಲ್ಲಿದೆ. ಗೊರವರು 'ಏಳು ಕೋಟಿ', 'ಏಳು ಕೋಟಿ' ಎಂಬ ಉದ್ಗಾರದಿಂದ ಡಮರುಗವನ್ನು

ಬಾರಿಸುತ್ತ ಪೂಜಿಸಲಾಗುತ್ತದೆ. ಈ ಸಮಯದಲ್ಲಿ ಕೆಲ ಭಕ್ತರಿಗೆ ಮೈಮೇಲೆ ಮೈಲಾರ ಬರುವುದುಂಟು, ಆಗ ಮೈ ಮೇಲೆ ದೇವರು ಬಂದಿರುವ ಭಕ್ತರು ಚಾಟಿಯಿಂದ ಹೊಡೆದು ಕೊಳ್ಳುತ್ತಾ ತಮ್ಮ ಭಕ್ತಿಯನ್ನು ಅರ್ಪಿಸುತ್ತಾರೆ. ದೋಣಿ ತುಂಬುವ ಆಚರಣೆಯಾದ ಮೇಲೆ ಗೊರವ-ಗೋರವಿಯರು ಶಸ್ತ್ರಪವಾಡ, ಕೈಕಾಲು ಪವಾಡ, ದೀವಟಿಗೆಯನ್ನು ಹಿಡಿಯುವುದು, ಕುದುರೆಯ ಕುಣಿತ ಇನ್ನು ಮುಂತಾದ ಆಚರಣೆಗಳು ಕಾಣಬಹುದು.

ದೋಣಿ ತುಂಬುವ ವಿಧಾನ ಮೈಲಾರನ ಭಕ್ತರಲ್ಲಿ ಅತ್ಯಂತ ನಂಬಿಕೆಯಾಗಿ ಬೇರೂರಿದೆ. ದೋಣಿಯಿಂದ ತೆಗೆದ ಪ್ರಸಾದ ಸ್ವೀಕರಿಸಿದ ಮೇಲೆ ಆಹಾರವನ್ನು ಸ್ವೀಕರಿಸುತ್ತಾರೆ. ಕೆಲವು ಸಮಯದಲ್ಲಿ ಗೊರವ-ಗೊರವಿಯರು ಸಿಗದೇ ಇರುವ ಸ್ಥಿತಿಯಲ್ಲಿ ಹಸಿರು ದೋಣಿ ಎಂಬ ಬಾಳೆ ಎಲೆಯಲ್ಲಿ ಎಲ್ಲಾ ರೀತಿಯ ಪ್ರಸಾದವನ್ನು ಇಟ್ಟು ಪೂಜಿಸಿ ದೋಣಿಗೆ ನಮಸ್ಕರಿಸುತ್ತಾರೆ. ಈ ರೀತಿಯಾಗಿ ಗೊರವರು ತಮ್ಮ ನಂಬಿಕೆ-ಆಚರಣೆಯಾದ ದೋಣಿ ತುಂಬುವ ಸೇವೆ ವಿಧಿ ವಿಧಾನಗಳ ಮೂಲಕ ಮಾಡುತ್ತಾರೆ.

**ಕಾರ್ಣಿಕೋತ್ಸವ**

ಕರ್ನಾಟಕದ ಹಲವು ಮೈಲಾರ ಸ್ಥಳಗಳಲ್ಲಿ ಕಾರಣಿಕಗಳು ನಡೆಯುತ್ತವೆ. ಈ ದೈವಾರಾಧನೆಗಾಗಿ ಹಲವು ಭಕ್ತರು ಕಾತುರದಿಂದ ಕಾಯುತ್ತಾರೆ. ಕಾರಣಿಕ ಎಂಬುದು ದೈವವಾಣಿ ಮುಂದೆ ನಡೆಯುವ ಸೂಚನೆಗಳನ್ನು ಮೊದಲೇ ನಿರ್ಧರಿಸುವ ವಾಣಿ. ಕಾರಣಿಕ ಗೊರವ ಬಿಲ್ಲನ್ನು ಏರಿ ನುಡಿಯುವ ವಾಕ್ಯ. ಕರ್ನಾಟಕದ ವಿವಿಧ ಸ್ಥಳಗಳಲ್ಲಿ ಈ ದೈವವಾಣಿಯ ಕಂಡುಬರುತ್ತದೆ. ಹೂವಿನಹಡಗಲಿಯ ಮೈಲಾರ, ಗುಡೂರು, ಮಂಗಸೂಳಿ, ಯಾದಗಿರಿ, ಪ್ರೇಮಪುರ, ಹೊಸದುರ್ಗ, ದೇವರ ಬೆಳಕೆರೆ, ದೇವರಗುಡ್ಡ, ಹನುಮಸಾಗರ, ದೇವರಹಿಪ್ಪರಗಿ ಹಾಗೂ ಧಾರವಾಡ ಹೀಗೆ ಹಲವು ಸ್ಥಳಗಳಲ್ಲಿ ಕಾರ್ಣಿಕೋತ್ಸವ ಆಚರಣೆಗಳು ಕಂಡುಬರುತ್ತವೆ. ವಿವಿಧ ರೀತಿಯ ಈ ಸ್ಥಳಗಳಲ್ಲಿ ಅನೇಕ ಬದಲಾವಣೆಗಳೊಂದಿಗೆ ಈ ವಿಧಿವಿಧಾನವನ್ನು ಮಾಡಲಾಗುತ್ತದೆ. ಉದ್ದನೆ ಬಿಲ್ಲಿನ ಮೇಲೆ ಏರಿ ಕಾರಣಿಕವನ್ನು ಕೆಲವು ಕಡೆ ನುಡಿದರೆ, ಎತ್ತರವಾದ ಸ್ಥಳದ ಮೇಲೆ ನಿಂತು ಕೆಲವು ಕಡೆ ಹೇಳಲಾಗುತ್ತದೆ. ಇನ್ನು ಕೆಲವು ಸ್ಥಳಗಳಲ್ಲಿ ಹುಣಸೆಮರದ ಮೇಲೆ ನಿಂತು ಗೊರವ ಕಾರಣಿಕವನ್ನು ನುಡಿಯುತ್ತಾನೆ. ಈ ಕಾರಣಿಕವನ್ನು ಆಲಿಸಲು ಸಾವಿರಾರು ಜನಭಕ್ತರು ಕಾಯುತ್ತಾರೆ. ಕಾರಣಿಕದಿಂದ ಮುಂದಿನ ಮಳೆ-ಬೆಳೆಯ ಪರಿಣಾಮಗಳು, ರಾಜಕೀಯದಲ್ಲಿ ಆಗುವ ಬದಲಾವಣೆಗಳು, ಹಾಗೂ ಕುಟುಂಬದಲ್ಲಿ ಆಗುವ ಕಲಹಗಳ ಬಗ್ಗೆ ಮೊದಲೇ ಎಚ್ಚರಿಕೆಯಿಂದ ಕೂಡಿರಲು ಈ ಕಾರಣಿಕವಾಣಿಯು ಸೂಚನೆಯಾಗಿದೆ. ಇದಕ್ಕಾಗಿ ಮೈಲಾರನ ಜಾತ್ರೆಗಳಲ್ಲಿ ಕಾರಣಿಕ ನುಡಿಯುವ ಸಂದರ್ಭವೇ ಅತ್ಯಂತ ಹೆಚ್ಚು ಶ್ರೇಷ್ಠವಾಗಿದೆ.

ಮೈಲಾರನಿಗೆ ಕಾರ್ಣಿಕೋತ್ಸವ ನಡೆಯುವುದು ಭರತ ಹುಣ್ಣಿಮೆ ದಿನದಂದು. ಹೂವಿನಹಡಗಲಿಯ ಮೈಲಾರದಲ್ಲಿ ಕರ್ನಾಟಕದಲ್ಲಿರುವ ಎಲ್ಲಾ ಮೈಲಾರನ ಸ್ಥಳಗಳಿಗಿಂತ ದೊಡ್ಡ ಜಾತ್ರೆಯಾಗಿದೆ. ಇದಕ್ಕಾಗಿ ಲಕ್ಷಾಂತರ ಭಕ್ತರು ಈ ಕಾರಣಿಕವನ್ನು ಕೇಳಲು ಬರುತ್ತಾರೆ. ಸಾಮಾನ್ಯವಾಗಿ ಹೂವಿನಹಡಗಲಿಯ ಮೈಲಾರ ಸ್ಥಳದಲ್ಲಿ ನಡೆಯುವ ಕಾರ್ಣಿಕೋತ್ಸವ ಕಾರ್ಯಕ್ರಮದಂತೆ ಕರ್ನಾಟಕದ ವಿವಿಧ ಭಾಗಗಳಲ್ಲಿ ಇದೇ ರೀತಿಯಾಗಿದ್ದು, ಕೆಲವು ಸ್ಥಳಗಳಲ್ಲಿ ಸ್ವಲ್ಪ ಬದಲಾವಣೆಗಳಿಂದ ಕೂಡಿದೆ.

**ಹೂವಿನಹಡಗಲಿ ಮೈಲಾರದ ಕಾರಣಿಕ**

ಸಮಯ ೩ ಗಂಟೆಯಾಗುತ್ತಿದ್ದಂತೆ ಜಾತ್ರೆಗೆ ಬಂದ ಭಕ್ತಾದಿಗಳು ತಂಡೋಪತಂಡವಾಗಿ ವಿಶಾಲವಾದ ಬಯಲಿನಿಂದ ಕೂಡಿದ ಡೆಂಕನಮರಡಿ ಸ್ಥಳಕ್ಕೆ ಆಗಮಿಸುತ್ತಾರೆ. ರಾಜ್ಯದ ವಿವಿಧ ಭಾಗಗಳಿಂದ ಆಗಮಿಸಿದ ಭಕ್ತರು ತಮ್ಮ ಅನುಕೂಲಕ್ಕೆ ತಕ್ಕಂತೆ ಬಸ್ಸು, ಕಾರು, ಮೋಟಾರ್ ಸೈಕಲ್ ಹಾಗೂ ಎತ್ತಿನ ಗಾಡಿಗಳ ಮೂಲಕ ಈ ಸ್ಥಳಕ್ಕೆ ಆಗಮಿಸುತ್ತಾರೆ. ಸಂಜೆ ೫ ಗಂಟೆಗೆ ನಡೆಯುವ ಕಾರ್ಣಿಕೋತ್ಸವಕ್ಕೆ ಮಧ್ಯಾಹ್ನ ಒಂದು ಗಂಟೆಯಿಂದಲೇ ಭಕ್ತರು ಡೆಂಕನಮರಡಿ ಸ್ಥಳಕ್ಕೆ ಜಮಾಯಿಸುತ್ತಾರೆ.

ಸುಮಾರು ಸಂಜೆ ೪ ಗಂಟೆಗೆ ಮೈಲಾರದಲ್ಲಿರುವ ಆಡಳಿತ ಅಧಿಕಾರಿಯಾದ ಒಡೆಯರು ಕುದುರೆಯ ಮೇಲೆ ಮೆರವಣಿಗೆಯ ಮೂಲಕ ಡೆಂಕನಮರಡಿ ಸ್ಥಳಕ್ಕೆ ಬರುತ್ತಾರೆ. ಡೆಂಕನಮರಡಿಯಲ್ಲಿ ೧೧ ದಿನದಿಂದ ಉಪವಾಸವಿರುವ ಕಾರಣಿಕ ಹೇಳುವ ಗೊರವನನ್ನು ಕಾರಣಿಕ ಹೇಳುವ ಬಯಲಿಗೆ ಮೆರವಣಿಗೆ ಮೂಲಕ ಕರೆತರುತ್ತಾರೆ. ಕಾರಣಿಕ ಹೇಳುವ ಸ್ಥಳದಲ್ಲಿ ಸುತ್ತಲೂ ವೃತ್ತಾಕಾರದ ಬೇಲಿಯಿಂದ ಕೂಡಿದ್ದು, ಜನರನ್ನು ನಿಯಂತ್ರಿಸಲು ಪೊಲೀಸರು ಇರುತ್ತಾರೆ. ಕೆಲವೇ ಕೆಲವು ವ್ಯಕ್ತಿಗಳಿಗೆ ಮಾತ್ರ ಕಾರಣಿಕ ಬಯಲಿಗೆ ಮಾತ್ರ ಪ್ರವೇಶವಿರುತ್ತದೆ. ಉದಾ: ಗೊರವ ಗೊರವಿಯರು, ಆಡಳಿತಾಧಿಕಾರಿಗಳು, ರಾಜಕೀಯ ವರ್ಗದವರು ಹಾಗೂ ಮೈಲಾರ ದೇವರಿಗೆ ಸಂಬಂಧಿಸಿದ ಆಯಗಾರರನ್ನು ಮಾತ್ರ ಈ ಸ್ಥಳದಲ್ಲಿ ಕಾಣಬಹುದು. ಆಡಳಿತಾಧಿಕಾರಿಯವರು ಸೂಚನೆಯಂತೆ ಗೊರವರು ಒಡಪು ಹೇಳುವುದರಿಂದ ಕಾರ್ಯಕ್ರಮ ಜರುಗುತ್ತದೆ. ಮುಂದುವರೆದು ಅಲ್ಲಿ ನೇರದ ಭಕ್ತಾದಿಗಳು 'ಏಳು ಕೋಟಿ, ಏಳು ಕೋಟಿ ಚಾಂಗಬಲೋ' ಎಂಬ ಘೋಷದಿಂದ ಕೂಗುತ್ತಾರೆ. ಕಾರಣಿಕದ ಗೊರವ ಮೊದಲು ಮೈಲಾರ ಮೂರ್ತಿಗೆ ನಮಸ್ಕರಿಸಿ, ನಂತರ ಒಡೆಯರ ಅಪ್ಪಣೆ ಹಾಗೂ ಆಶೀರ್ವಾದವನ್ನು ಪಡೆದು ಬಿಲ್ಲನ್ನು ಏರಲು ಸಜ್ಜಾಗುತ್ತಾನೆ. ಕಾರಣಿಕದ ಗೊರವನ ಸುತ್ತಲೂ ಹತ್ತಾರು ಮಂದಿ ಬಿಲ್ಲನ್ನು ನೆಡಲು ಸುತ್ತುವರಿಯುತ್ತಾರೆ. ಬಿಲ್ಲನ್ನು ನೆಲದಲ್ಲಿ ನಿಲ್ಲಿಸಿದ ತಕ್ಷಣ ಕಾರಣಿಕದ ಗೊರವ ಓಡಿ ಬಂದು ಬಿಲ್ಲನ್ನು ಏರುತ್ತಾನೆ.

ಬಿಲ್ಲನ್ನು ಏರಿದ ತಕ್ಷಣ ಸದ್ದಲೇ... ಎಂದು ಉದ್ಗರಿಸಿದಾಗ ಅಲ್ಲಿ ನೆರೆದ ಜನಸ್ತೋಮ ನಿಶಬ್ದವಾಗುತ್ತದೆ. ಆಗ ಕೆಲವು ಸೆಕೆಂಡುಗಳ ಕಾಲ ನಿಶಬ್ದದಿಂದ ಕೂಡಿದ್ದು, ನಂತರ "ಅಂಬಲಿ ಹಳಸಿತು ಕಂಬಳಿ ಬೀಸಿತಲೆ... ಪರಾಕ್" (೨೦೧೭) ಎಂಬ ವಾಕ್ಯ ಕಾರಣಿಕ ಗೊರವ ಹೇಳಿ, ಆರು ಅಡಿ ಬಿಲ್ಲಿನಿಂದ ಆಕಾಶಕ್ಕೆ ಮುಖಮಾಡಿ ಕೆಳಗೆ ಬೀಳುತ್ತಾನೆ. ಈ ದೈವವಾಣಿಯನ್ನು ಕೇಳಿಸಿಕೊಂಡ ಭಕ್ತರು ಕೆಲವೇ ನಿಮಿಷದಲ್ಲಿ ಅಲ್ಲಿ ನೆರೆದ ಜನಸ್ತೋಮಕ್ಕೆ ತಲುಪುತ್ತದೆ. ಬಾಯಿಂದ ಬಾಯಿಗೆ, ಜನರಿಂದ ಜನರಿಗೆ, ಪ್ರದೇಶದಿಂದ ಪ್ರದೇಶಕ್ಕೆ ತಲುಪುವ ಮೂಲಕ ಇಡಿ ರಾಜ್ಯಕ್ಕೆ ಕಾರಣಿಕದ ನುಡಿಯೂ ಮನೆ ಮಾತಾಗುತ್ತದೆ.

ಕಾರಣಿಕದ ಬಯಲಿನಲ್ಲಿ ಕಾರಣಿಕ ಮುಗಿದ ತಕ್ಷಣ ಕೆಲವು ನಂಬಿಕೆ-ಆಚರಣೆಗಳು ಮಾಡುತ್ತಾರೆ. ಕೆಲವು ಭಕ್ತರು ಮಣ್ಣಿನ ಹೆಂಡೆಗಳನ್ನು ಮನೆಯ ರೀತಿಯಲ್ಲಿ ಕಟ್ಟುತ್ತಾರೆ. ಇನ್ನು ಕೆಲವು ಭಕ್ತರು ಜೋಳದ ಕಡ್ಡಿಗಳಿಂದ ಮನೆಯ ರೀತಿಯ ಚಪ್ಪರ ಕಟ್ಟುತ್ತಾರೆ. ಈ ಭಕ್ತರ ನಂಬಿಕೆಯಂತೆ ಮುಂದಿನ ವರ್ಷದೊಳಗೆ ಮನೆಕಟ್ಟುವಂತಾಗಲಿ ನಿನಗೆ ದೋಣಿಸೇವೆ, ಒಂದಿಷ್ಟು ಹಣ ಹಾಗೂ ಕೆಲವು ಕಾಣಿಕೆಗಳನ್ನು ನೀಡುತ್ತೇವೆ. ಎಂದು ಹರಕೆಯನ್ನು ಕಟ್ಟಿಕೊಳ್ಳುತ್ತಾರೆ. ಕಾರಣಿಕ ಮುಗಿದ ತಕ್ಷಣ ಕಾರಣಿಕ ನುಡಿಯ ಬಗ್ಗೆ ಅನೇಕ ಹಿರಿಯ ವ್ಯಕ್ತಿಗಳು ತಮ್ಮ ತಮ್ಮ ಅಭಿಪ್ರಾಯಕ್ಕೆ ತಕ್ಕಂತೆ ಕಾರಣಿಕ ನುಡಿಯನ್ನು ವಿಮರ್ಶಿಸುತ್ತಾರೆ. ಈ ವರ್ಷ ಮಳೆ ಬೆಳೆಯ ಉತ್ತಮವಾಗಬಹುದು ಅಥವಾ ರಾಜಕೀಯ ಪಕ್ಷಗಳ ನಡೆಯ ಬಗ್ಗೆ ಹಾಗೂ ಕೌಟುಂಬಿಕವಾದ ಸಮಸ್ಯೆಗಳ ಬಗ್ಗೆ ಮಾತನಾಡುತ್ತಾ ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಬೆಳೆಸುತ್ತಾರೆ.

ಕರ್ನಾಟಕದ ಇನ್ನೂ ಕೆಲವು ಕಡೆ ಇದೇ ರೀತಿಯಾಗಿ ಕಾರಣಿಕ ನಡೆಯುತ್ತವೆ. ಅಲ್ಲಿ ಎತ್ತರವಾದ ಹುಣಸೆಮರದ ಮೇಲೆ ನಿಂತು ಎಲ್ಲಾ ವಿಧಿವಿಧಾನಗಳನ್ನು ಅನುಸರಿಸಿ ಕಾರಣಿಕದ ನುಡಿಯನ್ನು ಹೇಳಲಾಗುತ್ತದೆ. ಉದಾ: ಹನುಮಸಾಗರ ಹಾಗೂ ಗುಡೂರನಲ್ಲಿ ಹುಣಸಿಮರದ ಮೇಲೆ ಏರಿ ಕಾರಣಿಕ ಗೊರವ ಕಾರಣಿಕದ ನುಡಿಯನ್ನು ಹೇಳುತ್ತಾನೆ. ಭರತ ಹುಣ್ಣಿಮೆಯ ದಿನದಂದು ದೇವರಗುಡ್ಡ, ಮಂಗಸೂಳಿ, ಕಾರೀಮನೆ, ಹೊಸದುರ್ಗದ ಮೈಲಾರಗಳಲ್ಲೂ, ಸಹ ಕಾರಣಿಕಗಳು ನಡೆಯುವುದನ್ನು ಕಾಣಬಹುದು.

ಈ ರೀತಿಯಾಗಿ ಕಾರಣಿಕದ ನುಡಿಯು ಮೈಲಾರನ ಭಕ್ತರಿಗೆ ವಿಶೇಷವಾದ ದೈವವಾಣಿ ಮೈಲಾರನೆ ನಮಗೆ ಕಳುಹಿಸಿಕೊಟ್ಟ ವಾಕ್ಯ ಎಂಬ ನಂಬಿಕೆ ಜನರಲ್ಲಿದೆ. ವರ್ಷಕ್ಕೊಮ್ಮೆ ನಡೆಯುವ ಕಾರಣಿಕ ನುಡಿಯು ಚಾರಿತ್ರಿಕವಾದ ಮಹತ್ವವನ್ನು ಹೊಂದಿದೆ. ಭಕ್ತರಲ್ಲಿ ಮಾನಸಿಕ ಶಾಂತಿ, ಉಲ್ಲಾಸ, ಭಕ್ತಿಗಾಗಿ ಈ ಕಾರಣಿಕ ನುಡಿಯನ್ನು ಕೇಳಲು ಕಾಯುತ್ತಾರೆ.

**ಕಡುಬಿನ ಕಾಳಗ**

ಕಡುಬಿನ ಕಾಳಗ ಎಂಬ ಆಚರಣೆಯು ಹೂವಿನಹಡಗಲಿ ಮೈಲಾರದಲ್ಲಿ ಕಂಡುಬರುವ ಆಚರಣೆಯಾಗಿದೆ. ಈ ಆಚರಣೆಯೂ ರಥಸಪ್ತಮಿಯಾದ ಸಂಜೆ ಕಡುಬಿನ ಕಾಳಗ ನಡೆಯುತ್ತದೆ. ಬೆಲ್ಲದಿಂದ ತಯಾರಿಸಿದ ಅದಕ್ಕೆ ಸಜ್ಜೆಯ ಹಿಟ್ಟನ್ನು ಸೇರಿಸಿ ಕಡಬನ್ನು ತಯಾರಿಸಿ ಉಂಡೆಗಳನ್ನು ಮಾಡುವರು. ದೇವರಿಗೆ ನೈವೇದ್ಯವನ್ನು ಮಾಡುವ ಮೂಲಕ ಕಡುಬುಗಳಿಂದ ಹೊಡೆದಾಡುವರು. ಈ ಕಡುಬು ಕಾಳಗವೂ ಎರಡು ಗುಂಪುಗಳ ಮಧ್ಯೆ ಮೈಲಾರದ ದೇವಾಲಯದಿಂದ ಡೆಂಕನಮರಡಿಯವರೆಗೂ ರಸ್ತೆಯುದ್ದಕ್ಕೂ ನಡೆಯುತ್ತದೆ. ಇದೇ ರೀತಿ ಆಚರಣೆ ಆಂಧ್ರಪ್ರದೇಶದ ಮೀನಗುಂದಿಯಲ್ಲಿ ನಡೆಯುತ್ತದೆ. ಆದರೆ ಈ ಪ್ರದೇಶದಲ್ಲಿ ನಡೆಯುವ ಆಚರಣೆ ಕಡುಬಿನ ಕಾಳಗವಲ್ಲ, ಬದಲಾಗಿ ಬಡಿಗೆಗಳಿಂದ ಹೊಡೆದಾಡುವುದು. ಹೂವಿನಹಡಗಲಿಯ ಮೈಲಾರದಲ್ಲಿ ಸಹ ಈ ಮೊದಲು ಬಡಿಗೆಗಳಿಂದ ಹೊಡೆದಾಡುತ್ತಾ ಸಾಗುತ್ತಿದ್ದರಂತೆ. ಅದಕ್ಕಾಗಿ ಇಂತಹ ಆಚರಣೆಗಳು ಕಾಲಕ್ರಮೇಣ ನಿಂತು ಹೋಗಿ ಕಡುಬಿನ ಕಾಳಗ ಆಚರಣೆಯ ಮೂಲಕ ಮುಂದುವರಿಸಿಕೊಂಡು ಬಂದಿದ್ದಾರೆ. ಕಡುಬಿನ ಕಾಳಗವೂ ಮೈಲಾರದಲ್ಲಿ ನಡೆಯುವ ಪ್ರಮುಖವಾದ ಆಚರಣೆಯಾಗಿದೆ.

**ರಥಸಪ್ತಮಿ**

ಹೂವಿನಹಡಗಲಿಯಲ್ಲಿ ಮೈಲಾರದಲ್ಲಿ ನಡೆಯುವ ಪ್ರಮುಖವಾದ ಆಚರಣೆ ಇದಾಗಿದೆ. ಮಾಘ ಶುದ್ಧ ಸಪ್ತಮಿ ದಿನದಂದು ದೇವಾಲಯದ ಮುಂಭಾಗದಲ್ಲಿ ಸಗಣೆಯಿಂದ ಮಾಡಿದ ಕುಳ್ಳುಗಳಿಂದ ಬೆಂಕಿ ಹಚ್ಚಿ ಅದರ ಮೇಲೆ ದೊಡ್ಡದಾದ ಪಾತ್ರೆಯನ್ನು ಇಡುತ್ತಾರೆ. ಈ ಪಾತ್ರೆಗೆ ಊರಿನ ಜನರೆಲ್ಲಾ ಬಂದು ಹಾಲನ್ನು ಹಾಕುತ್ತಾರೆ. ಈ ಹಾಲು ತುಂಬಿದ ಮೇಲೆ ಹಾಲು ಯಾವ ಕಡೆ ಉಕ್ಕುತ್ತದೆ ಆ ಪ್ರದೇಶದ ಕಡೆ ಮಳೆ-ಬೆಳೆ ಸಮೃದ್ಧಿಯಿಂದ ಕೂಡಿರುತ್ತದೆ ಎಂಬುದು ಜನರ ನಂಬಿಕೆಯಾಗಿದೆ. ಪಾತ್ರೆಯಲ್ಲಿರುವ ಉಳಿದ ಹಾಲಿಗೆ ಹಕ್ಕಿ, ರವೆ, ಬೆಲ್ಲವನ್ನು ಸೇರಿಸಿ ಪಾಯಸವನ್ನು ತಯಾರಿಸಿ ಮೈಲಾರ ದೇವತೆಗೆ ನೈವೇದ್ಯವನ್ನು ಮಾಡಿ ಊರಿನ ಜನರೆಲ್ಲ ಸೇವಿಸುತ್ತಾರೆ. ಈ ನಂಬಿಕೆ-ಆಚರಣೆ ಮುಗಿದ ನಂತರ ಸಂಜೆ ಡೆಂಕನಮರಡಿಗೆ ಹೋಗುತ್ತಾರೆ. ಮೈಲಾರ ಮೂರ್ತಿ, ಗಂಗೆಮಾಳಮ್ಮ, ಹೆಗ್ಗಪ್ಪನ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಮೌನ ಸವಾರಿಯಿಂದ ಒಯ್ಯುತ್ತಾರೆ. ಈ ಸಮಯದಲ್ಲಿ ಯಾರು ಶಬ್ದ ಮಾಡುವಂತಿಲ್ಲ, ಗಂಟೆ ಬಾರಿಸುವಂತಿಲ್ಲ, ತಾಳ-ಮೇಳಗಳು ಇರುವುದಿಲ್ಲ. ಈ ರೀತಿಯ ಮೌನ ಮೆರವಣಿಗೆ ಮಾಡಲು ಕಾರಣ ಮಲ್ಲಾಸುರ-ಮಣಿಕಾಸುರ ವಧೆಗಾಗಿ ಹೊರಟಿರುವುದು ರಾಕ್ಷಸರಿಗೆ ತಿಳಿಯಬಾರದು ಅದಕ್ಕಾಗಿ ಮೌನ ಮೆರವಣಿಗೆ ಮಾಡಲಾಗುತ್ತದೆ.

**ಗೊರವರು**

ಮೈಲಾರ ದೇವತೆಯ ಆರಾಧಕರು. ಮೈಲಾರನ ಪ್ರತಿರೂಪವಾಗಿರುವ ಇವರು ಮೈಲಾರನಿಗೆ ತಮ್ಮದೇ ಆದ ಸೇವೆಯನ್ನು ಮಾಡುತ್ತಾರೆ. 'ಗುರು' ಶಬ್ದದ ಪ್ರಥಮ ರೂಪ 'ಗೊರವ' ಸಂಸ್ಕೃತದಲ್ಲಿ ಇದೇ ಕಾಲಾಂತರದಲ್ಲಿ ಗೊರವ ಎಂದಿರಬೇಕು, ಇದೇ ಪದ ಮುಂದೆ ಶೈವ ಸನ್ಯಾಸಿ ಎಂಬ ಸೀಮಿತ ಅರ್ಥ ಪಡೆದಿರಬೇಕು.[೮] ಗೊಗ್ಗ ಎಂಬ ಪದವನ್ನು ಗೊರವಯ್ಯನನ್ನು ಸೂಚಿಸಲು ಬಳಸುತ್ತಾರೆ. ಗೊಗ್ಗಯ್ಯ, ವಗ್ಗಯ್ಯ, ಮೊದಲಾದ ಪದಗಳು ಬಳಕೆಯಲ್ಲಿವೆ. ಗೊಗ್ಗ ಎಂಬ ಪದ ಗೊರವ ಎಂಬ ಪದದಿಂದಲೇ ನಿಷ್ಪನ್ನ ಗೊಂಡಿರುವ ಸಾಧ್ಯತೆ ಇದೆ. ಕ್ರಿ ಶ. ೧೦-೧೧ನೇ ಶತಮಾನದಲೇ ಗೊರವ ಶಬ್ದ ಇರುವುದನ್ನು ಕಾಣಬಹುದು. ವ್ಯಾಘ್ರ ಎಂದರೆ ಹುಲಿ, ಮರಾಠಿ ಮೂಲದಿಂದ ವ್ಯಾಘ್ರ ವಗ್ಗ ಎಂದಾಗಿರುವ ಸಾಧ್ಯತೆ ಇದೆ ಎಂದು ರಾಂ.ಚಿ. ಢೇರೆ ಅವರ ಅಭಿಪ್ರಾಯವಾಗಿದೆ. ನಾಯಂತೆ ಬೊಗಳುವ ಇವರು ಉಗ್ಗಡಿಸುವುದರಿಂದ ಬಗ್ಗು ಬಗ್ಗ ಎಂದಾಗಿರುವ ಸಾಧ್ಯತೆಯಿದೆ. ಉಗ್ಗ, ಬಗ್ಗ, ವಗ್ಗಯ್ಯ, ಗೊಗ್ಗಯ್ಯ, ಗೊರವಯ್ಯ, ಗೊರವಪ್ಪ, ಗೊರಪ್ಪ ಇವೆಲ್ಲಾ ಗೊರವರಿಗೆ ಇರುವ ಬೇರೆ ಬೇರೆ ಪದಗಳು. ಗೊರವ ಪದ ಕ್ರಿ.ಶ. ೧೦ನೇ ಶತಮಾನದಿಂದಲೇ ಬಂದಿದೆ. ಅದಕ್ಕೆ ಆಧಾರವೆಂಬಂತೆ ಶಾಸನಗಳು, ಸಾಹಿತ್ಯಕ ಆಕಾರಗಳು ದೊರೆಯುತ್ತವೆ.

ಕ್ರಿ.ಶ. ೧೧೧೨ರಲ್ಲಿನ ನಯಸೇನ ಧರ್ಮಾಮೃತದಲ್ಲಿ ಮೈಲಾರದ ಗೊರವನಂತೆ ತಂತಮ್ಮನೆ ಬಡಿದುಕೊಳ್ಳುವ ಉಲ್ಲೇಖ ದೊರೆಯುತ್ತದೆ.[೯] ಬಸವಣ್ಣರ ಘಟಸ್ಥಳದ ವಚನಗಳಲ್ಲಿ ಮೈಲಾರದ ಪೂಜಿಸಿ ನಾಯಿಯಾಗಿ ಬೊಗಳುವುದು ಕಂಡೆ ಎಂಬುದು ದೋಣಿ ಪೂಜೆಯ ಸಮಯದಲ್ಲಿ ಗೊರವರು ನಾಯಿಗಳಂತೆ ಬೊಗಳುತ್ತಾ ಹುಸಿ ಕಾಳಗ ಮಾಡುವುದರ ಕುರಿತು ತಿಳಿಸುವಂತಿದೆ. ಚೆನ್ನಬಸವಣ್ಣನವರ ವಚನಗಳಲ್ಲಿ ಭೈರವನ ಆರಾಧಿಸಿ ಬಾಹಿರರಾದರಯ್ಯ ಮೈಲಾರನ ಆರಾಧಿಸಿ ಕುರುಳ ಬೆರಳ ಕಡಿಸಿಕೊಂಡ ನಾಯಿಯಾಗಿ ಬಗಳುತಿಪ್ಪರಯ್ಯ ಎಂದಿದೆ. ಅನೇಕ ಶಾಸನಗಳಲ್ಲಿ ಗೊರವರ ಉಲ್ಲೇಖಗಳನ್ನು ಸಹ ಕಾಣಬಹುದು. ಗೊರವರ ಗುಡಿ, ಗೊರವರು, ಗೋರಾವಿಕ, ಗೊರವ ಎಂಬ ಉಲ್ಲೇಖಗಳು, ಕ್ರಿಶ. ೧೦ನೇ ಶತಮಾನದಿಂದಲೇ ಆರಂಭವಾಗುತ್ತವೆ.

ಗೊರವರು ಧಾರ್ಮಿಕ ವೃತ್ತಿಗಾಯಕರು ಆರಾಧ್ಯದೈವವಾದ ಮೈಲಾರಲಿಂಗನನ್ನು ಪೂಜಿಸಿ ಹಾಡುಗಳನ್ನು ಹಾಡುತ್ತಾರೆ. ಹಾಗೆ ಮಾಡುವಾಗ ಗಂಟೆಯನ್ನು ಡಮರುಗವನ್ನು ಬಾರಿಸುತ್ತಾರೆ. ಗೊರವರು ಮನೆಬಾಗಿಲಿಗೆ ಭಿಕ್ಷೆಗೆ ಹೋಗುತ್ತಾರೆ. ಎಲ್ಲಾ ಗೊರವರು ಅನಿವಾರ್ಯವಾಗಿ ದೀಕ್ಷೆ ಪಡೆಯುವುದರಿಂದ ಮನೆ ಮನೆಗೆ ಹೋಗಿ ಭಿಕ್ಷೆ ಮಾಡಲೇಬೇಕಾಗುತ್ತದೆ.

ಗೊರವರ ಉಲ್ಲೇಖಗಳಿರುವ ಶಾಸನಗಳು ಕರ್ನಾಟಕದ ತುಂಬಾ ಕಂಡುಬರುತ್ತವೆ. ಪ್ರಮುಖವಾಗಿ ಕ್ರಿ.ಶ. ೧೦೨೨ರ ಭಾಲ್ಕಿಯಲ್ಲಿನ ಶಾಸನದಲ್ಲಿ ಗೊರವ ಎಂಬ ಉಲ್ಲೇಖ ದೊರೆಯುತ್ತದೆ.[೧೦] ಕ್ರಿ.ಶ. ೧೧೨೫ರ ಮೂಚಳಂಬ ಗ್ರಾಮದ ಶಾಸನದಲ್ಲಿ, ಗೊರವರು ಎಂಬ ಉಲ್ಲೇಖ ಸಿಗುತ್ತದೆ.[೧೧] ಕ್ರಿ.ಶ. ೧೦೨೧ ನಾಗಮಂಗಲದ ಶಾಸನದಲ್ಲಿ ಗೊರವರ ಗುಡಿಗೆ ದತ್ತಿ ಬಿಟ್ಟ ಉಲ್ಲೇಖವಿದೆ.[೧೨] ಕ್ರಿ.ಶ. ೧೧೧೭ರ ಬಸವಕಲ್ಯಾಣದ ಶಾಸನದಲ್ಲಿ ಗೊರವರ ಎಂಬ ಉಲ್ಲೇಖವಿದೆ.[೧೩] ಕ್ರಿ.ಶ. ೧೨೨೧ರ ಕಲ್ಗುಂಡಿ ಅರಸೀಕೆರೆ ತಾಲೂಕಿನ ಶಾಸನದಲ್ಲಿ ಗೊರವ ಎಂಬ ಉಲ್ಲೇಖವಿದೆ.[೧೪] ಕ್ರಿ.ಶ. ೧೨ನೇ ಶತಮಾನದ ಹೆಬ್ಬಳಲು ಚನ್ನರಾಯಪಟ್ಟಣದ ತಾಲೂಕಿನ ಶಾಸನದಲ್ಲಿ ಗೊರವಿಯಕ್ಕ ಎಂಬ ಉಲ್ಲೇಖವಿದೆ.[೧೫] ಕ್ರಿ.ಶ. ೧೧ನೇ ಶತಮಾನದ ಚನ್ನರಾಯನಪಟ್ಟಣದ ಶಾಸನದಲ್ಲಿ ಗೊರವಿಯಕ್ಕ ಎಂಬ ಉಲ್ಲೇಖವಿದೆ.[೧೬] ಕ್ರಿ.ಶ. ೧೧೮೯ರ ಚಿತ್ತಲ ಪುತ್ತೂರು ಕಡಪ ತಾಲೂಕಿನ ಶಾಸನದಲ್ಲಿ ಗೊರವ ಎಂಬ ಉಲ್ಲೇಖವಿದೆ.[೧೭] ಈ ಎಲ್ಲಾ ಶಾಸನಗಳನ್ನು ಗಮನಿಸಿದಾಗ ಮೈಲಾರ ದೇವರ ಆರಾಧಕರಾಗಿರುವ ಗೊರವರು ಕ್ರಿ.ಶ. ೧೦ನೇ ಶತಮಾನದಿಂದ ಪ್ರಸಿದ್ಧಿಗೆ ಬಂದಿರಬಹುದು. ಮೈಲಾರ ದೇವರು ಕ್ರಿ.ಶ. ೯-೧೦ನೇ ಶತಮಾನದಿಂದ ಆಚರಣೆಗೆ ಒಳಪಟ್ಟಿರಬಹುದು ಎಂದು ನನ್ನ ಊಹೆಯಾಗಿದೆ.

**ಗೊರವರ ದೀಕ್ಷೆ**

ಗೊರವರ ಸಂಪ್ರದಾಯದಂತೆ ದೀಕ್ಷೆಯನ್ನು ಹಿರಿಯ ಮಗನ ವಯಸ್ಸು ೧೨ ರಿಂದ ೨೦ ವರ್ಷದ ಒಳಗಡೆ ಮಾಡಬೇಕು. ಎಲ್ಲಾ ಸಂಬಂಧಿಕರ ಸಮ್ಮುಖದಲ್ಲಿ ದೀಕ್ಷೆಯನ್ನು ಹೊಂದಬೇಕು. ಮದುವೆಗೆ ಮುಂಚೆ ಗೊರವರು ದೀಕ್ಷೆಯನ್ನು ನೀಡಬೇಕು. ದೀಕ್ಷೆ ನೀಡುವಾಗ ಸಂಪ್ರದಾಯದಂತೆ ಮೈತೊಳೆದು, ವಿಭೂತಿ, ಭಂಡಾರವನ್ನು ಹಚ್ಚುತ್ತಾರೆ. ನಾಲ್ಕು ಕಳಸಗಳನ್ನು ಹೂಡಿ ದೀಕ್ಷೆ ಪಡೆಯುವ ವ್ಯಕ್ತಿಯನ್ನು ಮಧ್ಯದಲ್ಲಿ ಕೂರಿಸುತ್ತಾರೆ. ಶುದ್ಧ ಜೀವನ ನಡೆಸುವ ಬಗ್ಗೆ ಆ ವ್ಯಕ್ತಿಗೆ ತಿಳವಳಿಕೆ ನೀಡುತ್ತಾರೆ. ಆ ಬಗೆಗೆ ಅವನಿಂದ ವಚನ ತೆಗೆದುಕೊಳ್ಳುತ್ತಾರೆ. ಕೊರಳಿಗೆ ಕವಡೆ ಹಾಕಿ ಗುಡ್ಡನೆಂದು ಘೋಷಿಸುತ್ತಾರೆ. ಅವನ ತಂದೆ ತಾಯಿಗಳು ಮಗನನ್ನು ದೇವರೆಂದು ಪರಿಗಣಿಸಬೇಕು. ದೀಕ್ಷೆ ಪಡೆದು ವ್ಯಕ್ತಿಗೆ ಯಾರ ಮಗನೆಂದು ಕೇಳುತ್ತಾರೆ. ನಾನು ದೇವರ ಮಗ ಮೈಲಾರನ ಮಗ ಎಂದು ಹೇಳುತ್ತಾರೆ. ಮೈಲಾರನ ದೇವರಿಗೆ ದೀಕ್ಷೆ ಪಡೆದ ಗೊರವ ಕೆಲವು ಕಟ್ಟಚರಣೆಗಳನ್ನು ಮಾಡಬೇಕು. ಕಾಲಿಗೆ ಚಪ್ಪಲಿ ಹಾಕುವಂತಿಲ್ಲ, ಹಾವನ್ನು ಸಾಯಿ ಹೊಡೆಯುವಂತಿಲ್ಲ, ಪ್ರಾಣಿಗಳಿಗೆ ಹಿಂಸೆ ಮಾಡುವಂತಿಲ್ಲ, ಹೊಲದಲ್ಲಿ ಹಸು ಮೇಯುತ್ತಿದ್ದರೆ ಹಸು ಮೇಯುತ್ತಿದೆ ಎಂದು ಹೇಳುವಂತಿಲ್ಲ ಹಾಗೂ ಹಾಲು ಕುಡಿಯುತ್ತಿದ್ದರೆ, ಹಾಲು ಕುಡಿಯುತ್ತಿದೆ ಎಂದು ಹೇಳುವಂತಿಲ್ಲ. ಇಂತಹ ಕಟ್ಟುಪಾಡುಗಳನ್ನು ದೀಕ್ಷೆ ಪಡೆದ ಗೊರವ ಅನುಸರಿಸಬೇಕು.

ದೀಪ ಧೂಪ ಹಾಕಿ ಕೊರಳಿಗೆ ಕವಡೆ ಸರ ಕಟ್ಟಿ ಹಣೆಗೆ ವಿಭೂತಿ ಭಂಡಾರ ಹಚ್ಚುತ್ತಾನೆ. ಇದೆಲ್ಲವೂ ಗೊರವನಾದವರ ಸಂಕೇತ. ಇದಾದ ನಂತರ ಗೊರವರು ಎಲ್ಲರೂ ಸೇರಿ, ಹಿತ್ತಾಳೆ ದೋಣಿ ಮತ್ತು ಜೋಳಿಗೆ ನೀಡುತ್ತಾರೆ. ದೀಕ್ಷೆ ಪಡೆದ ಗೊರವ ನಾಲ್ಕು ಮನೆಗಳಿಗೆ ಭಿಕ್ಷೆ ಮಾಡಬೇಕಾಗುತ್ತದೆ. ಹೀಗೆ ಮನೆಯಲ್ಲಿ ಹಿರಿಯ ಮಗನಾಗಲಿ ಕಿರಿಯ ಮಗನಾಗಲಿ ಈ ದೀಕ್ಷೆಯನ್ನು ಹೊಂದಲೇಬೇಕು. ದೀಕ್ಷೆ ಪಡೆದ ಗೊರವ ತನ್ನ ಆಚರಣೆ ವಿಧಿವಿಧಾನಗಳನ್ನು ಅನುಸರಿಸಿಕೊಂಡು ಹೋಗಬೇಕು.

**ಗೊರವರ ವೇಷ ಭೂಷಣ**

ಗೊರವರ ವೇಷಭೂಷಣ ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ. ಬ್ರಹ್ಮನಿಂದ ವರ ಪಡೆದ ಮಣಿ ಮಲ್ಲಾಸುರರನ್ನು ಶಿವ ಗಜ ಚರ್ಮ ಹೊದ್ದುಕೊಳ್ಳುವುದು ಇದರಲ್ಲಿದೆ. ಆದರೆ ಗೊರವರು ಶಿವನಂತೆ ಹೋಲುವ ಕರಿಕಂಬಳಿ ನಿಲುವಂಗಿ ಧರಿಸಿಕೊಂಡು ಮೈಲಾರನಾಗಿ ಹಾಡುತ್ತಾ, ಭಿಕ್ಷೆ ಬೇಡಿ ತಮ್ಮ ಜೀವನವನ್ನು ನಡೆಸುತ್ತಾರೆ. ಗೊರವರ ವೇಷಭೂಷಣವೂ ಭೈರವನ ಅವತಾರ ಹೊಂದಿದ ಶಿವನಂತೆ ಕಾಣುತ್ತದೆ. ಸಾಮಾನ್ಯವಾಗಿ ಗೊರವರ ವೇಷಭೂಷಣ ಕಂಬಳಿಯ ನಿಲುವಂಗಿ, ತಲೆಗೆ ರುಮಾಲು, ಕರಡಿ ಕುಲಾವಿ, ಕೊರಳಿಗೆ ಭಂಡಾರ ಇಡುವ ಜಿಂಕೆಯ ಚರ್ಮದಿಂದ ಮಾಡಿದ ಚೀಲ, ಕವಡೆಸರ, ಹೆಗಲಿಗೆ ಭಿಕ್ಷೆ ಪಾತ್ರೆ, ದೋಣಿ, ಡಮರುಗ, ತ್ರಿಶೂಲ, ಗಂಟೆ, ಕೈಗೆ ಬಳೆ, ಕಾಲಿಗೆ ಗೆಜ್ಜೆ, ಹುಲಿ ಚರ್ಮ, ಸೊಂಟಕ್ಕೆ ನಡುಪಟ್ಟಿ, ಮುಂತಾದವುಗಳನ್ನು ಧರಿಸುತ್ತಾರೆ.

ಗೊರವರ ವೇಷಭೂಷಣಗಳು ಕರ್ನಾಟಕದ ತುಂಬಾ ಅನೇಕ ಗೊರವ ವೇಷಭೂಷಣದಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಉತ್ತರ ಕರ್ನಾಟಕದ ಹಾಗೂ ದಕ್ಷಿಣ ಕರ್ನಾಟಕದಲ್ಲಿ ಇಂತಹ ವ್ಯತ್ಯಾಸಗಳನ್ನು ಗಮನಿಸಬಹುದು. ದಕ್ಷಿಣ ಕರ್ನಾಟಕದ ಗೊರವರ ವೇಷಭೂಷಣವೂ ಕಂಬಳಿಯ ಕೋರೆ ನಿಲುವಂಗಿ, ಕೊರಳಲ್ಲಿ ಭಂಡಾರ ಇರುವ ಚಿಗರೆ ಚರ್ಮದ ಚೀಲ, ಕವಡೆಯ ಸರ, ಹೆಗಲಲ್ಲಿ ಭಿಕ್ಷೆಪಾತ್ರೆ, ದೋಣಿ, ಕೈಯಲ್ಲಿ ಡಮರು, ತ್ರಿಶೂಲ ಇವುಗಳನ್ನು ಗಮನಿಸಬಹುದು. ಕರ್ನಾಟಕದ ಗೊರವರ ಲಕ್ಷಣಗಳ ಜೊತೆಗೆ ಗಂಟೆ, ಡಮರುಗ, ಬೆತ್ತ, ಕೈಗೆ ಬಳೆ, ಕಾಲಿಗೆ ಗೆಜ್ಜೆ, ಹುಲಿ ಚರ್ಮ, ಕೊರಳಿಗೆ ಕವಡೆ, ಸೊಂಟಕ್ಕೆ ನಡುಪಟ್ಟಿ ಹಾಗೂ ಭಂಡಾರದ ಚೀಲವನ್ನು ಹೊಂದಿರುತ್ತಾರೆ.

ಮೈಲಾರನ ಭಕ್ತರಾದ ಗೊರವರು ವಿವಿಧ ವೇಷಭೂಷಣಗಳಿಂದ ಕೂಡಿದ್ದಾರೆ. ಕರಡಿ ಗೊರವ, ನಾಯಿಗೊರವ, ಕಾರಣಿಕ ಗೊರವ, ಎಲೆಚೆಂಚಿ ಗೊರವಮ್ಮ, ಚೌರಿ ಗೊರವಮ್ಮ, ಕುದುರೆ ಗೊರವ, ದಿವಟಿಗೆ ಗೊರವರನ್ನು ಕಾಣುತ್ತೇವೆ. ಕರಡಿ ಗೊರವರ ಕರಡಿ ಟೊಪ್ಪಿಗೆಯನ್ನು ತಲೆಗೆ ಹಾಕಿಕೊಂಡಿರುತ್ತಾರೆ. ನಾಯಿ ಗೊರವ ನಾಯಿಯ ಹಾಗೆ

ಬೊಗಳುತ್ತಾ ದೋಣಿಯಲ್ಲಿನ ಆಹಾರವನ್ನು ಸೇವನೆ ಮಾಡುತ್ತಾನೆ. ಕಾರಣಿಕ ಗೊರವ ತಲೆಗೆ ಪೇಟವನ್ನು ಕಟ್ಟಿಕೊಂಡು ತ್ರಿಶೂಲ ಧರಿಸುತ್ತಾನೆ. ಎಲೆಚೆಂಚಿ ಗೊರವಮ್ಮ ಕಂಬಳಿಯ ನಿಲುವಂಗಿ ತ್ರಿಶೂಲವನ್ನು ಧರಿಸುತ್ತಾಳೆ. ಮೈಲಾರನಿಗೆ ತಾಂಬೂಲ ಕೊಡುವ ಸೇವೆ ಮಾಡುತ್ತಾಳೆ. ಚೌರಿ ಗೊರವಮ್ಮ ಮೈಲಾರನಿಗೆ ಚೌರಿ ಬೀಸುವ ಕಾಯಕ ಮಾಡುತ್ತಾಳೆ. ಕುದುರೆಕಾರರು ಮೈಲಾರನ ಉತ್ಸವದ ಮುಂದೆ ಕುದುರೆಯಂತೆ ಕುಣಿಯುತ್ತ, ಕಾಲಿಗೆ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ. ದೀವಟಿಗೆ ಗೊರವ ಮೈಲಾರನ ಮೆರವಣಿಗೆಯ ಮುಂದೆ ದೀವಟಿಗೆ ಹಿಡಿದು ಸೇವೆಯನ್ನು ಮಾಡುತ್ತಾನೆ.

ಕರ್ನಾಟಕದ ಎಲ್ಲ ಭಾಗಗಳಲ್ಲೂ ಗೊರವರು ಗೊರವಿಯರೂ ವಿಶೇಷವಾದ ವೇಷಭೂಷಣವನ್ನು ಕಾಣುತ್ತೇವೆ ಮೈಲಾರನ ದಿನವಾದ ರವಿವಾರ ಅನೇಕ ಗೊರವರು ತಮ್ಮ ವೇಷಭೂಷಣಗಳಿಂದ ಮೈಲಾರನಿಗೆ ಪೂಜೆಯನ್ನು ಸಲ್ಲಿಸುತ್ತಾರೆ.

**ಕುದುರೆ ಗೊರವನ ದೀಕ್ಷೆ**

ಕುದುರೆ ಗೊರವನ ದೀಕ್ಷೆಯೂ ಸಹ ಮೈಲಾರ ಪರಂಪರೆಯಲ್ಲಿ ಕಂಡುಬರುವ ಆಚರಣೆಯಾಗಿದೆ. ನಯಸೇನ, ಬ್ರಹ್ಮಶಿವರಂಥ ಕವಿಗಳು ತಮ್ಮ ಗ್ರಂಥಗಳಲ್ಲಿ ಗೊರವರನ್ನು ವಿಡಂಬಿಸುತ್ತ "ಮೈಲಾರದ ಗೊರವರಂತೆ ತಂತಮನೆ ಬಡಿದು ಕೊಳ್ವಚ್ಚುಳಾಯಿಲರು" ಎಂದು ವಿಡಂಬನೆ ಮಾಡಿದ್ದಾರೆ. ಈ ಕುದುರೆ ಗೊರವನ ದೀಕ್ಷೆ ಪಡೆದುಕೊಂಡವರು ಕುದುರೆಯಂತೆ ಕುಣಿಯುತ್ತ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ. ಈ ರೀತಿಯಾಗಿ ಆಚರಣೆ ಪೂರ್ವ ಕಾಲದಿಂದಲೂ ರೂಢಿಯಲ್ಲಿದ್ದು ಅದನ್ನೇ ನಮ್ಮ ಜನಪದರು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಇದಕ್ಕೆ ಕಾರಣವನ್ನು ಕೇಳಿದರೆ ಮೈಲಾರನು ಒಬ್ಬ ರಾಜನಾಗಿದ್ದು ಆತ ದೈತ್ಯರ ಸಂಹಾರದಲ್ಲಿ ಕುದುರೆ ಮೇಲೆ ಕುಳಿತೇ ಅವರನ್ನು ಸಂಹಾರ ಮಾಡಿದನು. ಅದು ಆತನ ವಾಹನವಾದುದರಿಂದ ನಿನಗೆ ಕುದುರೆಯಾಗಿ ಸೇವೆ ಸಲ್ಲಿಸುತ್ತೇನೆಂದು ಹರಕೆ ಹೊತ್ತವರು ಈ ದೀಕ್ಷೆಯನ್ನು ಪಡೆದು ಕುದುರೆಯಂತೆ ಕುಣಿಯುತ್ತಾರೆ. ಇನ್ನು ಚಾಟಿಯ ವಿಷಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಈ ಚಾಟಿಯ ಹಿಡಿಕೆಯ ಮುಂಭಾಗ ಹಾವಿನ ಹೆಡೆಯಾಕಾರದಲ್ಲಿದ್ದು ಕುದುರೆ ದೀಕ್ಷೆ ಪಡೆದವರು ಅದರಿಂದ ಹೊಡೆದುಕೊಳ್ಳುವುದನ್ನು ನೋಡಿದರೆ ಬಹುಶಃ ಅಂದು ಮೈಲಾರಲಿಂಗ ಕುದುರೆ ಸವಾರಿ ಮಾಡುತ್ತಿದ್ದ ಎಂಬ ನಂಬಿಕೆಯಂತೆ ಅದನ್ನು ಪಳಗಿಸಲು ಮತ್ತು ಸರಿಯಾದ ದಾರಿಯಲ್ಲಿ ವೇಗವಾಗಿ ಓಡಲು ಮಾಡುವಂತೆ ಆಭರಣವಾದ ನಾಗನನ್ನೇ ಚಾಟಿಯಾಗಿ ಬಳಸಿಕೊಂಡಿದ್ದನೆಂದು ತಿಳಿದಿರಬೇಕು. ತಾವು ಕುದುರೆಯಂದು ಭಾವಿಸಿ ಲೌಕಿಕ ವಿಷಯಗಳ ಕಡೆ ತಮ್ಮ ಮನಸ್ಸು ಬಿಡದಂತೆ ತಿದ್ದಿಕೊಳ್ಳುವ ಸಲುವಾಗಿ ಹಾಗೆ ಬಡಿದುಕೊಳ್ಳುತ್ತಿರಬೇಕೆಂದು ಕಂಡುಬರುವ ಅಂಶವಾಗಿದೆ.

**ಗೊರವರ ವಿಧಗಳು**

ಮೈಲಾರ ಭಕ್ತರಾದ ಗೊರವರು ವಿವಿಧ ರೀತಿಯಲ್ಲಿ ಸೇವೆಯನ್ನು ಸಲ್ಲಿಸುತ್ತಾರೆ. ಗೊರವರು ಇಂದಿಗೂ ಮೈಲಾರನಿಗೆ ಸೇವೆಯನ್ನು ಮಾಡುತ್ತಾರೆ. ಸೇವೆಗಳಲ್ಲಿ ಮತ್ತು ಅವರ ರೀತಿನೀತಿಗಳು ಭಿನ್ನತೆಯಿಂದ ಕೂಡಿವೆ. ಕರ್ನಾಟಕ ತುಂಬಾ ಇರುವ ಗೊರವರು ಮೈಲಾರ ಜಾತ್ರೆಯಲ್ಲಿ, ಉತ್ಸವ, ಮೆರವಣಿಗೆ ಹಾಗೂ ವಿಶೇಷವಾದ ದಿನಗಳಲ್ಲಿ ತಮ್ಮ ಸೇವೆಯನ್ನು ಮಾಡುತ್ತಾರೆ. ಗೊರವರ ವಿಧಗಳು ಮತ್ತು ಅವರ ಸೇವೆಗಳನ್ನು ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಯಿಂದ ಈ ಕೆಳಗಿನಂತೆ ಚರ್ಚಿಸಲಾಗಿದೆ.

**ದೀವಟಿಗೆ ಗೊರವ**

ದೀವಟಿಗೆ ಗೊರವನ ಮುಖ್ಯವಾದ ಕಾಯಕ ಪಂಜನ್ನು ಹಿಡಿದು ಬೆಳಕನ್ನು ಮೈಲಾರ ದೇವರ ಎದುರಿಗೆ ಹಾಗೂ ಮೆರವಣಿಗೆಯ ಉದ್ದಕ್ಕೂ ಸಾಗುವುದು. ಈ ಸೇವೆಯನ್ನು ಮೈಲಾರನಿಗೆ ಇವರೇ ಮಾಡುತ್ತಾರೆ. ಕರ್ನಾಟಕದ ವಿವಿಧ ಭಾಗದ ನೆಲೆಗಳಲ್ಲಿ ಬೇರೆ ಬೇರೆ ಸಮುದಾಯಗಳಲ್ಲಿ ದೀವಟಿಗೆ ಗೊರವರನ್ನು ಕಾಣುತ್ತೇವೆ. ವಿಶೇಷವಾಗಿ ದೀವಟಿಗೆ ಗೊರವರ ಸೇವೆಯನ್ನು ಮಡಿವಾಳ ಸಮುದಾಯದಲ್ಲಿ ಹೆಚ್ಚಾಗಿ ಕಾಣಬಹುದು.

**ದೋಣಿ ಗೊರವ**

ದೋಣಿ ಗೊರವ ವಿಶೇಷವಾಗಿ ಮೈಲಾರನಿಗೆ ಸೇವೆಯನ್ನು ಮಾಡುತ್ತಾನೆ. ಪ್ರಮುಖವಾಗಿ ಮೈಲಾರನಿಗೆ ದೋಣಿ ಸೇವೆಯ ಪೂಜೆಯನ್ನು ಮಾಡುವುದು ದೋಣಿ ಗೊರವ. ಅವರು ಚೌಕಾಕಾರದ ಬಟ್ಟಲಲ್ಲಿ ಇಡುವ ಆಹಾರವನ್ನು ಪಡೆಯುತ್ತಾನೆ. ದೋಣಿ ಗೊರವನಿಗೆ ಇದೆ ಅಕ್ಷಯ ಪಾತ್ರೆಯಾಗಿದ್ದು ದೋಣಿಯ ಮೂಲಕ ಆಹಾರವನ್ನು ಪಡೆಯುತ್ತಾನೆ. ದೋಣಿಯ ಗೊರವರಲ್ಲಿ ಕಂಚಿನ ದೋಣಿ ಹಾಗೂ ಮರದ ದೋಣಿಯನ್ನು ಕಾಣಬಹುದು.

**ನಾಯಿ ಗೊರವ**

ನಾಯಿಗೊರವ ಮೈಲಾರನಿಗೆ ತಮ್ಮದೇ ಆದ ಕಾಯಕವನ್ನು ಮಾಡುತ್ತಾನೆ. ವಿಶೇಷವಾಗಿ ನಾಯಿಯಂತೆ ಬೊಗಳುತ್ತ ಭಕ್ತರಿಂದ ಪಡೆದ ಆಹಾರವನ್ನು ನಾಯಂತೆ ಸೇವಿಸುತ್ತಾನೆ. ಭಕ್ತರಿಂದ ಪಡೆದ ಹಣ್ಣು-ತುಪ್ಪವನ್ನು ದೋಣಿಯಲ್ಲಿಟ್ಟು ನಾಯಿಯಂತೆ ಕಿತ್ತಾಡುತ್ತಾ, ದೋಣಿಯಲ್ಲಿರುವ ಆಹಾರವನ್ನು ಸೇವಿಸುತ್ತಾರೆ. ಅನೇಕ ವಿಶೇಷವಾದ ದಿನಗಳಲ್ಲಿ ಈ ಆಚರಣೆ ಸಾಮಾನ್ಯವಾಗಿದೆ.

**ಕರಡಿ ಗೊರವ**

ಕರಡಿ ಗೊರವರನ್ನು ಹೆಚ್ಚಾಗಿ ದಕ್ಷಿಣ ಕರ್ನಾಟಕದ ಭಾಗಗಳಲ್ಲಿ ಕಾಣುತ್ತೇವೆ. ಉತ್ತರ ಕರ್ನಾಟಕದ ಭಾಗಗಳಲ್ಲಿ ವಿರಳವಾಗಿ ಕರಡಿ ಗೊರವರು ಕಂಡುಬರುತ್ತಾರೆ. ಪ್ರಮುಖವಾಗಿ

ಕರಡಿ ಗೊರವರು ತಲೆಗೆ ಕರಡಿಯ ಟೋಪಿಯನ್ನು ಹಾಕಿ, ಕೈಯಲ್ಲಿ ಕೊಳಲು ಒಡಿದು ಭಕ್ತರ ಮನೆಗೆ ಭಿಕ್ಷೆಯನ್ನು ಬೇಡುವುದು ಇವರ ಕಾಯಕವಾಗಿದೆ. ಹೆಚ್ಚಿನ ಸಂಖ್ಯೆಯಲ್ಲಿ ಮಂಡ್ಯ, ಮೈಸೂರು, ತುಮಕೂರು ಹಾಗೂ ಬೆಂಗಳೂರು ಪ್ರದೇಶಗಳಲ್ಲಿ ಕರಡಿ ಗೊರವರನ್ನು ಕಾಣಬಹುದು.

**ಚಾಟಿ ಗೊರವ**

ಚಾಟಿ ಗೊರವರನ್ನು ಹೆಚ್ಚಾಗಿ ಉತ್ತರ ಕರ್ನಾಟಕದ ಬಹುಭಾಗಗಳಲ್ಲಿ ಕಂಡುಬರುತ್ತಾರೆ. ಇವರು ಕರ್ನಾಟಕದ ಪ್ರಮುಖವಾದ ಮೈಲಾರನ ನೆಲೆಯಾದ ಹೂವಿನಹಡಗಲಿಯ ಮೈಲಾರದಲ್ಲಿ ಕಾಣಬಹುದು. ವಿಶೇಷವಾದ ದಿನಗಳಲ್ಲಿ ಅಂದರೆ ಜಾತ್ರೆಯ ಸಂದರ್ಭಗಳಲ್ಲಿ ಗೊರವ ತನ್ನ ಕಾಲುಗಳಿಗೆ ಚಾಟಿಯಿಂದ ಹೊಡೆದು ಕೊಳ್ಳುತ್ತಾನೆ. ಮೈಲಾರನು ತನ್ನಲ್ಲಿ ಲೀನವಾಗಿದ್ದನೆಂದು ನಂಬಿಕೊಂಡು ಚಾಟಿಯಿಂದ ಮೈಲಾರನ ದೇವಾಲಯದ ಮುಂದೆ ಹೊಡೆದುಕೊಳ್ಳುತ್ತಾರೆ. ಚಾಟಿ ಗೊರವರ ಮಧ್ಯೆ ಪೈಪೋಟಿಯಿಂದ ಕೂಡಿರುತ್ತದೆ. ವಿರುದ್ಧ ದಿಕ್ಕಿನಲ್ಲಿ ನಿಂತ ಚಾಟಿ ಗೊರವರು ಅನೇಕ ಗಂಟೆಗಳ ಕಾಲ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ.

**ಸರಪಳಿ ಗೊರವ**

ಸರಪಳಿಯನ್ನು ಹರಿಯುವ ಗೊರವರನ್ನು ಹೀಗೆ ಕರೆಯುತ್ತಾರೆ. ಸರಪಳಿಯ ಗೊರವರು ಮೈಲಾರನ ಜಾತ್ರೆಯ ಸಮಯದಲ್ಲಿ ಸರಪಳಿಯನ್ನು ತುಂಡರಿಸುವ ಸೇವೆಯನ್ನು ಮಾಡುತ್ತಾರೆ. ಮೈಲಾರನ ದೇವಾಲಯದ ಮುಂದೆ ಸರಪಳಿಯನ್ನು ಹರಿಯುವ ಪವಾಡ ನಡೆಯುತ್ತದೆ. ಸರಪಳಿಯನ್ನು ಒಂದು ಕಂಬಕ್ಕೆ ಕಟ್ಟಿರುತ್ತಾರೆ. ಸರಪಳಿಯನ್ನು ಮೈಲಾರನ ಹೆಸರಿನಲ್ಲಿ ಒಂದೇ ಸಲಕ್ಕೆ ತುಂಡು ಮಾಡುವ ಪವಾಡದ ನಡೆಯುತ್ತದೆ. ಸರಪಳಿಯ ಗೊರವರನ್ನು ಹೆಚ್ಚಾಗಿ ಉತ್ತರ ಕರ್ನಾಟಕದ ಮೈಲಾರನ ನೆಲೆಗಳಲ್ಲಿ ಕಾಣುತ್ತೇವೆ.

**ಕಾರಣಿಕದ ಗೊರವ**

ಮೈಲಾರನ ಭಕ್ತನಾದ ಕಾರಣಿಕ ಗೊರವನಿಗೆ ವಿಶೇಷವಾದ ಸ್ಥಾನಮಾನವಿದೆ. ಪ್ರಮುಖವಾಗಿ ಜಾತ್ರೆಯ ಸಂದರ್ಭದಲ್ಲಿ ದೈವವಾಣಿಯನ್ನು ಮುಂದೆ ಆಗುವ ಘಟನೆಗಳ ಬಗ್ಗೆ ಸ್ಪಷ್ಟವಾದ ಚಿತ್ರಣವನ್ನು ನೀಡುತ್ತದೆ ಎಂದು ಭಕ್ತರು ನಂಬಿಕೆಯಾಗಿದೆ. ಕಾರಣಿಕ ಗೊರವ ಕರ್ನಾಟಕದ ಬಹುಭಾಗದಲ್ಲಿ ಕಂಡುಬರುತ್ತಾನೆ. ಇವರ ಸೇವೆ ಕಾರಣಿಕ ನುಡಿಯುವುದು. ಬಿಲ್ಲಿನ ಮೇಲೆ ಏರಿ ನಿಂತು ಕಾರಣಿಕ ನುಡಿಯುವ ವಾಣಿಯಿಂದ ಪರಿಸರ ಹಾಗೂ ಸಮಾಜದಲ್ಲಿ ಆಗುವ ಏರುಪೇರುಗಳನ್ನು ಗುರುತಿಸಲಾಗುತ್ತದೆ. ಕಾರಣಿಕ

ಗೊರವ ವಿಶೇಷವಾಗಿ ಕಾರಣಿಕವನ್ನು ನುಡಿಯಲು ಅನೇಕ ನಿಯಮ ಹಾಗೂ ಕಟ್ಟುಪಾಡುಗಳನ್ನು ಪಾಲಿಸಬೇಕು.

**ಪಾರಿ ಗೊರವ**

ಪಾರಿ ಗೊರವನೆಂದರೆ ಮೈಲಾರ ದೇವಾಲಯದ ಮುಂದೆ ಸೈನಿಕನಂತೆ ಪಹರೆಯನ್ನು ಕಾಯುವುದು. ರಾತ್ರಿಯಿಡಿ ಮೈಲಾರನ ದೇವಾಲಯದ ಮುಂದೆ ಹಾಗೂ ಮೈಲಾರನ ಪೂಜಾ ವೇಳೆಗೆ ವಾದ್ಯವನ್ನು ನುಡಿಸುವುದು ಇವನ ಕಾಯಕವಾಗಿದೆ. ಉತ್ತರ ಕರ್ನಾಟಕದ ಭಾಗಗಳಲ್ಲಿ ಪಾರಿ ಗೊರವರನ್ನು ಕಾಣಬಹುದು.

**ಕಿನ್ನರಿ ಗೊರವ**

ಕಿನ್ನರಿ ಗೊರವರ ಕಾಯಕ ಮೈಲಾರ ದೇವಾಲಯಗಳ ಮುಂದೆ ವಾದ್ಯವನ್ನು ನುಡಿಸುವುದು. ಮುಖ್ಯವಾಗಿ ಮೈಲಾರ ಜಾತ್ರೆಯ ಸಮಯದಲ್ಲಿ ಹಾಗೂ ಉತ್ಸವದಲ್ಲಿ ಕಿನ್ನರಿ ವಾದ್ಯವನ್ನು ನುಡಿಸುವುದು ಕಾಣಬಹುದು.

**ಮದ್ದಲಿ ಗೊರವ**

ಮದ್ದಲಿ ಗೊರವನು ಸಹ ಮೈಲಾರನಿಗೆ ಮದ್ದಲಿ ಎಂಬ ವಾದ್ಯವನ್ನು ಮೈಲಾರ ಜಾತ್ರೆಯ ಸಂದರ್ಭದಲ್ಲಿ ನುಡಿಸುವುದು ಕಾಣುತ್ತೇವೆ. ಉತ್ತರ ಕರ್ನಾಟಕದ ಬಹುಭಾಗಗಳಲ್ಲಿ ಮದ್ದಲಿ ಗೊರವರನ್ನು ಕಾಣಬಹುದು.

**ಎಲೆಚಂಚಿ ಗೊರವಮ್ಮ**

ಚವರಿ ಗೊರವಮ್ಮ ಗೊರವರಂತೆ ಗೊರವಿಯರು ಸಹ ಮೈಲಾರನಿಗೆ ಸೇವೆಯನ್ನು ಮಾಡುತ್ತಾರೆ. ಎಲೆಚಂಚಿ ಗೊರವಮ್ಮ ಮೈಲಾರನಿಗೆ ಎಲೆ ಅಡಿಕೆ ನೀಡುವ ಕಾಯಕವನ್ನು ಮಾಡುತ್ತಾರೆ. ಚವರಿ ಗೊರವಮ್ಮ ಮೈಲಾರನಿಗೆ ಚವರಿ ಬೀಸುವ ಸೇವೆಯನ್ನು ಮಾಡುತ್ತಾರೆ. ವಿಶೇಷವಾಗಿ ಹೂವಿನಹಡಗಲಿಯ ಮೈಲಾರದಲ್ಲಿ ಕಂಡುಬರುತ್ತದೆ.

ಕರ್ನಾಟಕದ ಎಲ್ಲ ಭಾಗಗಳಲ್ಲಿ ಗೊರವರು ಕಂಡುಬರುತ್ತಾರೆ. ಪ್ರಮುಖವಾಗಿ ಉತ್ತರ ಕರ್ನಾಟಕದ ಬಹುಭಾಗಗಳ ಮೈಲಾರನ ನೆಲೆಗಳಲ್ಲಿ ಗೊರವರ ಸೇವೆ ವಿಶಿಷ್ಟವಾಗಿದೆ. ಮೈಲಾರನ ಆರಾಧಕರಾಗಿರುವ ಇವರು ತಮ್ಮ ತಮ್ಮ ಕಾಯಕವನ್ನು ಮಾಡುತ್ತ ನಂಬಿಕೆ ಆಚರಣೆಗಳನ್ನು ಮುಂದುವರೆದುಕೊಂಡು ಬಂದಿದ್ದಾರೆ.

**ದೇವನಾರಿಯರ ದೀಕ್ಷೆ**

ದೇವನಾರಿಯರ ದೀಕ್ಷೆಯನ್ನು ಸಾಮಾನ್ಯವಾಗಿ ಹೆಣ್ಣುಮಕ್ಕಳು ಹೆಚ್ಚಾಗಿ ಪಡೆಯುತ್ತಾರೆ. ಮೈಲಾರನಿಗೆ ಗಾಳಿ ಬೀಸುವ ಸೇವೆಯನ್ನು ಇವರು ಮಾಡುತ್ತಾರೆ. ಹರಕೆ ಹೊತ್ತ

ಸ್ತ್ರೀಯೂ ದೀಕ್ಷೆಯನ್ನು ಪಡೆದು ಚೌರಿ ಹಾಕುತ್ತ ತಮ್ಮ ಸೇವೆ ಸಲ್ಲಿಸುತ್ತಾರೆ. ಇವರ ವೇಷಭೂಷಣವೂ ಸಹ ಗೊರವನಂತೆ ಕಂಬಳಿಯ ನಿಲುವಂಗಿ, ಕೈಯಲ್ಲಿ ಕೂದಲಿನಿಂದ ತಯಾರಿಸಿದ ಚೌರಿ, ಹೆಗಲಿಗೆ ಘಂಟೆಯನ್ನು ಹೊಂದಿರುತ್ತಾರೆ. ದೇವನಾರಿಯರು ಸಹ ದೋಣಿಯನ್ನು ಹೊಂದಿರುತ್ತಾಳೆ. ಜಾತ್ರೆಗಳಲ್ಲಿ ಗೊರವರು ದೋಣಿಗೆ ತಮ್ಮ ಜೊತೆ ಮೈಲಾರನ ಆರಾಧನೆ ಮಾಡಲು ಕರೆಯುತ್ತಾರೆ. ಗೊರವರ ಜೊತೆ ಇವರ ಸಂಬಂಧವೂ ಸಹೋದರತ್ವದ ಭಾವನೆಯಿಂದ ಕೂಡಿರುತ್ತದೆ. ಜಾತ್ರೆಯ ಸಮಯದಲ್ಲಿ ಭಂಡಾರವನ್ನು ಒಬ್ಬರ ಮುಖಕ್ಕೆ ಇನ್ನೊಬ್ಬರು ಹಚ್ಚಿಕೊಳ್ಳುತ್ತಾ ಬಾಂಧವ್ಯಯುಳ್ಳವರಾಗಿ ಕಾಣಿಸಿಕೊಳ್ಳುತ್ತಾರೆ. ತಮಗೆ ಕಷ್ಟ-ಕಾರ್ಪಣ್ಯಗಳೇನಾದರೂ ಬಂದಾಗ ದೇವನಾರಿಯಾಗುತ್ತೇನೆಂದು ಹರಕೆ ಹೊತ್ತು ದೀಕ್ಷೆ ಪಡೆದು ಮೈಲಾರನಿಗೆ ಸೇವೆಯನ್ನು ಸಲ್ಲಿಸುತ್ತಾರೆ.

**ಒಡೆಯರು**

"ಶ್ರೀ ಮನ್‌ಮಹಾ ಕಪಿಲಮುನಿ ಕಲಿಮೈಲಾರ ಸಿಂಹಾಸನಕ್ಕಧಿಪತಿಗಳಾದ ಕರಿಯೆಳಿ ಭಂಡಾರಕ್ಕೆ ಕಾರಣಕರ್ತರಾದ ಆಚಾರ ವಿಚಾರಕ್ಕೆ ಅಗ್ರಗಣ್ಯರಾದ, ಆದಿಮೀನಗೊಂದಿಪುರ ವರಾಧೀಶ್ವರರಾದ, ಗುರು ಗೋಮುನಿ ಸಾಂಪ್ರದಾಯಕರಾದ, ವುಂಗ್ಲಾರ ಕ್ಷೇತ್ರ ತುಂಗಭದ್ರಾ ತೀರವಾಸಿಗಳಾದ, ನಿತ್ಯ ಕರ್ಮಾನುಷ್ಠಾನ ಹರಿಹರಧ್ಯಾನ ಪರಾಯಣರಾದ, ವ್ರತನೇಮನಿತ್ಯ ಚರಿತನಾದ, ಗೋಬ್ರಹ್ಮನ ಪ್ರತಿ ಪಾಲಕರಾದ, ನಯವಿನಯ ದಯಾದಾಕ್ಷಿಣ್ಯ ಪರೋಪಕಾರಿಗಳಾದ, ವಿಭೂತಿ ರುದ್ರಾಕ್ಷಮಾಲಿಕಾಭರಣ ಭೂಷಿತರಾದ, ತ್ರಿಕಾಲ ಶಿವಪೂಜಾ ದುರಂಧರರಾಧಾ, ನೀತಿಕಾರ್ಯ ಪ್ರವೀಣರಾದ, ನಿತ್ಯನ್ನದಾನ ವಿರೋಧಿಗಳಾದ, ಏಕವಾಕ್ಯ ಪ್ರತಿಪಾಲಕರಾದ, ಸತ್ಯ ಸದಾಚಾರ ನಿತ್ಯ ಪರಿಪೂರ್ಣರಾದ, ಅಖಂಡತಾ ಲಕ್ಷ್ಮೀ ಸದಾ ಪ್ರಸನ್ನರಾದ, ಮಹಾರಾಜಾಧಿರಾಜ ಪೂಜಿತ ರಾಜಮಾನ್ಯ ರಾಜಶ್ರೀ ಹಿರೇಮೈಲಾರದ... ಒಡೆಯರ ಸ್ವಾಮಿಗಳವರ.... ಎಂಬ ಒಕ್ಕಣೆಯನ್ನು ಈಗಲೂ ತಮ್ಮ ಪತ್ರ ವ್ಯವಹಾರದಲ್ಲಿ ಬಳಸುತ್ತಾರೆ.[೧೮]

ಪ್ರಸ್ತುತವಾಗಿ ಹೂವಿನಹಡಗಲಿಯ ಮೈಲಾರ ದೇವರಗುಡ್ಡ ಹಾಗೂ ಆಂಧ್ರಪ್ರದೇಶದ ಮೀನಗುಂದಿ ದೇವಾಲಯಗಳಲ್ಲಿ ಒಡೆಯರು ಎಂಬ ವಿಶೇಷ ಜಾತಿಯವರು ಆಡಳಿತವನ್ನು ನಡೆಸುತ್ತಾರೆ. ಪರಂಪರೆಯಿಂದಲೂ ಒಡೆಯರು ವಿಶೇಷವಾದ ಸ್ಥಾನಮಾನ, ಅಧಿಕಾರ ಹಾಗೂ ಆಡಳಿತವನ್ನು ನಡೆಸಿಕೊಂಡು ಬಂದಿದ್ದಾರೆ.

ಪೂಜಾರಿಗಳು, ಗೊರವರು, ಭಕ್ತರು ಒಡೆಯರನ್ನು ಸ್ವಾಮಿಗಳೆಂದು ಕರೆಯುತ್ತಾರೆ. ಗೊರವರಿಗೆ ಮತ್ತು ಭಕ್ತ ಸಮುದಾಯಕ್ಕೆ ಹೊರೆ ಹೊರಿಸುವ ವಿಧಿವಿಧಾನದಲ್ಲಿ ಪ್ರಮುಖವಾಗಿ ನೆರವೇರಿಸಿ ಕೊಡುವರು. ಹಿರೇ ಮೈಲಾರದ ದೇವಾಲಯಕ್ಕೆ ಈ ಮೊದಲು ಕಪ್ಪ

ಕಾಣಿಕೆಯನ್ನು ನೀಡುತ್ತಿದ್ದರೆಂದು ಅಲ್ಲಿನ ಗೊರವರು ಹೇಳುತ್ತಾರೆ. ಒಡೆಯರು ಹೋದ ಕಡೆಗಳಲ್ಲೆಲ್ಲ ಇಂದಿಗೂ ತಮ್ಮದೆ ಆದ ಗೌರವ ಮತ್ತು ಕಾಣಿಕೆಗಳನ್ನು ಉಡುಗೊರೆಗಳನ್ನು ಪಡೆಯುತ್ತಾರೆ.

ಮೀನಗುಂದಿಯ ಗವಿಯಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲಮುನಿಗೆ ಶಿವನು ಕನಸಿನಲ್ಲಿ ಬಂದು ತುಂಗಭದ್ರಾ ತೀರದ ಹಿರೇ ಮೈಲಾರದಲ್ಲಿರುವ ಕರಿಯಾಲದ ಬುಡದಲ್ಲಿ ತಾನು ಲಿಂಗರೂಪದಲ್ಲಿ ಉದ್ಭವಿಸುತ್ತಿರುವಂತೆಯೂ ಎಂದು ಕಪಿಲಮುನಿ ಅಲ್ಲಿಗೆ ಹೋಗಿ ಪೂಜಿಸಿಕೊಂಡ ಜಿಂಕೆಯಂತಲೂ ಆಜ್ಞೆ ಮಾಡಿದನಂತೆ, ಅದೇ ರೀತಿ ಕಪಿಲಮುನಿ ಹಿರೇ ಮೈಲಾರಕ್ಕೆ ಬಂದು ಆಲದಮರದ ಅಡಿಯ ಹುತ್ತದಲ್ಲಿ ಅಡಗಿದ್ದ ಶಿವಲಿಂಗವನ್ನು ಹೊರ ತೆಗೆದು ಪೂಜೆ ಮಾಡತೊಡಗಿದನಂತೆ. ಅವನ ತರುವಾಯ ಅವನ ತಮ್ಮ ಗೋಮುನಿ ಮತ್ತು ಅವರ ಸಂತತಿಯವರು ಹಿರೇ ಮೈಲಾರ ದೇವರಗುಡ್ಡಗಳಲ್ಲಿ ದೇವಾಲಯಗಳಲ್ಲಿ ಪೂಜಾರಿ ವ್ಯವಸ್ಥೆ ಮಾಡುತ್ತ ಬಂದಿದ್ದಾರೆ.[೧೯]

ಮೀನಗುಂದಿಯಿಂದ ಬಂದ ಒಡೆಯರು ಕರ್ನಾಟಕದ ಹೂವಿನಹಡಗಲಿಯ ಮೈಲಾರ ಹಾಗೂ ದೇವರಗುಡ್ಡಗಳಲ್ಲಿ ಆಡಳಿತವನ್ನು ನಡೆಸುತ್ತಾರೆ. ದೇವಾಲಯದ ಎಲ್ಲ ಅಧಿಕಾರಗಳು ಒಡೆಯರಿಗೆ ಸಲ್ಲುತ್ತದೆ. ಒಡೆಯರು ಜಾತ್ರೆಗಳ ಸಂದರ್ಭಗಳಲ್ಲಿ ವಿಶೇಷವಾದ ಅಧಿಕಾರಗಳನ್ನು ಹೊಂದಿರುತ್ತಾರೆ. ಒಡೆಯರ ಅಪ್ಪಣೆಯ ಮೂಲಕ ಕಾರಣಿಕದ ಗೊರವ ಕಾರಣಿಕವನ್ನು ನುಡಿಯುತ್ತಾನೆ. ಜಾತ್ರೆಯ ಸಮಯದಲ್ಲಿ ಒಡೆಯರು ಹಣೆಗೆ ಭಂಡಾರ, ವಿಭೂತಿಯನ್ನು ಧರಿಸಿ, ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಹಾಕಿಕೊಂಡಿರುತ್ತಾರೆ. ಮೆರವಣಿಗೆ ಮತ್ತು ಉತ್ಸವಗಳ ಸಂದರ್ಭಗಳಲ್ಲಿ ತಲೆಗೆ ಪೇಟ ಸುತ್ತಿ, ಕೋಟು ಶರ್ಟು ಧೋತ್ರ ಧರಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಅವರಿಗೆ ಕೊಡೆ, ಚವುರದ ಸೇವೆ ನಡೆಯುತ್ತದೆ. ದಾರಿಯುದ್ದಕ್ಕೂ ಮಡಿವಾಳರು ಇವರಿಗೆ ಹಡದಿ(ನಡೆಮಡಿ)ಯನ್ನು ಹಾಸುತ್ತಾರೆ ಹಾಗೂ ಕಂಚವೀರರು ಖಡ್ಗವನ್ನು ಹಿಡಿದಿರುತ್ತಾರೆ.

ಒಡೆಯರು ಮೈಲಾರ ಸಂಪ್ರದಾಯದ ಅವಿಭಾಜ್ಯ ಅಂಗವಾಗಿ ಕಂಡುಬರುತ್ತಾರೆ. ಹೂವಿನಹಡಗಲಿಯ ಮೈಲಾರನ ಹಾಗೂ ದೇವರಗುಡ್ಡದ ಮೈಲಾರಗಳಲ್ಲದೆ. ಉತ್ತರ ಕರ್ನಾಟಕದ ಪ್ರಮುಖವಾದ ಮೈಲಾರನ ನೆಲೆಗಳಲ್ಲಿ ಒಡೆಯರ ಕುಟುಂಬದವರು ಕಂಡು ಬರುತ್ತಾರೆ. ಕೆಲವು ಆಡಳಿತಾತ್ಮಕವಾದ ಪ್ರಾಮುಖ್ಯತೆ ಮೈಲಾರದಲ್ಲಿ ಇರುವಂತೆ ಇಲ್ಲವಾದರೂ ಸಂಪ್ರದಾಯದ ಮಹತ್ವ ಕಡಿಮೆಯಾಗಿಲ್ಲ. ಇಂದಿಗೂ ಮಂಗಸೂಳಿ, ಬೀದರ್‌ನ ಮೈಲಾರಪುರ, ಯಾದಗಿರಿಯ ಮೈಲಾರ, ಕಾರಿಮನಿಯ ಮೈಲಾರಗಳಲ್ಲಿ ವಿಶೇಷವಾಗಿ ಒಡೆಯರ ರೀತಿಯಲ್ಲಿ ಆಡಳಿತ ವರ್ಗವಿದೆ.

ಒಡೆಯರನ್ನು ಗಮನಿಸಿದಾಗ ಮೈಲಾರನ ಆರಾಧಕರಾದ ಇವರು ಹೊರಗಿನಿಂದ ಬಂದು ಸೇರಿಕೊಂಡರೆಂದು ಗೋಚರಿಸುತ್ತದೆ. ಇವರು ಆಂಧ್ರಪ್ರದೇಶದ ಮೀನಗುಂದಿಯ ಆದೋನಿ ಯವರಾಗಿದ್ದಾರೆ. ಒಡೆಯರು ವಂಶಪಾರಂಪರಿಕವಾಗಿ ಅಧಿಕಾರವನ್ನು ಹೊಂದಿ ಮೈಲಾರ ದೇವತೆಯ ಸೇವಕರಾಗಿ ವಿಶೇಷವಾದ ಸ್ಥಾನಮಾನವನ್ನು ಹೊಂದಿದ್ದಾರೆ. ಸರ್ಕಾರದ ಸ್ವಾಮ್ಯಕ್ಕೆ ಸೇರಿದ ಹೂವಿನಹಡಗಲಿ ಮೈಲಾರ ಹಾಗೂ ದೇವರಗುಡ್ಡದ ದೇವಾಲಯಗಳು ಇವರ ಆಡಳಿತಾರೂಢದಿಂದಲೇ ಮುಂದುವರೆಯುತ್ತ ಬಂದಿವೆ.

**ಗಣಚಾರಿಗಳು**

ಮೈಲಾರ ಪ್ರಮುಖ ಸ್ಥಳವಾದ ಮೈಲಾರದಲ್ಲಿ ಒಡೆಯರು ತಮ್ಮ ಪ್ರತಿನಿಧಿಗಳನ್ನು ನೇಮಿಸಿಕೊಂಡಿದ್ದಾರೆ. ಒಡೆಯರು ಎಲ್ಲಾ ದೀಕ್ಷ ವಿಧಿವಿಧಾನಗಳನ್ನು ಪಾಲಿಸಲು ಗಣಾಚಾರಿಗಳನ್ನು ನೇಮಿಸುತ್ತಾರೆ. ಗಣಾಚಾರಿಗಳನ್ನು ಒಡೆಯರ ನಂತರದ ಎಲ್ಲಾ ಅಧಿಕಾರಗಳನ್ನು ಹೊಂದಿರುವರು. ಮೈಲಾರದಲ್ಲಿ ನಡೆಯುವ ದೀಕ್ಷಾಧಿಗಳನ್ನು ನೀಡುವವರು. ಗಣಾಚಾರಿಗಳನ್ನು ಹೆಗ್ಗಪ್ಪನಿಗೆ ಭಕ್ತರು ಹೋಲಿಸುತ್ತಾರೆ. ಗಣ ಎಂದರೆ ಗುಂಪು, ಆಚಾರ್ಯ ಎಂದರೆ ಮಾರ್ಗದರ್ಶಕ.[೨೦] ಮಣಿ ಮಲ್ಲರೊಡನೆ ಯುದ್ದ ನಡೆದಾಗ ವಿಷ್ಣುವು ಹೆಗ್ಗಪ್ಪನಾಗಿ (ಗಣಾಚಾರಿಯಾಗಿ) ಏಳುಕೋಟಿ ದೇವತೆಗಳಿದ್ದ ಸೇವೆಯನ್ನು ಮುನ್ನೆಡೆಸಿದರು. ಅದಕ್ಕಾಗಿ ಪ್ರಸ್ತುತವಾಗಿ ಮಾರ್ಗದರ್ಶಿಯಾಗಿ ದೀಕ್ಷಾ ಗುರುಗಳಾಗಿ ಗಣಚಾರಿಗಳು ಅಧಿಕಾರವನ್ನು ನಿರ್ವಹಿಸುತ್ತಾರೆ.

ಗಣಾಚಾರಿಗಳಿಗೆ ಗೊರವರಿಗೆ ದೀಕ್ಷೆ ಹೊರಿಸುವ ಅಧಿಕಾರವಿರುತ್ತದೆ. ಮೈಲಾರನಿಗೆ ಸಲ್ಲುವ ಕಾಣಿಕೆಗಳನ್ನು ಸಂಗ್ರಹಿಸುವ ಜವಾಬ್ದಾರಿ ಇವರಿಗಿದೆ. ಒಡೆಯರು ಎಲ್ಲಾ ರೀತಿಯ ಅಧಿಕಾರಿಗಳನ್ನು ತಮ್ಮ ನಂತರದಲ್ಲಿ ಬರುವ ಗಣಾಚಾರಿಗಳಿಗೆ ನೀಡುತ್ತಾರೆ. ಗಣಾಚಾರಿಗಳು ಮೈಲಾರನ ಭಕ್ತರಾಗಿ, ಒಡೆಯರ ನಡುವಿನ ಸಂಬಂಧದಿಂದ ಭಕ್ತರಿಗೆ ತಮ್ಮದೇ ಸೇವೆಯನ್ನು ಸಲ್ಲಿಸುತ್ತಾರೆ.

**ಕಂಚಾವೀರರು**

ಕಂಚಾವೀರರು ಅಥವಾ ಕಂಚೇವೀರರು ಮೈಲಾರನ ಭಕ್ತರಲ್ಲಿ ಪ್ರಮುಖರಾದವರು. ಕಂಚಾವೀರರೂ ಗೊರವರೇ ಆಗಿದ್ದರು. ಗೊರವರಿಗೆ ಹಾಗೂ ಕಂಚಾವೀರರಿಗೆ ವ್ಯತ್ಯಾಸಗಳಿವೆ. ವೇಷಭೂಷಣದಲ್ಲಿ ಮಾಡುವ ಸೇವೆಗಳಲ್ಲಿ ಭಿನ್ನತೆಯನ್ನು ಕಾಣಬಹುದು.[೨೧] ಕರ್ನಾಟಕದ ತುಂಬೆಲ್ಲ ಹರಡಿಕೊಂಡಿರುವ ಮೈಲಾರ ದೇವಾಲಯಗಳಲ್ಲಿ ಕಂಚಾವೀರರನ್ನು ಕಾಣುತ್ತೇವೆ. ಇವರನ್ನು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ವೀರರು, ಈರರು, ಈರಗಾರರು, ಈರಯ್ಯಗಳು, ಕಾಸೆಯವರು, ಎಂದು ಕರೆಯುತ್ತಾರೆ. ಇವರು ವೀರಭದ್ರ ಪರಂಪರೆಯಲ್ಲಿ

ಸಹ ಕಂಚಾವೀರರನ್ನು ಕಾಣಬಹುದು. ಹಾಗೂ ಅಲ್ಲಿಯೂ ಅನೇಕ ಪವಾಡಗಳು ಸಹ ನಡೆಯುತ್ತವೆ. ಮೈಲಾರ ಪರಂಪರೆಯಲ್ಲಿ ಕಂಚಾವೀರರಿಗೆ ವಿಶೇಷವಾದ ಸ್ಥಾನಮಾನವಿದೆ. ಕಂಚಾವೀರರು ಹೂವಿನಹಡಗಲಿಯ ಮೈಲಾರ, ದೇವರಗುಡ್ಡ, ತೆಕ್ಕಲಕೋಟೆ, ಗುಡೂರು ಹನುಮಸಾಗರ, ಮೈಲಾರಪುರ, ಯಾದಗಿರಿ, ಹೊಸದುರ್ಗ ಮೈಲಾರಪಟ್ಟಣ ಹಾಗೂ ದೇವರಬೆಳಕೆರೆಯಲ್ಲಿ ಕಂಚಾವೀರರನ್ನು ಕಾಣಬಹುದು. ಈ ಕಂಚಾವೀರರು ದೇಹವನ್ನು ದಂಡಿಸುವ ಮೂಲಕ, ದೇಹಕ್ಕೆ ಶಸ್ತ್ರವನ್ನು ಚುಚ್ಚಿಕೊಂಡು ಮೈಲಾರನಿಗೆ ಸೇವೆಯನ್ನು ಮಾಡುತ್ತಾರೆ. ಕರ್ನಾಟಕದ ಬಹುಭಾಗದ ಮೈಲಾರನ ನೆಲೆಗಳಲ್ಲಿ ಮಾದಿಗ ಸಮುದಾಯದ ಕಂಚಾವೀರರಾಗಿದ್ದಾರೆ. ಹೂವಿನಹಡಗಲಿ ಹಾಗೂ ದೇವರಗುಡ್ಡಗಳಲ್ಲಿ ಮಾದಿಗ ಕಂಚಾವೀರರ ಸ್ಥಾನಗಳನ್ನು ಅಲಂಕರಿಸಿದ್ದಾರೆ. ತೆಕ್ಕಲಕೋಟೆಯ ಕಂಚಾವೀರರಾಗಿ ಬೇಡ ಸಮುದಾಯದ ಜನರು ಪಾಲಿಸಿದರೆ, ಇನ್ನೂ ಕೆಲವು ಕಡೆ ಕುರುಬ ಸಮುದಾಯದ ಜನರು ಸಹ ಕಂಚಾವೀರರಾಗಿದ್ದಾರೆ. ಕಂಚಾವೀರರು ಒಡೆಯರ ಆಜ್ಞೆಯ ಮೇರೆಗೆ ಪವಾಡಗಳನ್ನು ಶಸ್ತ್ರಗಳನ್ನು ಚುಚ್ಚು ಕೊಳ್ಳುವುದನ್ನು ಮಾಡುತ್ತಾರೆ.

ಮೈಲಾರನು ಮಲ್ಲಾಸುರನ ಜೊತೆ ಯುದ್ಧಮಾಡಿ ಸುಸ್ತಾದ, ಇನ್ನೇನು ಪೂರಾ ಸೋತು ಹೋಗುವ ಪರಿಸ್ಥಿತಿ ಬಂತು. ಹೆದರಿದ ಅವನು ಇಲ್ಲಿಂದ ಅಂದ್ರೆ ಈ ರಣಭೂಮಿಯಿಂದ ಓಡಿಹೋಗಿ ತುಂಗಭದ್ರಾ ನದಿಯಲ್ಲಿ ಮುಳುಗಿಬಿಟ್ಟ. ಅವನ ಮಗ ವೀರಭದ್ರ ಅದನ್ನು ನೋಡಿ ವೀರಾವೇಶದಿಂದ ಅಪ್ಪನ ಸಹಾಯಕ್ಕೆ ಹೋಗೋಣ ಎಂದು ರಪ್ಪನೆ ತನ್ನ ಜಟೆಯನ್ನು ನೆಲಕ್ಕೆ ಇರಿಸಿದಾಗ ಐದು ಜನರು ವೀರರು ಉತ್ಪತ್ತಿಯಾದರೂ. ಇವರನ್ನೇ ಈಗ ಕಂಚಾವೀರರೆಂದು ಕರೆಯುತ್ತಾರೆ. ಈ ಕಂಚಾವೀರರು ನೀರಲ್ಲಿ ಮುಳುಗಿದ್ದ ಮೈಲಾರನು ಎತ್ತಿ ತೆಗೆದರು. ಮೈಲಾರನು ಈ ಕಂಚಾವೀರರನ್ನು ನೋಡಿ ಹೆದರಿದ ಏಕೆಂದರೆ ಅಷ್ಟೇ ಭಯಾನಕರವಾಗಿದ್ದ ಕಂಚಾವೀರರು ಮೈಲಾರನಿಗೆ ಹೇಳಿದರು ನಾವು ವೀರಭದ್ರನ ವಂಶದವರು. ನೀವು ಏನು ಭಯಪಡಬೇಡಿ ಮಲ್ಲಾಸುರನನ್ನು ಕೊಂದು ತರುತ್ತೇವೆ ಎಂದರು. ಆದರೆ ಮಣಿ–ಮಲ್ಲಾಸುರ ಪಡೆದ ವರದ ಪ್ರಭಾವದಿಂದ ಇದು ಸಾಧ್ಯವಾಗಲಿಲ್ಲ ಈ ಕಾರಣದಿಂದ ಶಿವನೇ ಅವರನ್ನು ಕೊಲ್ಲಬೇಕಾಯಿತು.[೨೨]

ಇದೇ ತರಹ ಕಂಚಾವೀರರಿಗೆ ಸಂಬಂಧಿಸಿದಂತೆ ಇನ್ನೊಂದು ಕಥೆಯನ್ನು ಕಾಣಬಹುದು. ಶಿವನು ರಾಕ್ಷಸರ ವಧೆಗಾಗಿ ಭೂಲೋಕದಲ್ಲಿ ಮೈಲಾರನಾಗಿ ಅವತರಿಸಿ ಅವರನ್ನು ಹುಡುಕುತ್ತಾ ತುಂಗಭದ್ರಾ ನದಿಯ ತೀರಕ್ಕೆ ಬಂದು ಗೊರಪ್ಪನ ವೇಷಧರಿಸಿ ಅಲೆಯುತ್ತಿದ್ದನು. ಹೀಗೆ ಅಲೆಯುತ್ತಿರುವಾಗ ತುಂಗಭದ್ರಾ ನದಿಯ ದಂಡೆಯ ತನ್ನ ಬೆವರನ್ನು ವರೆಸಿ ನೆಲಕ್ಕೆಸೆದನು. ಆದರಿಂದ ಉದ್ಭವಗೊಂಡ ಐದು ಜನ ವೀರರು ನೀರಿನಲ್ಲಿ ಮುಳುಗಿ ಹಾಕಿ ಎದ್ದು ನಿಂತರು. ಈ ಐವರು ಉಗ್ರ ಸ್ವರೂಪದವರು. ಇವರನ್ನು ನೋಡಿದ

ಮೈಲಾರನು ಹೆದರಿದನು. ನಾವು ನಿನ್ನ ಮಕ್ಕಳು ರಾಕ್ಷಸ ವಧೆಗಾಗಿ ನಿನಗೆ ಸಹಾಯ ಮಾಡಲು ಬಂದಿದ್ದೇವೆ ಎಂದು ಹೇಳಿದರು. ಮೈಲಾರನು ಇವರ ಮಾತನ್ನು ನಂಬಲಿಲ್ಲ ನೀವು ನನ್ನ ಮಕ್ಕಳಿಗೆ ಆಗಿರುವುದು ನಿಜವೆಂದರೆ ನನ್ನ ಹೆಂಡತಿ ಗಂಗೆಯ ಮೊಲೆಯ ಎದೆಹಾಲು ನಿಮ್ಮ ಬಾಯಲ್ಲಿ ಬೀಳಲಿ ಎಂದು ಪರೀಕ್ಷಿಸಿದನು. ಗಂಗೆಮಾಳಮ್ಮ ಹಾಗೂ ಐದು ಜನರ ನಡುವೆ ಏಳು ಪದರ ಬಟ್ಟೆಯನ್ನು ಕಟ್ಟಿದರು. ಅವಳ ಎದೆಹಾಲು ಬಟ್ಟೆಯನ್ನು ದಾಟಿ ಬಂದು ಇವರ ಬಾಯಲ್ಲಿ ಬಿದ್ದವು. ಹೀಗೆ ಖಚಿತಪಡಿಸಿಕೊಂಡ ಮೈಲಾರ ಇವರೆಲ್ಲ ನನ್ನ ಮಕ್ಕಳೇ ಎಂದು ನಂಬಿ ಮಣಿ ಮಲ್ಲರನ್ನು ಸಂಹಾರ ಮಾಡಲು ಸಹಾಯವನ್ನು ಪಡೆದುಕೊಂಡ.[೨೩]

ಜನಪದರ ಕಥೆಯಲ್ಲಿ ಬರುವ ಮೈಲಾರನ ಪ್ರೇಮ ಪ್ರಕರಣದಲ್ಲಿ ಮಲ್ಲನಗೌಡರ ಮನೆಯ ಹೆಣ್ಣು ಕೋಮಲೆಯನ್ನು ಗೊರವ ಮೈಲಾರ ಪ್ರೀತಿಸುತ್ತಾನೆ. ಈ ಕಾರಣದಿಂದ ಅವನಿಗೆ ಕಷ್ಟಗಳು ಒದಗಿ ಬರುತ್ತವೆ. ಅವಳನ್ನು ಪಡೆಯಲು ಅವನು ಕುರಿ ಕಾಯುತ್ತಾನೆ. ಕುರಿಯ ಹಟ್ಟಿಯಲ್ಲಿ ಕೆಲಸ ಮಾಡುತ್ತಾನೆ. ಮೋಸದಿಂದ ಅವಳನ್ನು ಪಡೆಯುವ ಸಾಹಸಕ್ಕೆ ಕೈ ಹಾಕುತ್ತಾನೆ. ಇದರಿಂದ ಕೋಪಗೊಂಡ ಮಲ್ಲನಗೌಡ ಅವನನ್ನು ಹೊಡೆಯುತ್ತಾನೆ. ಕೊನೆಗೆ ಮೈಲಾರನ ಸಹಾಯಕ್ಕೆ ಅವಳ ತಂಗಿ ಎಲ್ಲಮ್ಮ ಬರುತ್ತಾಳೆ. ಮೈಲಾರ ಮಲ್ಲನ ಗೌಡನ ಸೊಕ್ಕು ಮುರಿದು ಕೋಮಲೆಯನ್ನು ಕದ್ದು ತಂದು ತನ್ನ ಬಳಿ ಇರಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಕಂಚಾವೀರರು ಮಲ್ಲನಗೌಡನ ನಾಶಕ್ಕೆ ಸಹಾಯ ಮಾಡುತ್ತಾರೆ. ಇಂದಿಗೂ ಸಹ ಜಾತ್ರೆಯ ಸಮಯದಲ್ಲಿ ಇದರ ಅಣುಕು ಪ್ರದರ್ಶನವನ್ನು ನಾವು ಕಾಣಬಹುದು. ಮೌನ ಗುಪ್ತ ಸವಾರಿಯ ನಂತರ ಗೊರವರು ಮಲ್ಲಸುರರನ್ನು ಕೊಂದವೆಂದು ಕುಣಿದಾಡುತ್ತಾರೆ. ಮಲ್ಲನಗೌಡನ ಸಾವಿನಗಾಗಿ ಹೊಲೆ ಮಾದಿಗರು ಸಮುದಾಯದವರು ಎದೆ ಬಡಿದುಕೊಂಡು ಅಳುತ್ತಾರೆ.[೨೪]

ಈ ರೀತಿಯಾಗಿ ಕಂಚಾವೀರರಿಗೆ ಸಂಬಂಧಿಸಿದಂತೆ ಅನೇಕ ಕಥೆಗಳಿವೆ. ಈ ಕಥೆಗಳಿಂದ ಇಂದಿನ ಪ್ರಸ್ತುತ ದಿನದಲ್ಲಿ ಕಂಚಾವೀರರು ಮಾಡುವ ಆಚರಣೆಗಳು ಸಾಕ್ಷಿಯಾಗಿವೆ. ಕಂಚಾವೀರರು ತಾವು ಮಾಡುವ ಆಚರಣೆಗಳನ್ನು ದೇವಾಲಯದ ಹಬ್ಬ-ಹರಿದಿನಗಳಲ್ಲಿ, ಜಾತ್ರೆಗಳಲ್ಲಿ ತಮ್ಮ ಪವಾಡಗಳನ್ನು ಮಾಡುತ್ತಾರೆ.

ಕಂಚಾವೀರರ ವೇಷಭೂಷಣವನ್ನು ಗಮನಿಸಿದಾಗ ಇವರು ಸಹ ಗೊರವರಂತೆ ವಿಶಿಷ್ಟವಾದ ವೇಷವನ್ನು ಧರಿಸುತ್ತಾರೆ. ಗೊರವರಂತೆ ಧೋತರ, ಅಂಗಿ, ತಲೆಗೆ ಪೇಟವನ್ನು ಕಟ್ಟಿಕೊಂಡಿರುತ್ತಾರೆ. ಹೆಗಲಿಗೆ ಶಾಲು, ಕೊರಳಲ್ಲಿ ರುದ್ರಾಕ್ಷಿ, ಕರಡಿಗೆ ಹಾಕಿರುತ್ತಾರೆ, ತಮ್ಮ ತೋಳಲ್ಲಿ ಯಾವಾಗಲೂ ಜೋಳಿಗೆ, ಕೈಗೆ ಕಂಕಣ ಕಟ್ಟಿಕೊಂಡು, ಖಡ್ಗ ಬೆತ್ತ ಮತ್ತು

ಶಸ್ತ್ರಗಳನ್ನು ಹಿಡಿದಿರುತ್ತಾರೆ. ಇನ್ನೊಂದು ಬಗೆಯ ಕಂಚಾವೀರರು ಸಹ ನಾವು ಗಮನಿಸಬಹುದು. ಇವರು ವೀರಗಾಸೆಯವರು ತಲೆಗೆ ಪೇಟವನ್ನು ಕಟ್ಟಿಕೊಳ್ಳದೆ ಉದ್ದವಾದ ಕೂದಲು ಬಿಟ್ಟಿರುತ್ತಾರೆ. ಕೊರಳಲ್ಲಿ ರುದ್ರಾಕ್ಷಿಮಾಲೆ, ಲಿಂಗದಕರಡಿ ಹಾಕಿಕೊಂಡು ಅದರ ಮೇಲೆ ಜಂಗನ್ನು ಇಳಿ ಬಿಟ್ಟಿರುತ್ತಾರೆ. ಸೊಂಟಕ್ಕೆ ವೀರಮುಖದ ಪಟ್ಟಿಗೆ ಕಟ್ಟಿಕೊಳ್ಳುವರು. ಇದರಲ್ಲಿ ಹಿತ್ತಾಳೆಯ ೩ ಮುಖಗಳಿರುವುದು. ಸೊಂಟದ ಸುತ್ತಲೂ ಕೂದಲಿನ ಕಂಚುಗಳನ್ನು ಇಳಿ ಬಿಟ್ಟು ಕೊಂಡಿರುತ್ತಾರೆ. ಹಣೆಗೆ ಭಂಡಾರ, ಗಂಧ, ವಿಭೂತಿ ಧರಿಸಿ, ಕೈಯಲ್ಲಿ ಯಾವಾಗಲೂ ಖಡ್ಗವನ್ನು ಹಿಡಿದಿರುತ್ತಾರೆ.

ಕಂಚಾವೀರರು ಈ ರೀತಿಯ ಲಕ್ಷಣಗಳನ್ನು ಕರ್ನಾಟಕದ ಬಹುಭಾಗದ ಮೈಲಾರನ ನೆಲೆಗಳಲ್ಲಿ ಗಮನಿಸಲಾಗಿದೆ. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿ ಕೊಂಡ ಹಾಗೂ ಪ್ರತ್ಯಕ್ಷದರ್ಶಿಯಾಗಿ ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ. ಕಂಚಾವೀರರು ತಾವು ಮಾಡುವ ಪವಾಡಗಳು ಉಗ್ರ ಸ್ವರೂಪವಾಗಿದ್ದು ಇಂದಿಗೂ ಸಹ ಈ ಆಚರಣೆಗಳು ನಡೆದುಕೊಂಡು ಬಂದಿವೆ. ಕಂಚಾವೀರರು ಮಾಡುವ ಪವಾಡಗಳನ್ನು ಈ ರೀತಿಯಾಗಿ ಚರ್ಚಿಸಲಾಗಿದೆ.

ಮೈಲಾರ ಕ್ಷೇತ್ರಗಳಲ್ಲಿ ನಡೆಯುವ ಜಾತ್ರೆ ಮತ್ತು ಉತ್ಸವಗಳಲ್ಲಿ ಮೈಲಾರನಿಗೆ ಸಂಬಂಧಿಸಿದ ಉಗ್ರ ಆಚರಣೆಗಳು ನಡೆಯುತ್ತವೆ. ಭಕ್ತರು ತಮ್ಮ ಭಕ್ತಿಯ ಪರಾಕಾಷ್ಠೆಯನ್ನು ವ್ಯಕ್ತಪಡಿಸುವ ಅನುಯಾಯಿಗಳು ತಾವೇ ತಮ್ಮ ದೇಹವನ್ನು ದಂಡಿಸಿಕೊಳ್ಳುತ್ತಾ ಹಿಂಸಾತ್ಮಕ ಉಗ್ರ ಆಚರಣೆಗಳನ್ನು ಯಾವ ಭಯವಿಲ್ಲದೆ ತೋರ್ಪಡಿಸುತ್ತಾರೆ. ಬಾಯಿ, ಬೆನ್ನು, ಕಾಲು ಮತ್ತು ನಾಲಿಗೆಗಳಲ್ಲಿ ಚೂಪಾದ ಶಸ್ತ್ರಗಳನ್ನು ಚುಚ್ಚಿಕೊಳ್ಳುವ ಇವರು ಇಂಥ ಕಾರ್ಯಾಚರಣೆಗಳ ಮೂಲಕ ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಈ ಎಲ್ಲ ಕ್ರಿಯೆಗಳು ದೇವರಿಗಾಗಿ ತೀರಿಸುವ ಹರಕೆಯ ಭಾಗಗಳಾಗಿರುತ್ತವೆ.[೨೫]

**ಕೈ ಪವಾಡ**

ಕಂಚಾವೀರರು ಕರ್ನಾಟಕದ ತುಂಬೆಲ್ಲ ಮೈಲಾರನ ಆರಾಧಕರಾಗಿದ್ದು ಹೂವಿನಹಡಗಲಿ ಮೈಲಾರ, ತೆಕ್ಕಲಕೋಟೆಯ ಮೈಲಾರ, ದೇವರಗುಡ್ಡ ಹಾಗೂ ಇನ್ನು ಹಲವಾರು ಮೈಲಾರನ ನೆಲೆಗಳಲ್ಲಿ ಪವಾಡಗಳನ್ನು ಮಾಡುತ್ತಾರೆ. ಕೈ ಪವಾಡವು ಮೈಲಾರನ ದೇವಾಲಯಗಳ ಮುಂದಿನ ಭಾಗದಲ್ಲಿ ಮಾಡುತ್ತಾರೆ. ಚೂಪಾದ ಆಯುಧಗಳನ್ನು ಕೈಗೆ ಚುಚ್ಚಿಕೊಳ್ಳುವ ಮೂಲಕ ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಚೂಪಾದ ದಬ್ಬಳದ ಆಕಾರದಲ್ಲಿರುವ ಆಯುಧವನ್ನು ಕೈಯ ಮುಂದಿನ ಭಾಗಕ್ಕೆ ಚುಚ್ಚಿಕೊಂಡು ಮೈಲಾರನಿಗೆ ಆರತಿಯನ್ನು ಮಾಡುತ್ತಾರೆ. ಈ ಪವಾಡ ಹಿರಿಯ ಕಂಚಾವೀರ ಹಾಗೂ ಭಕ್ತರ ಸಮ್ಮುಖದಲ್ಲಿ ನಡೆಯುವ ಆಚರಣೆಯಾಗಿದೆ.

**ಕಾಲು ಪವಾಡ**

ಕಂಚಾವೀರರು ಕಾಲು ಪವಾಡಗಳು ಉಗ್ರ ಸ್ವರೂಪದವು. ಈ ಪವಾಡಗಳಿಂದ ತಂತ್ರಜ್ಞಾನ ಹಾಗೂ ವಿಜ್ಞಾನಕ್ಕೆ ಅಚ್ಚರಿಯನ್ನು ಉಂಟುಮಾಡುವ ಕ್ರಿಯಾ ವಿಧಾನಗಳು. ಕಾಲು ಪವಾಡಗಳಲ್ಲಿ ಅನೇಕ ಸ್ವರೂಪದಲ್ಲಿವೆ. ಕಂಚಾವೀರರಲ್ಲಿ ಹಿರಿಯ ವ್ಯಕ್ತಿಯು ಕಿರಿಯ ಕಂಚಾವೀರನಿಗೆ ಈ ಪವಾಡವನ್ನು ಮಾಡಿಸುತ್ತಾರೆ. ಕಾಲಿನ ಮೀನುಖಂಡದಲ್ಲಿ ತಂತಿ ಆಕಾರದ ಹಗ್ಗವನ್ನು ತೋರಿಸಿ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಎಳೆಯುವುದು, ಕಾಲನ್ನು ನೆಲದ ಮೇಲಿರಿಸಿ ಕಬ್ಬಿಣದ ಚೂಪಾದ ಸಲಾಕೆಯನ್ನು ಕಾಲಿನ ಮೀನಖಂಡಕ್ಕೆ ಬಡೆಯುವುದು. ಕಾಲಿನ ಮೀನಖಂಡಕ್ಕೆ ಕಟ್ಟಿಗೆಯಿಂದ ಮಾಡಿದ ಚೂಪಾದ ಬಗಣಿ ಗೂಟವನ್ನು ಬಡೆಯುವುದು. ಈ ರೀತಿಯ ಉಗ್ರಸ್ವರೂಪದ ಆಚರಣೆಗಳು ಮೈಲಾರನ ಭಕ್ತರಾದ ಕಂಚಾವೀರರಲ್ಲಿ ರೂಪಗೊಂಡಿವೆ. ತಮಗೆ ನೋವು ವೇದನೆ ಆಗುತ್ತಿದ್ದರು ಕಂಚಾವೀರರು ಅದಾವುದನ್ನು ಲೆಕ್ಕಿಸದೆ ಈ ಪವಾಡಗಳನ್ನು ಮಾಡುತ್ತಾರೆ. ದೇವರಗುಡ್ಡ ಹಾಗೂ ಹೂವಿನಹಡಗಲಿಯ ಮೈಲಾರಗಳಲ್ಲಿ ಈ ಪವಾಡಗಳನ್ನು ಮಾಡುವವರು ಹೊಲೆಯ ಮತ್ತು ಮಾದಿಗ ಸಮುದಾಯದ ಭಕ್ತರು. ಒಡೆಯರ ಅಪ್ಪಣೆ ಹಾಗೂ ಅವರ ಸಮ್ಮುಖದಲ್ಲಿ ಈ ಪವಾಡಗಳು ನಡೆಯುತ್ತವೆ.

**ಸರಪಳಿ ಪವಾಡ**

ಸರಪಳಿ ಪವಾಡ ಸಾಮಾನ್ಯವಾಗಿ ಮೈಲಾರನ ಕ್ಷೇತ್ರಗಳಲ್ಲಿ ನಡೆಯುವ ಕ್ರಿಯಾ ವಿಧಾನವಾಗಿದೆ. ಮೈಲಾರನ ಜಾತ್ರೆ–ಉತ್ಸವಗಳಲ್ಲಿ ಸರಪಳಿ ಪವಾಡ ನಡೆಯುವ ತಾಣವಾಗಿದೆ. ಕಂಬಕ್ಕೆ ಕಟ್ಟಿರುವ ಕಬ್ಬಿಣದ ಸರಪಳಿಯನ್ನು ಜಗ್ಗಿ ಹರಿಯುವುದು. ಈ ಸರಪಳಿಯನ್ನು ಒಂದೇ ಬಾರಿಗೆ ಎಳೆದು ತುಂಡಾಗಿಸುವ ಶಕ್ತಿ ಕಂಚಾವೀರರಲ್ಲಿದೆ. ಸರಪಳಿ ಪವಾಡ ಮೈಲಾರ ಅಥವಾ ಗಂಗೆಮಾಳಮ್ಮನ ದೇವಾಲಯದ ಮುಂದಿನ ಭಾಗದಲ್ಲಿ ಮಾಡುತ್ತಾರೆ.

**ಕೆನ್ನೆ ಮತ್ತು ಕುತ್ತಿಗೆ ಪವಾಡ**

ಮೈಲಾರನ ಭಕ್ತರು ಹಾಗೂ ಕಂಚಾವೀರರು ಈ ಪವಾಡಗಳನ್ನು ಮಾಡುವರು. ಮುಖದ ಕೆನ್ನೆಗೆ ಬಾಯಿಯ ಒಳಗಿನಿಂದ ಚೂಪಾದ ತ್ರಿಶೂಲವನ್ನು ಒಂದು ಕಡೆಯಿಂದ ಇನ್ನೊಂದು ಕೆನ್ನೆಗೆ ಚುಚ್ಚಿಕೊಳ್ಳುವ ಮೂಲಕ ಬಾಯಿಬೀಗ ಪವಾಡವನ್ನು ಮಾಡುತ್ತಾರೆ. ಕುತ್ತಿಗೆಯ ಚರ್ಮವನ್ನು ಎಳೆದು, ಆ ಚರ್ಮಕ್ಕೆ ತ್ರಿಶೂಲವನ್ನು ತೋರಿಸುವ ಪವಾಡವಾಗಿದೆ. ಈ ಎರಡು ಪವಾಡಗಳು ಬಾಯಿ ಹಾಗೂ ಕುತ್ತಿಗೆಗೆ ಸಂಬಂಧಿಸಿದವುಗಳಾಗಿವೆ. ಮೈಲಾರನ ಕ್ಷೇತ್ರಗಳಲ್ಲಿ ಈ ಪವಾಡಗಳನ್ನು ಕಾಣಬಹುದು.

### ಕನ್ನೆ ಪವಾಡ

ಕನ್ನೆ ಪವಾಡವೆಂದರೆ ಮದುವೆಯಾಗದೇ ಉಳಿದಿರುವ ಯುವಕನಿಗೆ ಪವಾಡಕ್ಕೆ ಮದುವೆನ್ನೆ ಮಾಡುವುದು. ಕನ್ನೆ ಪವಾಡವಾಗದೇ ಮದುವೆಯಾಗುವಂತಿಲ್ಲ. ಅದಕ್ಕಾಗಿ ಈ ಪವಾಡ ಮಾಡಲು ಸುಮಾರು ೩೦ ವರ್ಷದ ಒಳಗಿನ ಯುವಕನನ್ನು ಸೇರಿಸಿ ಪವಾಡ ನಡೆಯುತ್ತದೆ. ಕನ್ನೆ ಪವಾಡ ನಡೆಯುವ ಮೂರು ದಿನದ ಮುಂಚೆ ಹುಡುಗನನ್ನು ಉಪವಾಸ ಮಾಡಿಸುತ್ತಾರೆ. ತಮ್ಮ ಮನೆಯಲ್ಲಿ ಶುದ್ಧಮಾಡಿ ಮೈಲಾರನಿಗೆ ಪೂಜೆ ಸಲ್ಲಿಸುತ್ತಾರೆ. ದೀಕ್ಷೆಯಾಗಬೇಕಾದ ಹುಡುಗನಿಗೆ ಗೊರವರ ವೇಷಭೂಷಣಗಳನ್ನು ನೀಡುತ್ತಾರೆ. ಜೋಳಿಗೆ, ಖಡ್ಗ, ಡಮರುಗ, ಕೊರಳಿಗೆ ರುದ್ರಾಕ್ಷಿ ಮಾಲೆ ಹಾಕುತ್ತಾರೆ. ಪವಾಡದ ಆಯುಧಗಳಿಂದ ಬಗಣಿಗೂಟ ಕಬ್ಬಿಣದ ಸಲಾಕೆಯನ್ನು ಇಟ್ಟು ಯುವಕನಿಗೆ ಕಂಕಣ ಕಟ್ಟುತ್ತಾರೆ. ಇದೆಲ್ಲಾ ಮುಗಿದ ಮೇಲೆ ಕಂಚಾವೀರರು ಮೇಳ-ವಾದ್ಯಗಳ ಮೂಲಕ ಯುವಕನನ್ನು ದೇವಸ್ಥಾನದ ಬಳಿ ಕರೆದುಕೊಂಡು ಹೋಗಲು ಬರುತ್ತಾರೆ. ಗಂಗೆಮಾಳಮ್ಮನ ಗುಡಿಯ ಎದುರುಗಡೆ ಆಸನದ ಮೇಲೆ ಕುಳಿತಿರುವ ಒಡೆಯರ ಮುಂದೆ ಪವಾಡದ ಸಾಧನಗಳನ್ನು ಇಡುತ್ತಾರೆ. ಹಿರಿಯ ವಯಸ್ಸಿನ ಕಂಚಾವೀರ ಶಸ್ತ್ರವನ್ನು ಯುವಕನ ಮೀನುಖಂಡ ಭಾಗಕ್ಕೆ ಶಸ್ತ್ರವನ್ನು ಹಾಕುತ್ತಾರೆ. ಈ ಶಸ್ತ್ರವನ್ನು ಯುವಕನಿಗೆ ಚುಚ್ಚಿದ ಮೇಲೆ ದೇವರಿಗೆ ವಂದಿಸುತ್ತಾರೆ. ಈ ಪವಾಡವು ಯುವಕನಿಗೆ ಹಾಕುವ ಮೂಲಕ ದೀಕ್ಷೆ ನೀಡಿದಂತಾಗುತ್ತದೆ. ಈ ಎಲ್ಲಾ ಆಚರಣೆಗಳು ದೇವರಗುಡ್ಡದಲ್ಲಿ ನಡೆಯುವ ಆಚರಣೆಯಾಗಿದೆ. ಕನ್ನೆ ಪವಾಡ ಪಡೆದ ಯುವಕ ಮುಂದುವರೆದು ನಂತರದಲ್ಲಿ ಬಗನಿಗೂಟದ ಪವಾಡ, ಮುಂಗೈ ಪವಾಡ ಹಾಗೂ ಶಸ್ತ್ರ ಪವಾಡವನ್ನು ಮಾಡಬಹುದಾಗಿದೆ.

### ಮುಳ್ಳಾವಿಗೆ ಏರುವುದು

ಮೈಲಾರ ದೇವತೆಗೆ ಸಲ್ಲಿಸುವ ಪ್ರಮುಖವಾದ ಆಚರಣೆಯಲ್ಲಿ ಒಂದಾಗಿದೆ. ಈ ನಂಬಿಕೆ-ಆಚರಣೆಯೂ ದೇವರಗುಡ್ಡ ಹಾಗೂ ಹೂವಿನಹಡಗಲಿಯ ಮೈಲಾರದಲ್ಲಿ ಕಂಡುಬರುತ್ತದೆ. ಈ ಆಚರಣೆಯನ್ನು ಮಾಡುವರು ಹೆಚ್ಚಾಗಿ ಮಹಿಳೆಯರು. ಮಹಿಳೆಯರು ಹರಕೆ ಹೊತ್ತಿರುವ ಹಿನ್ನೆಲೆಯಲ್ಲಿ ಈ ಆಚರಣೆಯನ್ನು ಮಾಡುತ್ತಾರೆ. ಕಟ್ಟಿಗೆಯಿಂದ ಮಾಡಿದ ಪಾದಕ್ಕೆ ಚೂಪಾದ ಕಬ್ಬಿಣದ ಬಳೆಗಳನ್ನು ಹಾಕಿರುತ್ತಾರೆ. ಇದರ ಮೇಲೆ ಮಹಿಳೆಯರು ನಿಂತು ಮೈಲಾರನಿಗೆ ಚಾಮರ ಬೀಸುತ್ತಾರೆ. ಈ ರೀತಿಯಾಗಿ ಮಳೆಗಳ ಮೇಲೆ ನಿಂತು ಚಾಮರ ಬೀಸುತ್ತೇನೆಂದು ಹರಕೆ ಕಟ್ಟಿಕೊಂಡಿರುತ್ತಾರೆ. ಅದಕ್ಕಾಗಿ ಕೆಲವು ನಿಮಿಷಗಳವರೆಗೂ ಈ ರೀತಿಯ ಆಚರಣೆಯನ್ನು ಮಾಡಲಾಗುತ್ತದೆ.

### ದೀವಟಿಗೆಯ ಸೇವೆ

ದೀವಟಿಗೆ ಸೇವೆಯು ಕರ್ನಾಟಕದ ಎಲ್ಲ ಸ್ಥಳಗಳಲ್ಲಿ ಸಾಮಾನ್ಯವಾಗಿ ನಡೆಯುತ್ತದೆ. ಪ್ರಮುಖವಾಗಿ ದೀವಟಿಗೆ ಸೇವೆಯು ಪಂಜಿನ ಸೇವೆ ಎಂದು ಸಹ ಕರೆಯುತ್ತಾರೆ. ಕಟ್ಟಿಗೆಗೆ ಬಟ್ಟೆಯನ್ನು ಸುತ್ತಿ ಅದಕ್ಕೆ ಎಣ್ಣೆಯನ್ನು ಹಾಕಿ ಬೆಂಕಿಯನ್ನು ಹಚ್ಚಿ ಮೈಲಾರನಿಗೆ ಬೆಳಗುತ್ತಾರೆ. ಇದು ಹೆಚ್ಚಾಗಿ ಮೈಲಾರ ಮತ್ತು ದೇವರಗುಡ್ಡಗಳಲ್ಲಿ ಕಂಡುಬರುತ್ತದೆ. ಕರ್ನಾಟಕದ ಬಹುಭಾಗಗಳಲ್ಲಿ ಮೈಲಾರನ ದೇವತೆಯ ಉತ್ಸವ ಹೊರಟಾಗ ಪಂಜನ್ನು ಮಡಿವಾಳ ಸಮುದಾಯದವರು ಈ ಸೇವೆ ಮಾಡುತ್ತಾರೆ.

### ಚಾಟಿ ಸೇವೆ

ಚಾಟಿಸೇವೆಯು ಹೂವಿನಹಡಗಲಿಯ ಮೈಲಾರ ಹಾಗೂ ದೇವರಗುಡ್ಡದಲ್ಲಿ ಕಂಡುಬರುತ್ತದೆ. ಈ ಸೇವೆಯನ್ನು ಹೆಚ್ಚಾಗಿ ಪುರುಷರು ಮಾಡುತ್ತಾರೆ. ಪುರುಷರು ಮೈಲಾರ ಮತ್ತು ಮಾಳಮ್ಮ ದೇವಾಲಯದ ಮುಂದೆ ನಿಂತು ತಮ್ಮ ಮೈಗೆ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ. ಚಾಟಿಯಿಂದ ಹೊಡೆದುಕೊಳ್ಳುತ್ತಾ ತಮ್ಮ ಹರಕೆಯನ್ನು ತೀರಿಸುತ್ತಾರೆ. ಕೆಲವು ಯುವಕರು ಗಂಟೆಗಟ್ಟಲೇ ಚಾಟಿಯಿಂದ ಹೊಡೆದುಕೊಳ್ಳುತ್ತಾರೆ. ಚಾಟಿಸೇವೆಯಿಂದ ತಾವು ಮಾಡಿದ ತಪ್ಪುಗಳು ಮೈಲಾರನು ಮನ್ನಿಸುತ್ತಾನೆ ಎಂಬ ನಂಬಿಕೆ ಭಕ್ತರಲ್ಲಿದೆ. ಹೆಚ್ಚಾಗಿ ಚಾಟಿಸೇವೆಯು ಕೆಲವು ವೇಳೆ ಪೈಪೋಟಿಯಿಂದ ಹೊಡೆದುಕೊಳ್ಳುವುದು ಉಂಟು. ಈ ಸೇವೆಯಲ್ಲಿ ಅಲ್ಲಿ ನೆರೆದ ಭಕ್ತ ಚಾಟಿಸೇವೆಯನ್ನು ಕುತೂಹಲವಾಗಿ ನೋಡುತ್ತಾರೆ. ಚಾಟಿಸೇವೆ ಎನ್ನುವುದು ಮೈಲಾರಿನಗೆ ನೀಡುವ ತಮ್ಮ ಹರಕೆಯನ್ನು ತೀರಿಸುವ ಸಲುವಾಗಿ ನಡೆಯುವ ನಂಬಿಕೆ ಆಚರಣೆಯಾಗಿದೆ.

### ಶಿಬಾರ ದಾಳಿಯವರು

ಶಿಬಾರ ದಾಳಿಯವರೆಂದರೆ ಗೊರವಮ್ಮನೆಂದು ಕರೆಯುತ್ತಾರೆ. ಇವರ ಸಂಖ್ಯೆ ಇತ್ತೀಚಿಗೆ ತೀರಾ ಕಡಿಮೆಯಾಗಿದೆ. ಮೈಲಾರನ ಸೇವೆಗೆ ಶಿಬಾರ ದಾಳಿಯವರನ್ನು ಬಿಡಲಾಗುತ್ತದೆ. ಶಿಬಾರ ದಾಳಿಯವರು ಜನಸಾಮಾನ್ಯರ ಕಣ್ಣಿಗೆ ಬೀಳುವುದಿಲ್ಲ, ಕಾರಣ ಇತರ ಗೊರವಮ್ಮಳಿಗೂ ಇವರಿಗೂ ವ್ಯತ್ಯಾಸ ಗಮನಕ್ಕೆ ಬರುವುದಿಲ್ಲ. ಸಾಮಾನ್ಯ ಅರ್ಥದಲ್ಲಿ ಇವರನ್ನು ದೇವದಾಸಿಯರೆಂದು ಕರೆಯಬಹುದಾಗಿದೆ. ದೇವರಗುಡ್ಡ ಕ್ಷೇತ್ರದ ಕಾರ್ಯದಲ್ಲಿ ದೇವಾಲಯದ ಮುಂದೆ ದೇವದಾಸಿಯು ಇರುವುದನ್ನು ಗಮನಿಸಲಾಗಿದೆ. ಶಿಬಾರದಾಳಿಯ ಸೇವೆಯನ್ನು ಕಟ್ಟಿಕೊಳ್ಳುವ ಹಿನ್ನೆಲೆಯಂದರೆ ತಮ್ಮ ಮನೆತನದಲ್ಲಿ ಪರಂಪರೆಯಿಂದ ಚವುರ ಅಥವಾ ಎಲೆ-ಚಂಚಿ ಹೊರೆ ಬಂದಿರುತ್ತದೆ. ಅದು ಮುಂದುವರೆದು ಶಿಬಾರ ದಾಳಿಯವರಾಗುತ್ತಾರೆ. ಇನ್ನು ಕೆಲವರು ನಮಗೆ ಮಕ್ಕಳಾದರೆ ಅಥವಾ ಕಾಯಿಲೆಯಿಂದ ಗುಣಮುಖರಾದರೆ,

ಇಂಥವರನ್ನು ಶಿಬಾರ ದಾಳಿಯವರಾಗಿ ಮಾಡಿಕೊಳ್ಳುತ್ತೇನೆಂದು ಹರಕೆ ಹೊತ್ತಿರುತ್ತಾರೆ. ಇನ್ನು ಕೆಲವು ಸಂದರ್ಭಗಳು ಹೊರೆಹೊರುವ ಸಂಭವಗಳು ಕಾಣಿಸುತ್ತವೆ. ವಿಪರೀತ ರೋಗ ಬಂದು ಬದುಕಿ ಉಳಿಯುವುದು ಅಸಾಧ್ಯವೆನಿಸಿದಾಗ ಅಂತವರು ಹೊರೆ ಹೊತ್ತು ದೇವರ ಮೊರೆ ಹೋಗುತ್ತಾರೆ. ಬಡತನ, ನಿರ್ಗತಿಕತೆ, ಅಥವಾ ವಿಪರೀತ ಕುರುಪದಿಂದಾಗಿ ಮದುವೆಯಾಗದೇ ಉಳಿಯುವ ಸಂಭವವಿದ್ದರೆ ಅಂತವರು ಶಿಬಾರ ದಾಳಿಯವರಾಗುತ್ತಾರೆ. ಚಿಕ್ಕ ವಯಸ್ಸಿಗೆ ಕಾರಣಾಂತರದಿಂದ ಗಂಡ ತೀರಿಕೊಂಡರೆ ಶಿಬಾರದಾಳಿಯವರಾಗಿ ತಾಳಿಯನ್ನು ಕಟ್ಟಿಕೊಳ್ಳುವ ರೂಢಿಯೂ ನಡೆದುಕೊಂಡು ಬಂದಿದೆ.

ಗೊರವರಂತೆ ಇವರಿಗೂ ದೀಕ್ಷೆ ಯಾಗುತ್ತದೆ. ದೀಕ್ಷೆಯನ್ನು ಪಡೆಯುವಾಗ ಇವರು ಮನೆಯನ್ನು ಸ್ವಚ್ಛತೆ ಮಾಡಿ, ಹಸಿರು ಸೀರೆ, ಹಸಿರು ರವಿಕೆ, ಹಸಿರು ಬಳೆ ಧರಿಸಿ ಕಂಕಣವನ್ನು ಕಟ್ಟಿಕೊಂಡು ದೇವಾಲಯಕ್ಕೆ ಬರುತ್ತಾರೆ. ಇವರು ಒಡೆಯರಿಂದ ಶಿಬಾರ ಆಕಾರದ ತಾಳಿಯನ್ನು ಕಟ್ಟಿಸಿಕೊಳ್ಳುತ್ತಾರೆ. ಆಗ ಮೈಲಾರನ ಸೇವೆಯನ್ನು ಮಾಡಲು ಸಿದ್ಧತೆ ಗೊಂಡಿರುವ ಗೊರವಿಯೆಂದು ತಿಳಿಯಲಾಗುತ್ತದೆ. ಶಿಬಾರದಾಳಿಯವರು ತಮ್ಮ ಜೀವನವಿಡಿ ಮೈಲಾರ ಸೇವೆ ಮಾಡಿಕೊಂಡು ನಿಷ್ಠೆಯಿಂದ ಭಕ್ತರ ಸೇವೆಯನ್ನು ಮಾಡಿಕೊಂಡು ಜೀವನ ಮಾಡುವ ಶಿಬಾರ ದಾಳಿಯವರನ್ನು ಈಗಲೂ ಕಾಣಬಹುದಾಗಿದೆ. ಪ್ರಮುಖ ಶಿಬಾರ ದಾಳಿಯವರ ಕರ್ತವ್ಯಗಳು ಮೈಲಾರ ಜಾತ್ರೆ ಉತ್ಸವಗಳಲ್ಲಿ ಭಾಗವಹಿಸಿ ದೋಣಿ ತುಂಬಿಸುವುದು, ಚವುರಸೇವೆ ಮಾಡುವುದು, ಲಗ್ನ, ಜವುಳ ಕಾರ್ಯದಲ್ಲಿ ಭಾಗವಹಿಸುವುದು. ಭಾನುವಾರ ಮತ್ತು ಗುರುವಾರ ಉಪವಾಸವಿದ್ದು, ಬ್ರಹ್ಮಚಾರಣಿಯಾಗಿ, ಭಿಕ್ಷೆಯನ್ನು ಬೇಡಿ ತಮ್ಮ ಜೀವನವನ್ನು ಸಾಗಿಸುವ ಶಿಬಾರ ದಾಳಿಯವರನ್ನು ಕಾಣಬಹುದಾಗಿದೆ.

ಮಹಾರಾಷ್ಟ್ರದಲ್ಲಿ ಶಿಬಾರ ದಾಳಿಯವರನ್ನು ಮುರಳಿಯರು ಎಂದು ಕರೆಯುತ್ತಾರೆ. ಮಹಾರಾಷ್ಟ್ರದಲ್ಲಿ ಇದೇ ತೆರನಾಗಿ ೯ ಕವಡೆಯನ್ನು ಸರವಾಗಿ ಮಾಡಿಕೊಂಡು ತಾಳಿಯಾಗಿ ದೇವಾಲಯ ಪೂಜಾರಿ ಕಟ್ಟುತ್ತಾನೆ. ಮಹಾರಾಷ್ಟ್ರದಲ್ಲಿ ಗೊರವಿಯರಲ್ಲಿ ಪ್ರಕಾರಗಳಿಲ್ಲ ಎಲ್ಲರೂ ಮುರಳಿಯರು. ಎಲ್ಲರೂ ದೇವದಾಸಿಗಳು ಎಂದು ನೇಗಿನಹಾಳರವರ ಅಭಿಪ್ರಾಯವಾಗಿದೆ. ಪ್ರಸ್ತುತವಾಗಿ ಕರ್ನಾಟಕ ಹಾಗೂ ಮಹಾರಾಷ್ಟ್ರಗಳಲ್ಲಿ ಸರಕಾರದ ಕಾಯ್ದೆಯಿಂದಾಗಿ ದೇವದಾಸಿ ಪದ್ಧತಿಯ ಮೇಲೆ ನಿರ್ಬಂಧ ಇರುವುದರಿಂದ ಶಿಬಾರದಾಳಿ ಧರಿಸುವುದು ಅಥವಾ ದೇವದಾಸಿಯಾಗುವುದು ನಿಂತುಹೋಗಿದೆ.

ಶಿಬಾರದಾಳಿಯವರು ಎಲ್ಲಾ ಜಾತಿಗಳಲ್ಲಿ ಕಂಡುಬರುತ್ತಾರೆ. ಹೆಚ್ಚಾಗಿ ಸಮಾಜದಲ್ಲಿ ಕೆಳವರ್ಗದ ಮಹಿಳೆಯರಲ್ಲಿ ಪ್ರಚಲಿತವಿದ್ದ ಪದ್ಧತಿ ಇದಾಗಿದೆ. ಬ್ರಾಹ್ಮಣ ಜಾತಿಯನ್ನು ಹೊರತುಪಡಿಸಿ ಎಲ್ಲಾ ಜಾತಿಗಳಲ್ಲಿ ಶಿಬಾರ ದಾಳಿಯವರು ಕಂಡುಬರುತ್ತಾರೆ.[೨]

ಶಿಬಾರದಾಳಿಯವರು ನಿಶ್ಚಿತವಾಗಿ ದೇವಾಲಯಕ್ಕೆ ನಡೆದುಕೊಳ್ಳುತ್ತಾರೆ. ವರ್ಷದಲ್ಲಿ ಕನಿಷ್ಠ ಐದರಿಂದ ಆರು ಬಾರಿ ದೇವಾಲಯಕ್ಕೆ ಹೋಗಿ ಬರುತ್ತಾರೆ. ದೇವಾಲಯದಲ್ಲಿ ನಡೆಯುವ ಜಾತ್ರೆ, ಉತ್ಸವ, ಭಕ್ತರ ಆಚರಣೆಗಳಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ.

ಪ್ರಮುಖವಾಗಿ ಶಿಬಾರದಾಳಿಯವರು ದೇವಾಲಯದ ಗರ್ಭಗೃಹಕ್ಕೆ ಹೋಗುವುದಿಲ್ಲ. ಹೊರಗಡೆ ನಿಂತು ದೇವರ ದರ್ಶನವನ್ನು ಪಡೆಯುತ್ತಾರೆ. ವಿಶೇಷವಾಗಿ ದೇವರ ಪಲ್ಲಕ್ಕಿ ಹೊರಟಾಗ ದೇವರಿಗೆ ಮುಟ್ಟಿ ನಮಸ್ಕರಿಸುತ್ತಾರೆ. ಮೈಲಾರ ದೇವರಿಗೆ ಯಾವುದೇ ಸಮುದಾಯ ಭೇದವಿಲ್ಲ. ಎಲ್ಲಾ ಸಮುದಾಯದವರು ಮುಕ್ತವಾದ ದೇವರ ದರ್ಶನ ಹಾಗೂ ಗೊರವ-ಗೊರವಿಯರಾಗಲು ಅವಕಾಶವಿದೆ. ಯಾವುದೇ ಸಮುದಾಯದವರು ದೋಣಿ ತುಂಬಿಸುವ ಸಮಯದಲ್ಲಿ ಯಾವ ಸಮುದಾಯ ಗೊರವ-ಗೊರವಿಯವರಾದರು ನಡೆಯುತ್ತದೆ. ಆ ಸಮಯದಲ್ಲಿ ನಿಮ್ಮ ಸಮುದಾಯ ಯಾವುದೆಂದು ಯಾರೂ ಕೇಳುವುದಿಲ್ಲ. ಇತ್ತೀಚಿನ ಸಮಾಜದ ಬದಲಾವಣೆಯಿಂದ ಹಾಗೂ ಮೈಲಾರ ದೇವತೆಯ ಆಚರಣೆಯಿಂದ ಸಮುದಾಯ ಪದ್ಧತಿ ದೂರವಾಗಲು ಮೈಲಾರನ ನಂಬಿಕೆ ಆಚರಣೆಗಳಲ್ಲಿ ಪರಿಪೂರ್ಣವಾಗಿದೆ.

**ಪೂಜಾರಿಗಳು**

ಭಕ್ತರು ಹಾಗೂ ದೇವರ ನಡುವಿನ ಕೊಂಡಿಯಾಗಿ ಕರ್ತವ್ಯ ನಿರ್ವಹಿಸುವರೇ ಪೂಜಾರಿಗಳು. ಕರ್ನಾಟಕದ ಮೈಲಾರ ಕ್ಷೇತ್ರಗಳ ನೆಲೆಗಳಲ್ಲಿ ವಿವಿಧ ಸಮುದಾಯಗಳ ಪೂಜಾರಿಗಳನ್ನು ಕಾಣಬಹುದು. ಬ್ರಾಹ್ಮಣ ಸಮುದಾಯದವರು ಮೈಲಾರ ದೇವತೆ ಪೂಜಾರಿಗಳಾಗಿದ್ದಾರೆ. ಇನ್ನು ಕೆಲವು ಸ್ಥಳಗಳಲ್ಲಿ ಲಿಂಗಾಯತ, ಕುರುಬ ಹಾಗೂ ಉಪ್ಪಾರ ಸಮುದಾಯದಲ್ಲಿ ಪೂಜಾರಿಗಳಿದ್ದಾರೆ. ಪೂಜಾರಿಗಳು ನಿತ್ಯ ಮುಂಜಾನೆ ಹಿಂದಿನ ದಿನದ ಹೂವನ್ನು ತೆಗೆದು, ಹೊಸ ಹೂವುನ್ನು ಹಾಕಿ, ಅಭಿಷೇಕ ಮಾಡಿ, ಮಂಗಳಾರತಿ ಮಾಡುತ್ತಾರೆ. ಬಂದ ಭಕ್ತರ ಹಣ್ಣು ಕಾಯಿ ನೈವೇದ್ಯ ಮಾಡುವ ಕಾರ್ಯ ಪೂಜಾರಿಗಳದು.

ಪೂಜಾರಿಗಳು ದೇವರ ಉತ್ಸವ ಹಾಗೂ ಜಾತ್ರೆ ಕಾರ್ಯಕ್ರಮದಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತಾರೆ. ಹೂವಿನಹಡಗಲಿ ಮೈಲಾರ, ದೇವರಗುಡ್ಡ, ಮೈಲಾರ ಪಟ್ಟಣ ಹಾಗೂ ಮೂಡಕುತೊರೆಗಳಲ್ಲಿ, ಬ್ರಾಹ್ಮಣ ಸಮುದಾಯ ಅರ್ಚಕರು ಕಂಡು ಬರುತ್ತಾರೆ. ತೆಕ್ಕಲಕೋಟೆಯ ಮೈಲಾರ ದೇವಾಲಯದಲ್ಲಿ ಬೇಡ ಸಮುದಾಯದವರು ಪೂಜಾರಿಗಳಾಗಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಬ್ರಾಹ್ಮಣ, ಲಿಂಗಾಯತ, ಪೂಜಾರಿಗಳು ಕಂಡುಬಂದರೆ, ಕುರುಬ, ಉಪ್ಪಾರ, ಬೇಡ ಹಾಗೂ ಇತರೆ ಸಮುದಾಯದ ಜನರು ಪೂಜಾರಿಗಳು ಕರ್ನಾಟಕ ತುಂಬೆಲ್ಲಾ ಕಂಡುಬರುತ್ತಾರೆ. ಮೈಲಾರ ದೇವತೆಗೆ ಸಮುದಾಯದ ಮೇರೆಯಿಲ್ಲ. ಯಾವ ಸಮುದಾಯದ ಜನರೂ ಸಹ ಪೂಜಾರಿಗಳಾಗಿ ಕಾಯಕ ನಿಷ್ಠೆಯನ್ನು

ಮಾಡಲು ಮೈಲಾರ ದೇವತೆಗೆ ಕಟ್ಟುಪಾಡುಗಳಿಲ್ಲ. ಸಮುದಾಯದ–ಭೇದವನ್ನು ಮೀರಿ ಮೈಲಾರನು ಕರ್ನಾಟಕದಲ್ಲಿ ರೂಪತಾಳಿರುವ ಪ್ರಸಿದ್ಧವಾದ ದೇವರರಾಗಿದ್ದಾನೆ.

**ಗುಗ್ಗರಿ ಹಬ್ಬ**

ಭರತ ಹುಣ್ಣಿಮೆಯ ಎರಡು ದಿನ ಮೊದಲೇ ಗುಗ್ಗರಿ ಹಬ್ಬ ನಡೆಯುತ್ತದೆ. ಗುಗ್ಗರಿ ಹಬ್ಬವು ಪ್ರಮುಖವಾಗಿ ಐದು ಕಾಳುಗಳನ್ನು ಸೇರಿಸಿ ತಯಾರಿಸುತ್ತಾರೆ. ಹುರಳಿ, ಅವರೆ, ಹೆಸರು, ಮಡಿಕೆ ಹಾಗೂ ಅಲಸಂದಿ ಕಾಳುಗಳನ್ನು ಕಾಡಿನ ಕುಳ್ಳಿನಿಂದ ಕುದಿಸುತ್ತಾರೆ. ತಯಾರಿಸಿದ ಗುಗ್ಗರಿಯನ್ನು ಮೊದಲು ಮೈಲಾರನ ವಾಹನವಾದ ಕುದುರೆಗೆ ನೀಡುತ್ತಾರೆ. ತದ ನಂತರದಲ್ಲಿ ದೋಣಿ ಸೇವೆಗೆ ಇದನ್ನು ನೀಡುವರು. ಕುದುರೆ ಮತ್ತು ದೋಣಿಗೆ ನೀಡಿದ ಮೇಲೆ ಭಕ್ತರೆಲ್ಲರಿಗೂ ನೀಡಿ ಮನೆಯ ಎಲ್ಲರೂ ಸೇವಿಸುವರು. ಕುದುರೆಗೆ ಪ್ರಿಯವಾದ ಆಹಾರ ಇದಾಗಿದೆ. ಹೂವಿನಹಡಗಲಿ ಮೈಲಾರಕ್ಕೆ ದೇವರಗುಡ್ಡದಿಂದ ಹಾಗೂ ಅಕ್ಕಪಕ್ಕದ ಗ್ರಾಮಗಳಿಂದಲೂ ಸಹ ಗುಗ್ಗರಿಯ ಸೇವೆ ನಡೆಯುತ್ತ ಮುಂದುವರಿಯುತ್ತಿದೆ.

ಗುಗ್ಗರಿ ಹಬ್ಬವು ದೈತ್ಯ ಪೂಜೆಯ ಒಂದು ಅಂಶವಾಗಿದೆ. ಈ ಪೂಜೆಯ ವಿಧಿವಿಧಾನಗಳು ನಡೆಯುವುದು ಹೂವಿನಹಡಗಲಿಯ ಡೆಂಕನಮರಡಿಯಲ್ಲಿ. ಮೌಖಿಕವಾದ ಆಕರಗಳ ಪ್ರಕಾರ ಮಲ್ಲಾಸುರ ಹಾಗೂ ಮೈಲಾರನು ಕಾದಾಡಿದ ಭೂಮಿ. ಕಥೆಯಲ್ಲಿ ಮೈಲಾರಲಿಂಗನೆ ಮಲ್ಲಾಸುರ ಸೈನ್ಯವಿರುವ ಕಡೆ ಕತ್ತಲೆಯಲ್ಲಿ ಸಾಗಿ ಆಕ್ರಮಣ ಮಾಡುವ ಪ್ರಸ್ತಾವನೆಯಿದೆ. ಅಂದರೆ ಡೆಂಕನ ಮರಡಿ ರಾಕ್ಷಸರ ವಾಸಸ್ಥಾನ. ಶಿವನಿಂದ ಹತನಾದ ಮಣಿಕನೆಂಬ ದೈತ್ಯನು ತನ್ನನ್ನು ಕುದುರೆಯ ರೂಪದಲ್ಲಿ ಸ್ವೀಕರಿಸುವಂತೆ ಕೇಳಿದಾಗ ಮೈಲಾರ ಅದಕ್ಕೆ ಒಪ್ಪಿಕೊಳ್ಳುತ್ತಾನೆ. ಗುಗ್ಗರಿಯನ್ನು ಕುದುರೆಗೆ ಅರ್ಪಿಸಿ ಪೂಜೆಯನ್ನು ಮಾಡುವುದು ಪ್ರಧಾನವೆನ್ನಬಹುದು. ಆದರೆ ಭಕ್ತರ ನಂಬಿಕೆಯಂತೆ ಮೈಲಾರನು ದೇವಾಲಯದಿಂದ ಡೆಂಕನ ಮರಡಿಗೆ ಬಂದಿರುತ್ತಾನೆ. ಹಾಗಾಗಿ ಅವನಿಗೆ ದೇವಾಲಯದಲ್ಲಿ ಗುಗ್ಗರಿ ಪೂಜೆ ಸಲ್ಲಿಸುವುದಿಲ್ಲ. ಡೆಂಕನಮರಡಿಯಲ್ಲಿ ವಿವಿಧ ಆಚರಣೆಗಳೊಂದಿಗೆ ಪೂಜೆಯನ್ನು ಕಾಣಬಹುದಾಗಿದೆ.

**ಮರಡಿ ಕಿಚಡಿ ಹಬ್ಬ**

ರಥಸಪ್ತಮಿಯಿಂದ ೫ನೇ ದಿನ ಹೂವಿನಹಡಗಲಿಯಲ್ಲಿ, ಡೆಂಕನಮರಡಿಯಲ್ಲಿ ಈ ಪೂಜೆಯನ್ನು ಮಾಡಲಾಗುತ್ತದೆ. ಜೋಳದ ಅನ್ನವನ್ನು ಮಾಡಿ ಅದಕ್ಕೆ ಮೊಸರು, ಉಪ್ಪು ಸೇರಿಸಿ ಮೈಲಾರನಿಗೆ ಎಡೆ ಹಾಕಲಾಗುತ್ತದೆ. ಮೊದಲು ಮೈಲಾರನಿಗೆ ನೈವೇದ್ಯ ಮಾಡಿ ನಂತರದಲ್ಲಿ ಎಲ್ಲಾ ಭಕ್ತರು ದೋಣಿಗಳಿಗೆ ನೀಡುತ್ತಾರೆ ಇದಾದ ತರುವಾಯ ಎಲ್ಲಾ ಭಕ್ತರು. ಈ ಆಹಾರವನ್ನು ಸೇವನೆ ಮಾಡುತ್ತಾರೆ.

## ಮೌನ ಗುಪ್ತ ಸವಾರಿ

ಪುರಾಣದ ಪ್ರಕಾರ ಮಲ್ಲಾಸುರ ರಾಕ್ಷಸರನ್ನು ಮೈಲಾರನು ಏಳುಕೋಟಿ ದೇಗುಲಗಳ ಸಹಾಯದಿಂದ ಕೊಂದ ವಿವರಗಳನ್ನು ನೀಡುತ್ತದೆ. ಈ ಆಚರಣೆಯ ಅಣಕು ಹಾಗೂ ಅಭಿನಯವನ್ನು ಮೌನ ಗುಪ್ತ ಸವಾರಿ ಆಚರಣೆಗಳಲ್ಲಿ ಕಾಣಬಹುದು. ರಥಸಪ್ತಮಿಯ ನಂತರದ ೧೧ ದಿನದ ಬೆಳಗಿನ ಜಾವ ೫ ಗಂಟೆಗೆ ಮೈಲಾರಲಿಂಗನ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಡೆಂಕನಮರಡಿಗೆ ದೇವಾಲಯದಿಂದ ಹೋಗುತ್ತದೆ. ಈ ಮೆರವಣಿಗೆಯಲ್ಲಿ ಮೈಲಾರ, ಗಂಗೆಮಾಳಮ್ಮ, ಹೆಗ್ಗಡೆ, ಮೂರ್ತಿಗಳನ್ನು ಪಲ್ಲಕ್ಕಿಯಲ್ಲಿಟ್ಟು ಸಾಗುತ್ತದೆ. ಒಡೆಯರು ಕುದುರೆಯ ಮೇಲೆ ಕುಳಿತು ಮೆರವಣಿಗೆಯ ಮುಂದೆ ಸಾಗುತ್ತಾರೆ. ಈ ಮೌನ ಸವಾರಿ ಬೆಳಗಿನ ಜಾವ ನಡೆಯುತ್ತದೆ. ಭಕ್ತರು ಕೈಯಲ್ಲಿ ಬೆಳಕಿನ ಪಂಜು ಹಿಡಿದು ಸಾಗುವ ಮೆರವಣಿಗೆಯಲ್ಲಿ ಸಾವಿರಾರು ಜನರನ್ನು ಕಾಣಬಹುದು. ಆದರೆ ಜನಸಂದಣಿ ಇದ್ದರೂ ಯಾವುದೇ ಶಬ್ಧ ಅಥವಾ ಮಾತುಗಳು ಕಂಡುಬರುವುದಿಲ್ಲ. ಮೈಲಾರನು ತನ್ನ ಪ್ರಧಾನಿಯಾದ ಹೆಗ್ಗಡೆ ಸೈನ್ಯಾಧಿಪತಿಯ ನೆರವಿನಿಂದ ರಾಕ್ಷಸ ಇದ್ದ ಸ್ಥಳಕ್ಕೆ ಹೋಗಿ ಅವರನ್ನು ಕೊಂದ ಅನುಕರಣೆಯ ಭಾಗವಾಗಿ ಮೌನ ಗುಪ್ತ ಸವಾರಿಯನ್ನು ಮಾಡಲಾಗುತ್ತದೆ.

ಡೆಂಕನಮರಡಿಗೆ ತಲುಪಿದಾಗ ಸಾಂಪ್ರದಾಯಿಕವಾಗಿ ಮಲ್ಲಾಸುರರನ್ನು ಕೊಲ್ಲಲು ಬಿಲ್ಲು ಹಾರಿಸುತ್ತಿದ್ದರು. ಆದರ ಬದಲಾದ ಆಚರಣೆಯೊಂದಿಗೆ ಮೂರು ತುಪಾಕಿ ಗುಂಡುಗಳನ್ನು ಹೊಡೆಯುತ್ತಾರೆ. ಈ ಆಚರಣೆ ಸಾಂಕೇತಿಕವಾಗಿ ಮಾಡುವ ಕ್ರಿಯೆಯಾಗಿದೆ. ತುಪಾಕಿ ಗುಂಡು ಹಾರಿಸಿದ ಕೂಡಲೇ ಮೌನವಾಗಿದ್ದ ಜನರು ಕೇಕೆ ಹಾಕುತ್ತಾ ಕುಣಿಯುತ್ತಾರೆ. ಏಳು ಕೋಟಿ, ಏಳು ಕೋಟಿ ಚಾಂಗೊಬಲೋ ಎಂದು ಕೂಗುತ್ತಾ ಶಿಬಾರದ ಸುತ್ತ ಓಡುತ್ತಾರೆ. ಮಲ್ಲಾಸುರರನ್ನು ಕೊಂದು ವಿಜಯೋತ್ಸವದೊಂದಿಗೆ ಅಲ್ಲಿ ನೆರೆದ ಜನರು ಡೆಂಕನಮರಡಿಗೆ ಓಡುತ್ತಾರೆ. ಗೊರವ-ಗೊರವಿಯರು ಅಲ್ಲಿ ನೆರೆದ ಸಾವಿರಾರು ಭಕ್ತರು ಸಂತಸದಿಂದ ನೋಡುತ್ತಾರೆ. ಮೌನ ಗುಪ್ತ ಸವಾರಿ ನಡೆದ ತರುವಾಯ ಕಂಚಾವೀರರು ಒಡಬು ಹೇಳುತ್ತಾರೆ. ಶಿಬಾರಕ್ಕೆ ಪೂಜೆ ನಡೆಸುತ್ತಾರೆ. ವಾದ್ಯ, ಗೋಷ್ಠಿ, ಕುಣಿತವನ್ನು ಗೊರವರು ಮಾಡುತ್ತಾರೆ. ಒಂಬತ್ತು ದಿನ ಅಲ್ಲಿ ನೆಲೆಸಿರುವ ಕಾರಣಿಕ ಗೊರವಪ್ಪನಿಗೆ ಒಡೆಯರು ಆಶೀರ್ವದಿಸುತ್ತಾರೆ. ಈ ಆಚರಣೆಯನ್ನು ನೋಡಲು ಬಂದ ಭಕ್ತರು ಸಂಜೆಯವರೆಗೂ ಡೆಂಕನಮರಡಿ ಇದ್ದು ರಾತ್ರಿ ವೇಳೆಗೆ ಮನೆಗೆ ಸೇರುತ್ತಾರೆ.

## ಕುದುರೆ ಹಬ್ಬ

ಕುದುರೆ ಹಬ್ಬವನ್ನು ಶೀಗಿ ಹುಣ್ಣಿಮೆಯ ಏಳನೇ ದಿನದ ನಂತರ ಆಚರಿಸುವರು. ಕುದುರೆ ಹಬ್ಬ ಉತ್ಸವ ಹಿಂದೆ ಪೌರಾಣಿಕವಾದ ಕಥೆಯಿದೆ. ಮೈಲಾರನು ಹುಲಿಯ

ಬೇಟೆಗೆಂದು ಹೊರಡುವ ಸಂದರ್ಭವನ್ನು ಹೇಳುವುದಾದರು, ಜನಪದರ ನಂಬಿಕೆಯಂತೆ ಕುರುಬತ್ತಿಯ ಮನೆಗೆ ಹೋಗುವುದು ಎಂದು ಭಕ್ತರ ನಂಬಿಕೆಯಾಗಿದೆ. ಕುದುರೆ ಹಬ್ಬ ನಡೆಯುವ ದಿನ ಬೇಟೆಗಾಗಿ ಸಿದ್ಧನಾದ ಮೈಲಾರನ ಉತ್ಸವಮೂರ್ತಿಯನ್ನು ಕಟ್ಟಿಗೆಯ ಕುದುರೆಯ ಮೇಲೆ ಬಿಗಿದು ಕಟ್ಟುವರು. ಈ ಕುದುರೆಯನ್ನು ಚಿಕ್ಕ ಬಂಡಿಯ ಮೇಲೆ ಬಿಗಿಯಾಗಿ ಕಟ್ಟುವರು. ಈ ಬಂಡಿಯನ್ನು ಎಳೆಯುತ್ತ ಊರ ಹೊರಗಿನ ಶಿಬಾರಕ್ಕೆ ಹೋಗಿ ಅಲ್ಲಿ ಕುರುಬತ್ತೆವ್ವ ಸ್ಥಾನಕ್ಕೆ ಬಂಡಿಯಲ್ಲಿ ಹೋಗುವರು. ಹೋಗುವ ಸಮಯದಲ್ಲಿ ಉತ್ಸವವನ್ನು ಭಕ್ತರು ಓಡುತ್ತ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ಕುರಬತ್ತೆವ್ವನಿಗೆ ಪೂಜೆ ಸಲ್ಲಿಸುತ್ತಾರೆ. ಸಾಂಕೇತಿಕವಾಗಿ ಮೈಲಾರನು ಬೇಟೆಗೆ ಬಂದ ಸಂದರ್ಭವನ್ನು ಸೂಚಿಸುತ್ತದೆ. ಒಡೆಯರು ಮೂರು ಬಾಣಗಳನ್ನು ಬಿಟ್ಟು, ಹುಲಿ ಬೇಟೆಯನ್ನು ಆಡಿದರು ಎಂದು ಸಂಕೇತಿಸುತ್ತದೆ.

ಸೋಮಲಿಂಗ ದೇವಾಲಯದ ಪಲ್ಲಕ್ಕಿಯು ಕುರಬತ್ತಿ ದೇವಾಲಯದ ಸಮೀಪ ಬರುತ್ತದೆ. ಮೈಲಾರನು ಕುರುಬತ್ತೆವ್ವನ ಬಳಿ ಬಂದಾಗ ಸೋಮಲಿಂಗ ಇದನ್ನು ನೋಡುತ್ತಾನೆ. ಈ ವಿಷಯವನ್ನು ಗಂಗೆಮಾಳಮ್ಮನಿಗೆ ಹೇಳಬೇಡ ಎಂದು ಮಲ್ಲಯ್ಯ ಪ್ರಮಾಣವನ್ನು ನೀಡುತ್ತಾನೆ. ಪ್ರಮಾಣವನ್ನು ಪಡೆದ ಸೋಮಲಿಂಗ ಹೊರಟುಹೋಗುತ್ತಾನೆ.

ಇದೇ ಘಟನೆಯ ನೆನಪಿಗಾಗಿ ಈಗಲೂ ಸಹ ಸೋಮಲಿಂಗನ ಪಲ್ಲಕ್ಕಿಯೂ ಕುರುಬತ್ತೆವ್ವ ಗುಡಿಯ ಬಳಿ ಬರದೆ ದೂರದಿಂದಲೇ ಹಣವನ್ನು ಪಡೆದು ಹೊರಟು ಹೋಗುತ್ತದೆ. ಮೈಲಾರನ ಉತ್ಸವದ ಪಲ್ಲಕ್ಕಿಯು ಮರಳಿ ದೇವಾಲಯದ ಬಳಿ ಬರುತ್ತದೆ. ಅದು ಹೇಗೋ ಕುರುಬತ್ತೆವ್ವನನ್ನು ನೋಡಲು ಹೋದ ಮೈಲಾರನ ವಿಷಯ ಹೆಂಡತಿಯಾದ ಗಂಗೆಮಾಳಮ್ಮನಿಗೆ ತಿಳಿಯುತ್ತದೆ. ಸೋಮಲಿಂಗನು ಹೇಳಿದ್ದಾನೆಂದು ಮೈಲಾರ ಭಾವಿಸಿಕೊಂಡು, ಈಗಲೂ ಸೋಮಲಿಂಗನ ಸಂಪ್ರದಾಯ ಪಾಲಿಸುವರು. ಮೈಲಾರನ ಯಾವುದೇ ಕಾರಣಿಕದಲ್ಲಿ ಭಾಗವಹಿಸುವುದಿಲ್ಲ.

ವಿಷಯ ತಿಳಿದ ಗಂಗೆಮಾಳಮ್ಮ ಮೈಲಾರನ ಮೇಲೆ ಕೋಪಗೊಂಡು, ಮನೆಯ ಏಳು ಬಾಗಿಲುಗಳನ್ನು ಮುಚ್ಚಿ ಬಿಡುವಳು. ಎಷ್ಟೇ ವಿನಂತಿಸಿಕೊಂಡರು ಮೈಲಾರನಿಗೆ ಬಾಗಿಲು ತೆಗೆಯುವುದಿಲ್ಲ. ತೊಡೆಯ ಮೇಲೆ ಚಿಕ್ಕಯ್ಯ, ಜುಂಜಯ್ಯ ಮಲಗಿದ್ದಾರೆ ಎಂದು ಕೋಪವನ್ನು ವ್ಯಕ್ತಪಡಿಸುತ್ತಾಳೆ. ಕುರುಬತ್ತೆವ್ವನ ಮನೆಗೆ ಹೋಗಿ ಬಂದಿದ್ದಕ್ಕಾಗಿ ತಪ್ಪೊಪ್ಪಿಗೆ ಕೇಳಬೇಕು ಆಗ ಮಾತ್ರ ಬಾಗಿಲು ತೆಗೆಯುತ್ತೇನೆಂದು ಗಂಗೆಮಾಳಮ್ಮ ಹೇಳುತ್ತಾಳೆ. ಉತ್ಸವಕ್ಕೆ ಹೋದ ಭಕ್ತರೆಲ್ಲ ಮಾಳಮ್ಮನ ಮೂರ್ತಿಯ ಮುಂದೆ ನಿಂತು, ತಪ್ಪಾಯಿತೆಂದು ಕೇಳುತ್ತಾರೆ. ಆಗ ದೇವರ ಉತ್ಸವ ಮೂರ್ತಿಗೆ ಹೋಗುವ ಅವಕಾಶ ನೀಡಲಾಗುತ್ತದೆ.

ನಂತರ ಈ ಉತ್ಸವಮೂರ್ತಿಗಳಿಗೆ ದೇವಾಲಯದಲ್ಲಿ ಪೂಜೆಯ ವಿಧಿವಿಧಾನಗಳನ್ನು ಮಾಡುತ್ತಾರೆ.

**ಭಂಡಾರ ಭಟ್ಟಿ**

ಭಂಡಾರ ಭಟ್ಟಿ ಎಂಬುದು ಮೈಲಾರ ದೇವಾಲಯದ ವಿಶೇಷವಾದ ಆಚರಣೆ. ಕಾರ್ತಿಕ ಮಾಸದಲ್ಲಿ ಈ ಹಬ್ಬವನ್ನು ಉತ್ತರ ಕರ್ನಾಟಕದ ತುಂಬ ಆಚರಣೆ ಮಾಡಲಾಗುತ್ತದೆ. ಶಿವನು ಲಿಂಗರೂಪದಲ್ಲಿ ಅಂದಿನ ರಾತ್ರಿಯೆ ಭೂಲೋಕದಲ್ಲಿ ಅವತರಿಸಿದ. ಮೈಲಾರನ ವಾರ ಭಾನುವಾರ ಶತತಾರ ನಕ್ಷತ್ರ, ಅದೇ ದಿನದಂದೇ ಭಂಡಾರವು ಹುಟ್ಟಿತ್ತು ಭಂಡಾರದಿಂದ ಲಿಂಗಕ್ಕೆ ಪೂಜಿತವಾಗುತ್ತಿತ್ತು. ಇದಕ್ಕಾಗಿ ಹಬ್ಬವು ನಡೆಯಬೇಕಾಗಿದೆ.

ಈ ಹಬ್ಬದ ದಿನದಂದು ಊರಲ್ಲಿ ಗೊರವಿಯರು ಉಪವಾಸ ಆಚರಿಸುತ್ತಾರೆ. ತುಂಗಭದ್ರಾ ನದಿಗೆ ಹೋಗಿ ಸ್ನಾನ ಮಾಡಿ ಬರುತ್ತಾರೆ. ನಂತರ ಅರಿಶಿನ ಕೊಂಬುಗಳನ್ನು ಕುಟ್ಟುವರು. ಕುಟ್ಟಿದ ಅರಿಶಿನವನ್ನು ಗಂಗೆಮಾಳಮ್ಮ, ತುಪ್ಪದ ಮಾಳಮ್ಮ, ಚಿಕ್ಕಯ್ಯ, ಜುಂಜಯ್ಯ, ಹೆಗ್ಗಡೆ, ಎಲ್ಲಾ ದೇವರಿಗೆ ಈ ಅರಿಸಿನ ಹಚ್ಚಿ ಪೂಜೆ ಸಲ್ಲಿಸುತ್ತಾರೆ. ಈ ಹಬ್ಬದಲ್ಲಿ ಒಡೆಯರು ಮನೆಯಿಂದ ಕುಟುಂಬ ಸಮೇತವಾಗಿ ಭಂಡಾರದ ತಟ್ಟೆಯೊಂದಿಗೆ ಬರುವರು. ವೈಭವದ ರೀತಿಯ ಮರೆವಣಿಗೆಯ ಮೂಲಕ ಗಂಗೆಮಾಳಮ್ಮನ ದೇವಾಲಯಕ್ಕೆ ನಮಸ್ಕರಿಸಿ ಮೈಲಾರನ ದೇವಾಲಯಕ್ಕೆ ಹೋಗುವರು.

ಸ್ವಯಂಭೂಲಿಂಗವನ್ನು ಪೂಜಿಸಿ ಅಭಿಷೇಕಮಾಡಿ ಭಂಡಾರದಿಂದ ಪೂಜಿಸುವ ಕಾರ್ಯಕ್ರಮ ಪ್ರಾರಂಭವಾಗುವುದು. ಮಣ್ಣಿನ ಮೈಲಾರ ದೇವರಿಗೆ ಭಂಡಾರವನ್ನು ಹಚ್ಚುವರು. ಸ್ವಯಂಭೂಲಿಂಗಕ್ಕೆ ಇಟ್ಟ ಭಂಡಾರದ ಹಿಡಿಯೂ ರಾಶಿಯಾಗುತ್ತದೆ. ಭಕ್ತರೂ ಸಹ ಭಂಡಾರದ ರಾಶಿಗೆ ಭಂಡಾರವನ್ನು ಅರ್ಪಿಸಿ ಪೂಜಿಸುತ್ತಾರೆ. ನಂತರದಲ್ಲಿ ಆ ರಾಶಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಅನಂತರ ಮೈಲಾರ ದೇವಾಲಯಕ್ಕೆ ಬೀಗ ಹಾಕುವರು. ಕಾರ್ತಿಕೋತ್ಸವ ಅಂದರೆ ದೀಪವನ್ನು ಹಚ್ಚಲಾಗುತ್ತದೆ. ಈ ಭಂಡಾರವನ್ನು ಮೈಲಾರನಿಗೆ ಹಾಗೂ ಇತರ ದೇವತೆಗಳಿಗೆ ಅರ್ಪಿಸಿದ ನಂತರ ಮರುದಿನ ಬೆಳಿಗ್ಗೆ ಭಂಡಾರ ರಾಶಿಯಿಂದ ಮೈಲಾರ ದೇವಾಲಯದ ಬೀಗವನ್ನು ತೆಗೆಯುವರು. ರಾತ್ರಿ ಮಾಡಿದ ಭಂಡಾರದ ರಾಶಿಯನ್ನು ಬೆಳಿಗ್ಗೆ ಆಗುವುದರ ಒಳಗಾಗಿ ಅರ್ಧದಷ್ಟು ಸೀಳಿರುವುದು. ಇದಕ್ಕಾಗಿ 'ಭಂಡಾರ ಒಡೆಯಿತು'. ಎಂದು ಕರೆಯುತ್ತಾರೆ. ಈ ರೀತಿ ಭಂಡಾರ ಒಡೆದರೆ ದೇವರಿಗೆ ಪೂಜೆಯು ತೃಪ್ತಿಯಾಗಿದಂತೆ ಎಂದು ಭಕ್ತರ ನಂಬಿಕೆಯಾಗಿದೆ.

ಭಂಡಾರದ ರಾಶಿಗೆ ಪೂಜೆ ಸಲ್ಲಿಸಿ, ಹಣ್ಣು ಕಾಯಿ ಒಡೆಯುತ್ತಾರೆ. ನಂತರ ಭಂಡಾರವನ್ನು ತಟ್ಟೆಯಲ್ಲಿ ತುಂಬಿಕೊಂಡು, ಕಪಿಲಮುನಿ ಸಿಂಹಾಸನಕ್ಕೆ ಬಂದು ಸಿಂಹಾಸನಕ್ಕೆ

ಪೂಜಿಸುವರು. ಭಂಡಾರದ ಪೂಜೆ ಸಲ್ಲಿಸಿದ ರಾಶಿಯಿಂದ ಅಲ್ಲಿನ ಪೂಜಾರಿಗಳು ಭಂಡಾರವನ್ನು ಎತ್ತಿಕೊಂಡು ಮುಂದಿನ ಭಂಡಾರ ಚೆಟ್ಟಿಯವರಿಗೂ ಅದನ್ನೇ ಪೂಜೆಗೆ ಬಳಸಿಕೊಳ್ಳಬೇಕು. ಗೊರವರು ಸಹ ಇದೇ ಭಂಡಾರವನ್ನು ಮುಂದಿನ ವರ್ಷದವರೆಗೂ ಉಳಿಸಿಕೊಂಡು ಭಂಡಾರವನ್ನು ಹಚ್ಚಿಕೊಳ್ಳಬೇಕು. ಈ ರೀತಿಯಾಗಿ ಭಂಡಾರ ಚೆಟ್ಟಿಯು ವಿಶೇಷವಾದ ರೀತಿಯಲ್ಲಿ ನಡೆಯುತ್ತದೆ.

**ಬನದ ಹುಣ್ಣಿಮೆ**

ಬನದ ಹುಣ್ಣಿಮೆಯು ವಿಶೇಷವಾಗಿದೆ. ಈ ಹುಣ್ಣಿಮೆಯ ದಿನ ಹೊಸದಾಗಿ ಬೆಳೆದ ಕಾಳುಗಳಿಂದ ಮುದ್ದೆ ಸಾರು ನೈವೇದ್ಯ ಮಾಡುವರು. ಈ ಹುಣ್ಣಿಮೆಯನ್ನು ಮುದ್ದೆ ಹುಣ್ಣಿಮೆಯನ್ನುವರು. ವಿವಿಧ ರೀತಿಯ ಕಾಳುಗಳಿಂದ ತಾವು ಬೆಳೆದ ಬೆಳೆಯಿಂದ ಮೈಲಾರನ ಭಕ್ತರು ದೇವರಿಗೆ ನೈವೇದ್ಯಮಾಡಿ ತಾವು ಆಹಾರವನ್ನು ಸೇವಿಸುವರು. ಈ ರೀತಿಯಿಂದ ತಯಾರಿಸಿದ ಆಹಾರವನ್ನು ಎಲ್ಲ ಭಕ್ತರಿಗೆ ನೀಡುವುದು. ಬನದ ಹುಣ್ಣಿಮೆಯ ದಿನದಿಂದ ಅವರಿಗೆ ಮುದ್ದೆ ಸಾರನ್ನು ದೋಣಿ ತುಂಬಿಸಿ ಗೊರವರಿಗೆ ನೀಡಿ ಆಶೀರ್ವಾದ ಪಡೆಯುವರು. ದೋಣಿಯಲ್ಲಿ ತುಂಬಿದ ಆಹಾರದಲ್ಲಿ ಸ್ವಲ್ಪ ಭಾಗವನ್ನು ತೆಗೆದುಕೊಳ್ಳುವರು. ಇದನ್ನು ತಮ್ಮ ಹೊಲ, ಗದ್ದೆಗಳಿಗೆ ತೆಗೆದುಕೊಂಡು ಹೋಗಿ ಹಾಕುವರು ಇದನ್ನು ಹುಲುಸು ಎನ್ನುವರು. ದೇವಾಲಯ ಭಂಡಾರದೊಂದಿಗೆ ಹುಲುಸನ್ನು ತೆಗೆದುಕೊಂಡು ಬಿತ್ತುವ ಮುನ್ನ ಭಂಡಾರ ಮತ್ತು ಹುಲುಸನ್ನು ಬೀಜದೊಂದಿಗೆ ಸೇರಿಸಿ ಬಿತ್ತುವರು. ಇದರಿಂದ ಫಸಲು ಸಮೃದ್ಧಿಯಾಗಿ ಬರುತ್ತದೆ ಎಂದು ಭಕ್ತರ ನಂಬಿಕೆಯಾಗಿದೆ. ಕರ್ನಾಟಕದ ವಿವಿಧ ಮೈಲಾರನ ನೆಲೆಗಳಲ್ಲಿ ಬನದ ಹುಣ್ಣಿಮೆಯನ್ನು ಈ ರೀತಿಯಾಗಿ ಆಚರಿಸುತ್ತಾರೆ. ಮೈಲಾರನಿಗೆ ಈ ಹುಣ್ಣಿಮೆಯಂದು ಅನೇಕ ಕಾವ್ಯಗಳನ್ನು, ಒಡಪುಗಳನ್ನು ಹಾಡುತ್ತಾರೆ.

ಬುದ್ಧಿಯ ಕೊಡು ಬುದ್ಧಿಯುಳ್ಳ ಮೈಲಾರ ದೇವ
ಬುದ್ದಿಯ ಮೇಲೆ ಶಿವಧ್ಯಾನ ಮಾಡುತ್ತೇನೆ.
ಬಾನವಕೊಡು ಮೈಲಾರ ದೇವ, ಬಾನವ ಕೊಟ್ಟರೆ
ಭಾರತದ ಹುಣ್ಣಿಮೆಗೆ ಬರುತ್ತೇನೆ.
ಅನ್ನವ ಕೊಡು ಮೈಲಾರ ದೇವ, ಅನ್ನವ ಕೊಟ್ಟರೆ
ಹನ್ನೊಂದು ಹುಣ್ಣಿಮೆಗೆ ಬರುತ್ತೇನೆ.
ಅಂಬಲಿ ಕೊಡು ಮೈಲಾರ ದೇವ, ಅಂಬಲಿ ಕೊಟ್ಟರೆ,
ತಿಂಗಳು ಹುಣ್ಣಿಮೆಗೆ ಬರುತ್ತೇನೆ.

ಎಂದು ಮೈಲಾರನ ಭಕ್ತರು ಮೈಲಾರ ದೇವಾಲಯದ ಮುಂದೆ ಕಾವ್ಯಗಳನ್ನು ಹಾಡುತ್ತಾರೆ. ಬನದ ಹುಣ್ಣಿಮೆಯ ಭಕ್ತರಾದ ರೈತರಿಗೆ ಸೇರಿದ್ದು, ತಮ್ಮ ಬೆಳೆಗಳು ಯಾವುದೇ ರೀತಿ ತೊಂದರೆ ಬರದಿರಲಿ ಹಾಗೂ ಉತ್ತಮವಾದ ಫಸಲು ದೊರೆಯಲಿ ಎಂದು ಮೈಲಾರನ ಭಕ್ತರು ಬನದಹುಣ್ಣಿಮೆಯನ್ನು ಸಂಭ್ರಮದಿಂದ ಮಾಡುತ್ತಾರೆ.

**ಯುಗಾದಿ**

ಯುಗಾದಿ ದಿನದಂದು ಮೈಲಾರನ ದೇವಾಲಯಗಳಲ್ಲಿ ವಿಶೇಷವಾಗಿ ಪೂಜೆ, ಅಭಿಷೇಕಗಳು ನಡೆಯುತ್ತವೆ. ಪ್ರಮುಖವಾಗಿ ಹೂವಿನಹಡಗಲಿಯ ಮೈಲಾರದಲ್ಲಿ ಬೆಳಗ್ಗೆ ಊರಿನ ಅರ್ಚಕರು, ಒಡೆಯರು, ಗೊರವರು ಮತ್ತು ದೇವಾಲಯದ ಬಾಜ ಭಜಂತ್ರಿಯೊಂದಿಗೆ ಊರಲ್ಲಿ ಇರುವ ಎಲ್ಲಾ ದೇವಾಲಯಕ್ಕೆ ಮೆರವಣಿಗೆಯ ಮೂಲಕ ಭೇಟಿ ನೀಡುವರು. ಭೇಟಿ ನೀಡಿ ಆ ದೇವರುಗಳಿಗೆ ಹಣ್ಣುಕಾಯಿ ವಿವಿಧ ವಸ್ತುಗಳಿಂದ ಪೂಜೆಯನ್ನು ಸಲ್ಲಿಸುವರು. ಸಕ್ಕರೆಯನ್ನು ಹಿಡಿದಿರುವ ವ್ಯಕ್ತಿಯೊಬ್ಬ ನವಣೆ ಹಿಟ್ಟು ಹಾಗೂ ಬೆಲ್ಲದ ಪುಡಿಯನ್ನು ಮಾಡಿ ಈ ತಟ್ಟೆಯೊಂದಿಗೆ ಬೆರೆಸಿ ಇರುವೆಯ ಇರುವ ಕಡೆ ಹಾಕುತ್ತ ಸಾಗುವನು. ಮೆರವಣಿಗೆಯೊಂದಿಗೆ ಡೆಂಕನಮರಡಿ, ದುರ್ಗಾದೇವಿ ಗುಡಿ, ಮಲ್ಲಪ್ಪನ ದೇವಾಲಯ, ಲಕ್ಷ್ಮೀನರಸಿಂಹನ ದೇವಾಲಯ ಎಲ್ಲಾ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸಿ ದೇವಾಲಯಕ್ಕೆ ಮರಳಿ ಬರುವರು. ಮೈಲಾರನಿಗೆ ಅಂದು ೯ ಸಲ ಆರತಿಯಾಗಿ ದೇವಾಲಯದಲ್ಲಿ ವಿಶೇಷವಾದ ಪೂಜೆ ಸಲ್ಲಿಸುತ್ತದೆ. ಇದೇ ತರಹದ ಸೇವೆಯು ದೀಪಾವಳಿಯಂದು ನಡೆಯುತ್ತದೆ. ಯುಗಾದಿ ಎಂದು ಮೈಲಾರನಿಗೆ ವಿಶೇಷವಾಗಿ ತಾವು ಮಾಡಿದ ಸಿಹಿ ಆಹಾರ ಪದಾರ್ಥವನ್ನು ನೈವೇದ್ಯಮಾಡಿ, ಗೊರವರಿಗೆ ದೋಣಿ ತುಂಬಿಸಿ ತಾವು ಸೇವಿಸುತ್ತಾರೆ. ಎಂದಿನಂತೆ ಮೈಲಾರದಲ್ಲಿ ಯುಗಾದಿ ದಿನದಂದು ಗೊರವರ ಸೇವೆಗಳು ನಡೆಯುತ್ತಲೇ ಇರುತ್ತವೆ.

**ನವರಾತ್ರಿ**

ನವರಾತ್ರಿಯ ಸಂದರ್ಭದಲ್ಲಿ ಮೈಲಾರದಲ್ಲಿ ವಿಶೇಷವಾಗಿ ಪ್ರತಿದಿನ ದೇವರಿಗೆ ಪಲ್ಲಕ್ಕಿ ಸೇವೆ ನಡೆಯುತ್ತದೆ. ನವರಾತ್ರಿಯಲ್ಲಿ ಕರ್ನಾಟಕದ ಮೈಲಾರನ ನೆಲೆಗಳಲ್ಲಿ ಆಯುಧ ಪೂಜೆ, ಅಭಿಷೇಕ, ಪೂಜೆ ಪುನಸ್ಕಾರಗಳು ನಡೆಯುತ್ತವೆ. ವಿಶೇಷವಾಗಿ ಹೂವಿನಹಡಗಲಿ ಮೈಲಾರದಲ್ಲಿ ನದಿಯಲ್ಲಿ ಸ್ನಾನ, ಕರಿಯಾಲದಲ್ಲಿ ಮಂಗಳಾರತಿ ಮಾಡುವರು. ಆ ರಾತ್ರಿಯಂದು ಊರಲ್ಲಿರುವ ಬನ್ನಿಮರಕ್ಕೆ ಹೋಗಿ ಪೂಜೆ ಸಲ್ಲಿಸಿ ಬನ್ನಿ ಮುಡಿಯುವರು. ದೇವರುಗುಡ್ಡದಲ್ಲಿ ನವರಾತ್ರಿಯಲ್ಲಿ ಕಾರಣಿಕ ನಡೆಯುವುದು. ಇಡಿ ಊರಿನ ಜನರು ತಮ್ಮ ತಮ್ಮ ಮನೆಯನ್ನು ಸ್ವಚ್ಛಗೊಳಿಸುವರು. ಕಾರಣಿಕದ ಗೊರವಪ್ಪ ಹೊಸ ಬಟ್ಟೆಯೊಂದಿಗೆ

ಕಾರಣಿಕವನ್ನು ನುಡಿಯಲು ಸಿದ್ಧನಾಗುತ್ತಾನೆ. ನವರಾತ್ರಿಯ ದಿನದಂದು ಕಾರಣಿಕ ಗೊರವ ಉಪವಾಸವಿದ್ದು ವ್ರತವನ್ನು ಪಾಲಿಸುತ್ತಾನೆ. ಯಾವುದೇ ಆಹಾರವನ್ನು ಕಾರಣಿಕದ ಗೊರವ ತೆಗೆದುಕೊಳ್ಳುವುದಿಲ್ಲ. ಊರಿನ ಜನರಲ್ಲಿ ಕಾರಣಿಕ ಬಯಲಿಗೆ ಬಂದು ಕಾರಣಿಕ ನುಡಿಯನ್ನು ಆಲಿಸಿ ತಮ್ಮ ಇಷ್ಟಕ್ಕೆ ತಕ್ಕಂತೆ ಕಾರಣಿಕ ನುಡಿಯನ್ನು ವಿಮರ್ಶೆ ಮಾಡುವರು.

ನವರಾತ್ರಿ ಹಬ್ಬ ಅಥವಾ ದಸರಾ ಹಬ್ಬದ ಮೂಲ ಕಲ್ಪನೆ ಅಂಕುರಿಸಿದ್ದು ಪಶುಪಾಲಕರ ಆರಾಧ್ಯ ದೈವ ಮೈಲಾರ ಪರಂಪರೆಯಲ್ಲಿದೆ ಎಂದು ಗುರುತಿಸಬಹುದು. ಸಂಚಾರಿ ಪಶುಪಾಲಕರ ಸಾಂಸ್ಕೃತಿಕ ವೀರನಾಗಿದ್ದ ಮೈಲಾರನು ಮಧ್ಯ ಕರ್ನಾಟಕದ ಮೈಲಾರ ಗ್ರಾಮದ ಹತ್ತಿರ ಇರುವ ಡೆಂಕನಮರಡಿ ಎಂಬ ಕಾಡಿನಲ್ಲಿ 'ಮಲ್ಲ' ಎಂಬ ಬುಡಕಟ್ಟು ಜನಾಂಗವನ್ನು ಎದುರಿಸಿ ನಿಲ್ಲುತ್ತಾನೆ. ಇವನ ಪಶುಸಂಪತ್ತನ್ನು ಕದಿಯುತ್ತಿದ್ದ ಮಣಿಮಲ್ಲರನ್ನು ಮರ್ಧಿಸಲು ತನ್ನ ಗೊರವರ ಸೈನ್ಯದೊಂದಿಗೆ ಬೀಡುಬಿಟ್ಟು ಒಂಭತ್ತು ದಿನಗಳ ಕಾಯ್ದು ಹತ್ತನೆಯ ದಿನ ಅವರನ್ನು ವಧಿಸಿ, ಅವರ ರುಂಡಗಳೊಡನೆ ಹಿಂದಿರುಗಿ ಒಂದು ವಿಜಯೋತ್ಸವವನ್ನು ಆಚರಿಸಿಕೊಳ್ಳುತ್ತಾನೆ. ಇದೇ ನಿಜವಾದ ಐತಿಹಾಸಿಕ ವಿಜಯದಶಮಿ.[೨೭] ಇದು ನಡೆದದ್ದು ಕ್ರಿ.ಶ. ಎರಡನೆಯ ಶತಮಾನ ಎಂಬುದು ಪುರುಷೋತ್ತಮ ಬಿಳಿಮಲೆ ಅವರ ಅಭಿಪ್ರಾಯವಾಗಿದೆ. ಈ ಕಾಲದಲ್ಲಿ ನವಶಿಲಾಯುಗದ ಪೂರ್ವ ಕಾಲವೆಂದು ಸೋಂಥೆಮರ್ ಹೇಳುತ್ತಾರೆ.[೨೮] ಮಧ್ಯ ಭಾರತದ ಮೈಲಾರನ ಎಲ್ಲ ಕ್ಷೇತ್ರಗಳಲ್ಲಿ ವಿಜಯದಶಮಿಯ ದಿನ ಗೊರವರ ಅಣುಕು ಯುದ್ಧ ಮತ್ತು ವಿಜಯೋತ್ಸವಗಳು ನಡೆಯುತ್ತವೆ. ವಿಜಯನಗರದ ಸಂಗಮ ವಂಶದ ದೊರೆಗಳು, ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿಭಾಗದಲ್ಲಿರುವ ಮೈಲಾರನ 'ಮೀನಗುಂದಿ' ಎಂಬ ಕ್ಷೇತ್ರದ ಗುಡ್ಡಕಣಿವೆಗಳ ನಾಡನ್ನು ತಮ್ಮ ಸೇನೆಯ ಒಂದು ನೆಲೆಯನ್ನಾಗಿ ಮಾಡಿಕೊಂಡಿದ್ದರೆಂದು ಇತಿಹಾಸಕಾರರು ಗುರುತಿಸಿದ್ದಾರೆ. ಮೀನಗೊಂದಿ ಹಾಗೂ ದೇವರಗುಡ್ಡದಲ್ಲಿ ನಡೆಯುವ ಮೈಲಾರನ ವಿಜಯೋತ್ಸವದಿಂದ ಪ್ರೇರಿತರಾದ ಸಂಗಮ ವಂಶದ ದೊರೆಗಳು ತಮ್ಮ ರಾಜಧಾನಿ 'ವಿಜಯ ವಿರುಪಾಕ್ಷ ಹೊಸಪಟ್ಟಣದಲ್ಲಿ (ಹಂಪಿ) ಇಂದಿನ ಮಹಾನವಮಿ ದಿಬ್ಬದ ಜಾಗದಲ್ಲಿ ದಸರಾವನ್ನು ಆರಂಭಿಸಿದರು. ಅಲ್ಲಿ ಅರಸರು ಕುಳಿತುಕೊಳ್ಳಲು ಸಣ್ಣದಾದ ದಿಬ್ಬವೊಂದನ್ನು ಕಟ್ಟಿಸಿದರು. ಮುಂದೆ ಶ್ರೀ ಕೃಷ್ಣದೇವರಾಯ ಒರಿಸ್ಸಾ ರಾಜ್ಯವನ್ನು ಗೆದ್ದು ಕುರುವಿಗಾಗಿ ಇಂದು ಕಾಣುವ ಬೃಹತ್ ಗಾತ್ರದ ಕಲಾತ್ಮಕ ಮಹಾನವಮಿ ದಿಬ್ಬವನ್ನು ಕಟ್ಟಿಸಿ ಅಲ್ಲಿ ದಸರಾ ಹಬ್ಬವನ್ನು ಆರಂಭಿಸಿ ವಿಜಯೋತ್ಸವವನ್ನು ಆಚರಿಸತೊಡಗಿದನು. ಇಲ್ಲಿ ಸೇನೆಯ ಕವಾಯತು, ಕುಸ್ತಿ, ಕತ್ತಿವರಸೆ, ವಜ್ರ ಮುಷ್ಠಿ ಕಾಳಗ, ಕಸರತ್ತು ಕಲೆಗಳ ಪ್ರದರ್ಶನ ಪ್ರಾರಂಭವಾದವು. ಈ ಎಲ್ಲಾ ಕ್ರೀಡೆಗಳಲ್ಲಿ ತಳಸಮುದಾಯಗಳ ಪಾತ್ರವು ದೊಡ್ಡದಾಗಿದೆ. ಮೈಲಾರನ ಸದರ ಕಟ್ಟೆಯ ಆಸ್ಥಾನ, ನಂತರ ವಿಜಯನಗರದ ಮಹಾನವಮಿ

ದಿಬ್ಬದ ಮೇಲಿನ ಸಾಮ್ರಾಟನ ಒಡ್ಡೋಲಗವು ಮೈಸೂರು ಅರಸರ ಕಾಲದಲ್ಲಿ ಅವರ ಅರಮನೆಯ ರಾಜಾಸ್ಥಾನವನ್ನು ಪ್ರವೇಶಿಸಿತು. ಈಗ ಪ್ರಜಾಪ್ರಭುತ್ವ ಕಾಲದಲ್ಲಿ ಖಾಸಗಿ ದರ್ಬಾರಿನ ರೂಪದಲ್ಲಿ ಉಳಿದುಕೊಂಡಿದೆ. ಮೈಲಾರನ ದೇವಗಣಗಳಾದ ಗೊರವರ, ಕಂಚಾಪೀರರ ಪಡೆಯಾಗಿ ಪರಿವರ್ತನೆಯಾಗಿದೆ. ಮೈಲಾರನ ಎಲ್ಲಾ ನಂಬಿಕೆ, ಆಚರಣೆಗಳಿಗೆ ಸಮಾಜದಲ್ಲಿರುವ ವೃತ್ತಿಯಾಧಾರಿತವಾಗಿರುವ ಸಮುದಾಯಗಳು ಒಂದಲ್ಲ ಒಂದು ರೀತಿಯಲ್ಲಿ ಮೈಲಾರನ ಸೇವೆಗಾಗಿ ಇಂದಿಗೂ ಸಹ ದುಡಿಯುತ್ತಿದ್ದಾರೆ. ಆದರೆ ತಳಸಮುದಾಯಗಳು ಮೈಲಾರನ ಸೇವೆಯನ್ನು ಮಾಡುತ್ತವೆ ವಿನಹ ಯಾವುದೇ ಫಲಾಪೇಕ್ಷೆಯನ್ನು ಬಯಸುವುದಿಲ್ಲ ಎಂಬ ನಿಸ್ವಾರ್ಥ ಮನಸ್ಸು ಈ ಸಮುದಾಯಗಳಲ್ಲಿದೆ. ಮೈಲಾರನ ಎಲ್ಲಾ ಧಾರ್ಮಿಕ ಸಂಪ್ರದಾಯಗಳಲ್ಲಿ ಆಯಾ ಸಮುದಾಯಗಳ ಸೇವೆ ಸಲ್ಲಿಸುವ ವ್ಯವಸ್ಥೆಯು ಪ್ರತ್ಯೇಕತೆಯಿಂದ ಕೂಡಿರುತ್ತದೆ. ಮೈಲಾರ ಸಾಂಸ್ಕೃತಿಕ ನಾಯಕನೆಂದು ಗುರುತಿಸಿಕೊಳ್ಳುವುದು ಸಮುದಾಯಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದಾಗ. ಆದರೆ ಶಾಸನ, ದೇವಾಲಯ, ಮೂರ್ತಿಶಿಲ್ಪ, ಕಾವ್ಯ ಪುರಾಣಗಳಂತಹ ಲಿಖಿತ ಆಧಾರಗಳಿಂದ ಮೈಲಾರನು ಚಾರಿತ್ರಿಕ ವ್ಯಕ್ತಿಯೆಂದು ಗುರುತಿಸಬಹುದು. ಮೈಲಾರನು ಮೂಲತಃ ಸಾಂಸ್ಕೃತಿಕ ನಾಯಕನಾಗಿ ನಂತರ ಚಾರಿತ್ರಿಕ ವ್ಯಕ್ತಿಯಾಗಿರಬಹುದು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

**ವಿಜಯದಶಮಿ**

ಮಧ್ಯಾಹ್ನ ೩ ಗಂಟೆಗೆ ಕಂಚಾವೀರರಿಂದ ಪವಾಡಗಳ ಕಾರ್ಯಕ್ರಮಗಳು ನಡೆಯುತ್ತವೆ. ಕಾಲು ಪವಾಡ, ಕೈ ಪವಾಡ, ಸರಪಳಿ ಪವಾಡ, ಕಂಚಾವೀರರು ಮಾಡುವರು. ಅವರು ತಮ್ಮ ಆಯುಧಗಳನ್ನು ಮೆರವಣಿಗೆಯ ಮೂಲಕ ಬರುವರು. ಬತ್ತಿಯ ಆರತಿ, ಬಗನಿ ಗೂಟಗಳು, ಜಾಲಿ ಮುಳ್ಳು, ಕಬ್ಬಿಣದ ಸರಳು, ಜಿಂಕೆಯ ಚರ್ಮದ ಹಗ್ಗವನ್ನು ಪವಾಡಕ್ಕೆ ತರುವರು. ಮೆರವಣಿಗೆಯ ಮೂಲಕ ತಂದ ಆಯುಧಗಳಿಂದ ಮೈಲಾರದ ದೇವಾಲಯದ ಮುಂದೆ ಪವಾಡಗಳನ್ನು ಭಕ್ತರ ಎದುರಿಗೆ ಮಾಡುವರು. ಒಡೆಯರ ಆಶೀರ್ವಾದದಿಂದ ಮೊದಲು ಕಾಲು ಪವಾಡಗಳನ್ನು ಮಾಡುತ್ತಾರೆ. ಕಬ್ಬಿಣದ ಸರಳು ಪವಾಡ, ಬಗನಿಗೂಟದ ಪವಾಡ, ಜಿಂಕೆಯ ಚರ್ಮದಿಂದ ಮಾಡಿದ ಹಗ್ಗದ ಪವಾಡವನ್ನು ಮೊದಲು ಮಾಡುವರು. ನಂತರದಲ್ಲಿ ಕೈ ಪವಾಡಗಳು ಮಾಡುತ್ತಾರೆ. ಆರತಿ ಪವಾಡ, ಆರತಿ ಪವಾಡದಲ್ಲಿ ಮೈಲಾರ ಮತ್ತು ಮಾಳಮ್ಮನಿಗೆ ತನ್ನ ಆರತಿ ಪವಾಡದ ಮೂಲಕ ಆರತಿಯನ್ನು ಬೆಳಗುವನು. ನಂತರದಲ್ಲಿ ಮುಳ್ಳನ್ನು ಕೈಗೆ ಚುಚ್ಚಿಕೊಳ್ಳುವುದರ ಮೂಲಕ ತನ್ನ ಪವಾಡವನ್ನು ಮೈಲಾರನ ದೇವಾಲಯದ ಮುಂದೆ ಮಾಡುವರು. ಸರಪಳಿ ಪವಾಡ. ಸರಪಳಿಯನ್ನು ಎರಡು ಕೈಗಳಿಂದ ಕಂಬಕ್ಕೆ ಕಟ್ಟಿದ ಸರಪಳಿಯನ್ನು ಜೋರಾಗಿ ಎಳೆಯುವ ಮೂಲಕ ತುಂಡರಿಸುವರು. ಪವಾಡಗಳನ್ನು ಮಾಡುವವರು ಎಲ್ಲಾ ವಯೋಮಾನಕ್ಕೆ ಸೇರಿದ

ವಯಸ್ಸಿನವರಾಗಿರುತ್ತಾರೆ. ೧೦ ವರ್ಷದಿಂದ ೭೦ ವರ್ಷದ ವಯಸ್ಸಿನ ಮುದುಕರು ಸಹ ಪವಾಡವನ್ನು ಮಾಡುತ್ತಾರೆ. ಈ ಪವಾಡವು ಮುಗಿದ ಮೇಲೆ ಮೈಲಾರ ಪಲ್ಲಕ್ಕಿಯೂ ಬನ್ನಿಮರದ ಶಿಬಾರಕ್ಕೆ ತಂದು ಬನ್ನಿಯನ್ನು ಮುಡಿದು ದೇವಾಲಯಕ್ಕೆ ಹಿಂದಿರುಗುತ್ತಾರೆ. ದೇವರಗುಡ್ಡ ಪ್ರದೇಶದಲ್ಲಿ ವಿಜಯದಶಮಿಯಂದು ಕಂಚಾವೀರರು ತಮ್ಮ ಪವಾಡಗಳನ್ನು ದೇವಾಲಯದ ಮುಂದೆ ಒಡೆಯರು ಹಾಗೂ ಭಕ್ತರ ಸಮ್ಮುಖದಲ್ಲಿ ನಡೆಯುತ್ತದೆ.

**ಭಾರತ ಹುಣ್ಣಿಮೆ**

ಭಾರತ ಹುಣ್ಣಿಮೆಯು ಮೈಲಾರನಿಗೆ ವಿಶೇಷವಾದ ಹುಣ್ಣಿಮೆಯಾಗಿದೆ. ಕರ್ನಾಟಕದ ಬಹು ದೊಡ್ಡ ಜಾತ್ರೆಗಳಲ್ಲಿ ಒಂದಾದ ಹೂವಿನಹಡಗಲಿಯ ಮೈಲಾರ ಜಾತ್ರೆಯ ನಡೆಯುವುದು ಭಾರತ ಹುಣ್ಣಿಮೆಯಲ್ಲಿ. ಭರತ ಹುಣ್ಣಿಮೆಯ ಸಮಯದಲ್ಲಿ ಕರ್ನಾಟಕದ ಮೈಲಾರನ ಕ್ಷೇತ್ರಗಳಲ್ಲಿ ವಿಶೇಷವಾದ ಪೂಜೆ, ಪುನಸ್ಕಾರ, ಅಭಿಷೇಕ ಮೆರವಣಿಗೆ ಹಾಗೂ ಪವಾಡಗಳು ನಡೆಯುತ್ತವೆ. ಕೆಲವು ಕಡೆ ರಥೋತ್ಸವ ನಡೆಯುವುದುಂಟು. ಹೂವಿನಹಡಗಲಿ ಹಾಗೂ ದೇವರಗುಡ್ಡಗಳಲ್ಲಿ ಭಾರತ ಹುಣ್ಣಿಮೆಯಲ್ಲಿ ವಿಶೇಷವಾಗಿ ನಂಬಿಕೆ–ಆಚರಣೆಗಳನ್ನು ಮಾಡಲಾಗುತ್ತದೆ.

ದೇವರಗುಡ್ಡದಲ್ಲಿ ಭರತ ಹುಣ್ಣಿಮೆ ರಾತ್ರಿ ೧೦ ಗಂಟೆಗೆ ಸುಮಾರಿಗೆ ಉತ್ಸವವನ್ನು ಸಿದ್ಧಗೊಳಿಸುತ್ತಾರೆ. ರಥದಲ್ಲಿ ಮೈಲಾರನ ಪ್ರಭಾವಳಿಯನ್ನು ಇಟ್ಟಿರುತ್ತಾರೆ. ಪಲ್ಲಕ್ಕಿಯಲ್ಲಿ ಮೈಲಾರನ ವಾಹನವಾದ ಕುದುರೆ ಖಂಡೇರಾಯನ ಮೂರ್ತಿಯನ್ನು ಹಾಗೂ ಮೈಲಾರ ಆಯುಧಗಳನ್ನು ಬಿಗಿಯಾಗಿ ಕಟ್ಟಿರುತ್ತಾರೆ. ಹೀಗೆ ಸಿದ್ಧಗೊಂಡ ಅಲಂಕೃತವಾದ ಪಲ್ಲಕ್ಕಿಯನ್ನು ಹೊತ್ತ ಭಕ್ತರು ನಿಶಬ್ಧತೆಯಿಂದ ಶಿಬಾರದ ಕಡೆಗೆ ಹೋಗುತ್ತಾರೆ. ಶಿಬಾರದಲ್ಲಿ ವಾಸ್ತವ್ಯ ಹೂಡಿದ ಜನರು ಬೆಳಗಿನವರೆಗೂ ಅಲ್ಲಿಯೇ ಇರುತ್ತಾರೆ. ಅಂದು ರಾತ್ರಿ ದೇವರಿಗೆ ಗುಗ್ಗರಿಯ ಜೊತೆ ಬೆಲ್ಲದ ನೈವೇದ್ಯದಿಂದ ಕುದುರಪ್ಪನಿಗೆ ನೈವೇದ್ಯವನ್ನು ಮಾಡಲಾಗುತ್ತದೆ. ಬೆಳಗಾಗುವವರೆಗೆ ಅಲ್ಲಿಯೇ ಇದ್ದ ಭಕ್ತರು ಬೆಳಗಿನ ಜಾವ ೫ ಗಂಟೆಗೆ ಡೆಂಕನಮರಡಿಯಿಂದ ಇಳಿದು ದೇವಾಲಯಕ್ಕೆ ಬರುತ್ತಾರೆ. ಇವರನ್ನು ಬರಮಾಡಿಕೊಳ್ಳಲು ವಾದ್ಯಗಳಿಂದ ಊರಿನ ಎಲ್ಲಾ ಭಕ್ತರು ಬರುತ್ತಾರೆ. ಯುದ್ದಮುಗಿಸಿ ವಿಜಯೋತ್ಸವದಿಂದ ಬರುವ ದೇವರಿಗೆ ಯುದ್ಧ ವೀರರಾಗಿ ಬರಮಾಡಿಕೊಳ್ಳುತ್ತಾರೆ. ಈ ಸಮಯದಲ್ಲಿ ಎಲ್ಲರಿಗೂ ಸಂಭ್ರಮ ಏಳುಕೋಟಿ, ಏಳುಕೋಟಿ ಎಂಬ ಕೂಗು ಮುಗಿಲು ಮುಟ್ಟುತ್ತದೆ. ದೇವಾಲಯಕ್ಕೆ ಬಂದ ಭಕ್ತರು ಮೈಲಾರನಿಗೆ ರಾಗಿಯ ಅಂಬಲಿಯನ್ನು ನೈವೇದ್ಯ ಮಾಡಲಾಗುತ್ತದೆ.

ಅಂಬಲಿಯನ್ನು ವಿಶೇಷವಾಗಿ ತಯಾರಿಸುತ್ತಾರೆ. ತಯಾರಿಸಿದ ಅಂಬಲಿಯನ್ನು ನೈವೇದ್ಯ ಮಾಡಿ ದೋಣಿಗಳಿಗೆ ನೀಡುವರು. ಗೊರವರಿಂದ ಪೂಜೆಯ ಬಳಿಕ ಪ್ರಸಾದವನ್ನು

ಸ್ವೀಕರಿಸುವರು. ಸಂಜೆಯ ವೇಳೆಗೆ ಮೈಲಾರನನ್ನು ಗುಡಿಗೆ ಕರೆತಂದು ಕಂಚಾವೀರರಿಂದ ಒಡಪುಗಳನ್ನು ಹೇಳುವರು. ಭಾರತ ಹುಣ್ಣಿಮೆಯ ನಂತರದ ಎರಡನೇ ದಿನ ಮೈಲಾರದಲ್ಲಿ ಕಾರಣಿಕ ನಡೆಯುವುದರಿಂದ ದೇವರಗುಡ್ಡದ ಭಕ್ತರು, ಹೂವಿನಹಡಗಲಿಯ ಮೈಲಾರನ ಕಡೆ ಹೋಗುವರು. ಹೂವಿನಹಡಗಲಿಯಲ್ಲಿ ಭಾರತ ಹುಣ್ಣಿಮೆಯ ದಿನದಂದು ಯಾವುದೇ ವಿಶೇಷವಾದ ಆಚರಣೆಗಳು ಅಷ್ಟಾಗಿ ನಡೆಯುವುದಿಲ್ಲ. ಭಾರತ ಹುಣ್ಣಿಮೆಯ ನಂತರದ ದಿನಗಳು ಹಿರೇಮೈಲಾರದಲ್ಲಿ ಪ್ರಮುಖವಾಗಿ ಮೈಲಾರ ಯುದ್ದವಾಹನದ ಆರಂಭವೆಂಬಂತೆ ಧ್ವಜಾರೋಹಣ ಹಾಗೂ ತ್ರಿಶೂಲ ಪೂಜೆಯಂತಹ ಆಚರಣೆಗಳು ಹಿರೇಮೈಲಾರದಲ್ಲಿ ನಡೆಯುತ್ತದೆ. ಭಾರತ ಹುಣ್ಣಿಮೆಗೆ ಹೂವಿನಹಡಗಲಿಯ ಮೈಲಾರಕ್ಕೆ ಕರ್ನಾಟಕವಲ್ಲದೆ ಆಂಧ್ರಪ್ರದೇಶ, ತೆಲಂಗಾಣ ಹಾಗೂ ಮಹಾರಾಷ್ಟ್ರದ ಭಕ್ತರು ಕಾರಣಿಕವನ್ನು ನೋಡಲು ಆಗಮಿಸುತ್ತಾರೆ.

**ಆಗಿ ಹುಣ್ಣಿಮೆ**

ಯುಗಾದಿಯ ನಂತರದಲ್ಲಿ ಆಗಿ ಹುಣ್ಣಿಮೆಯು ಬರುವುದರಿಂದ ಈ ಕಾಲದಲ್ಲಿ ಹೆಚ್ಚಾಗಿ ಮಳೆಗಾಲದ ಆರಂಭ ಕಾಲವಾಗಿದೆ. ಆದರೂ ಕರ್ನಾಟಕದ ವಿವಿಧ ಸ್ಥಳಗಳಲ್ಲಿ ಹುಣ್ಣಿಮೆಯ ಸಮಯದಲ್ಲಿ ಮೈಲಾರನಿಗೆ ಸಂಬಂಧಿಸಿದ ಜಾತ್ರೆ-ಉತ್ಸವ, ಪೂಜೆಗಳು ನಡೆಯುತ್ತವೆ. ಮೈಲಾರನ ನೆಲೆಗಳಾದ ಹನುಮಸಾಗರ, ಕಾರೀಮನಿ, ಗುಡೂರು ಹಾಗೂ ತೆಕ್ಕಲಕೋಟೆಗಳಲ್ಲಿ ಮೈಲಾರ ಜಾತ್ರೆ ನಡೆಯುತ್ತದೆ. ಪ್ರಮುಖವಾಗಿ ಆಗಿ ಹುಣ್ಣಿಮೆಯ ಸಮಯದಲ್ಲಿ ಜಾತ್ರೆಯ ವಿಶೇಷತೆ ಎಂದರೆ ದೋಣಿ ತುಂಬುವುದು, ಕಾರಣಿಕ ನುಡಿಯುವುದು, ಕಂಚಾವೀರರಿಂದ ಪವಾಡಗಳು ನಡೆಯುವುದು. ಪ್ರಮುಖವಾದ ಆಚರಣೆಯಾಗಿದೆ. ಆಗಿಹುಣ್ಣಿಮೆಯ ಸಮಯದಂದು ಹೂವಿನಹಡಗಲಿಯ ಮೈಲಾರದಲ್ಲಿ ಮೈಲಾರನಿಗೆ ಹಾಗೂ ಗಂಗೆಮಾಳಮ್ಮನಿಗೆ ಮದುವೆಯಾಗುತ್ತದೆ. ಸಾಂಪ್ರದಾಯಿಕವಾಗಿ ಮಾನವರ ಮದುವೆಗಳು ಹೇಗೆ ನಡೆಯುತ್ತವೆ ಅದೇ ರೀತಿಯಲ್ಲಿ ಮೈಲಾರ ಮತ್ತು ಮಾಳಮ್ಮನ ವಿವಾಹ ನಡೆಯುತ್ತದೆ.

ಆಗಿ ಹುಣ್ಣಿಮೆಯಲ್ಲಿ ಮೈಲಾರನ ಪ್ರಮುಖವಾದ ನೆಲೆಯಾದ ಸಿರುಗುಪ್ಪ ತಾಲೂಕಿನ ತೆಕ್ಕಲಕೋಟೆಯಲ್ಲಿ ಜಾತ್ರೆಯಾಗುತ್ತದೆ. ಈ ಜಾತ್ರೆಯಲ್ಲಿ ರಥೋತ್ಸವ ಶಸ್ತ್ರ ಚುಚ್ಚಿಕೊಳ್ಳುವ ಪದ್ಧತಿಯನ್ನು ಕಾಣಬಹುದು. ತೆಕ್ಕಲಕೋಟೆಯ ಸ್ಥಳ ಆಂಧ್ರಪ್ರದೇಶಕ್ಕೆ ಸಮೀಪವಿರುವುದರಿಂದ ತೆಲಗಿಯರ ಪ್ರಭಾವ ಹೆಚ್ಚಾಗಿದೆ. ಹಾಗಾಗಿ ಇಲ್ಲಿನ ನಂಬಿಕೆ-ಆಚರಣೆಗಳನ್ನು ಮಾಡುವವರು ಒಳಗುಂದಿಯ ಬೇಡ ಸಮುದಾಯದವರು. ದೇವರಗುಡ್ಡ ಹಾಗೂ ಹೂವಿನಹಡಗಲಿಯ ಮೈಲಾರದಲ್ಲಿ ಮಾದಿಗ ಸಮುದಾಯದವರು ಪವಾಡಗಳನ್ನು ಮಾಡಿದರೆ, ತೆಕ್ಕಲಕೋಟೆಯಲ್ಲಿ

ಬೇಡ ಸಮುದಾಯದವರು ಶಸ್ತ್ರವನ್ನು ಚುಚ್ಚಿಕೊಳ್ಳುತ್ತಾರೆ. ಇಂತಹ ಉಗ್ರ ಆಚರಣೆಯನ್ನು ಇಲ್ಲಿ ಕಾಣಬಹುದು. ತೆಕ್ಕಲಕೋಟೆಯಲ್ಲಿ ದೇವರಗುಡ್ಡ ಹಾಗೂ ಮೈಲಾರದಂತೆ ಕಂಚಾವೀರರ ಪವಾಡಗಳು ನಡೆಯುವುದಿಲ್ಲ. ಈ ದೇವಾಲಯದ ಪ್ರಾಂಗಣದಲ್ಲಿ ಅನೇಕ ನರಬಲಿ ಶಿಲ್ಪಗಳನ್ನು ಗಮನಿಸಿದಾಗ ಈ ದೇವಾಲಯದಲ್ಲಿ ನರಬಲಿ ಆಚರಣೆ ಇರಬಹುದೆಂದು ಊಹಿಸಬಹುದಾಗಿದೆ. ಮೈಲಾರನಿಗೆ ನರಬಲಿ ಆಚರಣೆ ಇದೆ ಎಂಬುದಕ್ಕೆ ಮೈಲಾರನ ಅನೇಕ ನೆಲೆಗಳಲ್ಲಿ ನರಬಲಿ ಶಿಲ್ಪಗಳನ್ನು ಕಾಣಬಹುದಾಗಿದೆ.

ತೆಕ್ಕಲಕೋಟೆಯಲ್ಲಿ ಆಗಿ ಹುಣ್ಣಿಮೆಯ ಮೊದಲ ದಿನ ಹೊಳಗುಂದಿ ಗ್ರಾಮಸ್ಥರು ತೆಕ್ಕಲಕೋಟೆಗೆ ಬರುತ್ತಾರೆ. ತಾವು ಶಿಬಾರದಂತಹ ತ್ರಿಶೂಲವನ್ನು ಪೂಜೆ ಸಲ್ಲಿಸುತ್ತಾರೆ. ಆಗಿ ಹುಣ್ಣಿಮೆಯ ರಾತ್ರಿ ಡೊಳ್ಳಿನ ಹಾಡುಗಳನ್ನು ಹಾಗೂ ಮೈಲಾರ ಕಾವ್ಯಗಳನ್ನು ಹಾಡುತ್ತಾರೆ. ಆಗಿಹುಣ್ಣಿಮೆಯ ಜಾತ್ರೆಯಲ್ಲಿ ರಥಕ್ಕೆ ಬಲಿ ಅನ್ನ ಹಾಕುವ ಸಂಪ್ರದಾಯ ನಡೆಯುತ್ತದೆ. ಒಳಗುಂದಿ ಬೇಡರು ಶಸ್ತ್ರದಿಂದ ಎದೆ ಹಾಗೂ ಭುಜಕ್ಕೆ ಹೊಡೆದುಕೊಳ್ಳುತ್ತಾರೆ. ಆಗಿ ಹುಣ್ಣಿಮೆಯ ಕಾಲದಲ್ಲಿ ತೆಕ್ಕಲಕೋಟೆಯಲ್ಲಿ ವಿಶೇಷವಾದ ಆಚರಣೆಗಳು ಬೇಡ ಸಮುದಾಯದವರು ಮಾಡುತ್ತಾರೆ. ಈ ಹುಣ್ಣಿಮೆಯು ಭಕ್ತರು ತಮ್ಮ ಹೊಲಗಳಲ್ಲಿ ಬಿತ್ತನೆಗಾಗಿ ರಾಗಿ, ಜೋಳ, ಭತ್ತ, ಶೇಂಗಾ, ನವಣೆ ಮುಂತಾದ ಪದಾರ್ಥಗಳನ್ನು ತಂದು ಪೂಜೆ ಸಲ್ಲಿಸಿಕೊಂಡು ಬಿತ್ತನೆ ಕಾರ್ಯಕ್ಕೆ ಮುಂದಾಗುತ್ತಾರೆ.

**ಮೈಲಾರನ ಭಕ್ತರ ನಂಬಿಕೆಗಳು**

ಕರ್ನಾಟಕದಲ್ಲಿ ಮೈಲಾರನಿಗೆ ಅನೇಕ ನಂಬಿಕೆಗಳು ಜನರಲ್ಲಿವೆ. ಜನಪದರ ಪ್ರತಿಯೊಂದು ಆಚರಣೆಗಳನ್ನು ಗಮನಿಸಿದಾಗ ಯಾವುದೋ ಒಂದು ಅಗೋಚರ ಶಕ್ತಿಯಿಂದಲೇ ರೂಪ ತಾಳಿರುತ್ತದೆ. ಜನರಲ್ಲಿರುವ ನಂಬಿಕೆಗಳು ಪೂರೈಕೆಯಾಗದಿದ್ದರೆ ಏನೋ ಆಪತ್ತು ಕಾದಿದೆ ಎಂದು ಜನರ ನಂಬಿಕೆಯಾಗಿದೆ. ನಂಬಿಕೆ ಆಚರಣೆಗಳನ್ನು ಪ್ರಾಚೀನ ಕಾಲದಿಂದ ಇಂದಿನ ದಿನದವರೆಗೂ ಅನುಸರಿಸಿಕೊಂಡು ಬಂದಿದ್ದಾರೆ. ಆಚರಣೆಗಳು ಉಳಿದು ಬರುವುದಕ್ಕೆ ನಂಬಿಕೆಗಳೇ ಪ್ರೇರಕ ಶಕ್ತಿಗಳಾಗಿವೆ. ಇದರಿಂದ ಅನೇಕ ಆಚರಣೆಗಳು ಉಗಮಗೊಂಡು ಜನರ ಜೀವನದಲ್ಲಿ ಬೆಸೆದುಕೊಂಡಿವೆ.[೨೯]

ದೇಶ ಕಾಲಗಳ ಹಿನ್ನೆಲೆಯಲ್ಲಿ ಪರಂಪರಾಗತ ಜ್ಞಾನ, ದೀರ್ಘಾನುಭವ, ಕಾಲ್ಪನಿಕ ಆಲೋಚನೆ ಹಾಗೂ ಅತೀಂದ್ರಿಯ ವ್ಯಾಪಾರ ಫಲವಾಗಿ ಮೂಡಿದ ಶ್ರದ್ಧೆಯೆ ನಂಬಿಕೆ.[೩೦] ಬದುಕಿನಲ್ಲಿ ಆಕಸ್ಮಿಕವಾಗಿ ಒಂದು ಘಟನೆ ಅಥವಾ ವಸ್ತು ಮತ್ತೆ ಮತ್ತೆ ಪರಿವರ್ತನೆಗೊಂಡಾಗ ಅದು ನಂಬಿಕೆಯಾಗುತ್ತದೆ. ಅದಕ್ಕಾಗಿ ಮೈಲಾರನ ಭಕ್ತರಲ್ಲಿ ಸ್ಥಳದಿಂದ ಸ್ಥಳಕ್ಕೆ ನಂಬಿಕೆ ಆಚರಣೆಗಳು ಭಿನ್ನವಾಗಿವೆ. ತಮ್ಮ ನಂಬಿಕೆಗಳನ್ನು ಚಾಚೂತಪ್ಪದೆ ಇಂದಿಗೂ

ಮುಂದುವರೆದುಕೊಂಡು ಬರುತ್ತಿದ್ದಾರೆ. ಮೈಲಾರ ಅನೇಕ ಸ್ಥಳಗಳಲ್ಲಿ ಇಂತಹ ನಂಬಿಕೆಗಳಿಂದ ಜಾತ್ರೆ, ಉತ್ಸವ, ಆಚರಣೆ, ಅಮವಾಸ್ಯೆ, ಹುಣ್ಣಿಮೆ ದಿನಗಳಂದು ಮೈಲಾರ ಭಕ್ತರು ವಿಶೇಷವಾದ ನಂಬಿಕೆಗಳನ್ನು ಹೊಂದಿದ್ದಾರೆ.

ಮೈಲಾರನು ಹೂವಿನಹಡಗಲಿ ಪ್ರದೇಶ ಕರಿಯಾಲ ಪ್ರದೇಶದಲ್ಲಿ ವಾಸವಾಗಿದ್ದ ಎಂಬುದು ಮೈಲಾರನ ಭಕ್ತರಲ್ಲಿದೆ. ಇದಕ್ಕೆ ಪುಷ್ಟಿ ನೀಡುವಂತೆ ಮೈಲಾರನು ಲಿಂಗದ ರೂಪದಲ್ಲಿ ಅವತರಿಸಿದ್ದು ಆಲದಮರದ ಕೆಳಗೆ ಇದ್ದನೆಂದು ನಂಬಿಕೆ ಜನರಲ್ಲಿದೆ. ಅದಕ್ಕಾಗಿ ಜನ ಇಂದಿನ ಕರಿಯಾಲ ಪ್ರದೇಶದಲ್ಲಿ ಜನರು ಜಾತ್ರೆಯ ಸಮಯದಲ್ಲಿ ಈ ಪ್ರದೇಶದಲ್ಲಿ ಬೀಡು ಬಿಡುತ್ತಾರೆ.

ಮೈಲಾರ ದೇವರಿಗೆ ಕರ್ನಾಟಕದಲ್ಲಿ ಭಂಡಾರದ ಒಡೆಯ ಎಂದು ಕರೆಯಲಾಗುತ್ತದೆ. ಮೈಲಾರ ಭಕ್ತರು ಹಾಗೂ ಮೈಲಾರನಿಗೆ ಭಂಡಾರವು ಪ್ರಿಯವಾದ ವಸ್ತು. ಮೈಲಾರ ಎಂದಾಗ ನೆನಪಾಗುವುದು ಭಂಡಾರದ ಪ್ರಿಯ, ಮೈಲಾರನೆಂದು ಅದಕ್ಕಾಗಿ ಹಬ್ಬ-ಹರಿದಿನಗಳಲ್ಲಿ ಭಂಡಾರ ವಿಲ್ಲದೆ ಮೈಲಾರನಿಗೆ ಪೂಜೆ ಸಲ್ಲುವುದಿಲ್ಲ. ಮೈಲಾರಿನಗಿಂತ ಮೊದಲು ಭಂಡಾರವು ಜನ್ಮ ತಾಳಿದೆ ಎಂದು ಮೈಲಾರ ಭಕ್ತರ ನಂಬಿಕೆಯಾಗಿದೆ. ಶಿವನ ಹುಟ್ಟಿದಾಗ ಭಂಡಾರವು ಜನ್ಮ ತಾಳಿದೆ. ಹಾಗೂ ಮೈಲಾರನು ಖಂಡುಗ ಭಂಡಾರದವನು ಎಂಬ ನಂಬಿಕೆ ಜನರಲ್ಲಿದೆ. ಕಂಚಾವೀರರ ಮಾಡುವ ಪವಾಡಗಳ ಗಾಯಕ್ಕೆ ಭಂಡಾರವನ್ನು ಹಚ್ಚುತ್ತಾರೆ. ಏಕೆಂದರೆ ಮೈಲಾರನ ಪ್ರಿಯವಾದ ವಸ್ತು ಭಂಡಾರ, ಗಾಯ ವಾಸಿಯಾಗುತ್ತದೆ ಎಂದು ವೈಜ್ಞಾನಿಕವಾಗಿ ಸತ್ಯವು ಸಹ. ಭಂಡಾರಕ್ಕೆ ಗಾಯವನ್ನು ವಾಸಿಮಾಡುವ ಶಕ್ತಿ ಇದೆ. ಭಂಡಾರವನ್ನು ಉಪಯೋಗಿಸುವ ದೇವರುಗಳೆಂದರೆ ಯಲ್ಲಮ್ಮ, ಮೈಲಾರ ತಂಗಿ ಎಂಬ ನಂಬಿಕೆ ಮೈಲಾರನ ಭಕ್ತರಲ್ಲಿದೆ. ಮೈಲಾರನಿಗೆ ವಾರದಲ್ಲಿ ಪವಿತ್ರವಾದ ದಿನ ಭಾನುವಾರ ಏಕೆಂದರೆ ಮೈಲಾರನು ಜನ್ಮ ತಾಳಿದ್ದು ಮಾರ್ಗಶಿರ ಶುದ್ಧ ಷಷ್ಠಿ ಅಂದು. ಅದಕ್ಕಾಗಿ ಮೈಲಾರ ಭಕ್ತರು ಭಾನುವಾರದಂದು ದೇವರ ವಾರವೆಂದು ಆ ದಿನದ ವಿಶೇಷವಾದ ಮತ್ತು ವಿಶೇಷವಾಗಿ ಆಚರಿಸುತ್ತಾರೆ. ಮೈಲಾರನು ಮಾರ್ತಾಂಡ ಭೈರವನ ರೂಪವಾಗಿದ್ದಾನೆ. ಅದಕ್ಕಾಗಿ ಮೈಲಾರನ ಭಕ್ತರು ಎಕ್ಕೆಗಿಡದಲ್ಲಿ ಮೈಲಾರನು ವಾಸವಾಗಿದ್ದಾನೆ. ಅದಕ್ಕಾಗಿ ಅದನ್ನು ಪೂಜಿಸುವ ಪರಿಪಾಠ ಇಂದಿಗೂ ಕಾಣಬಹುದಾಗಿದೆ.

ಮೈಲಾರ ಭಕ್ತರಲ್ಲಿ ಕುದುರೆಯ ಬಣ್ಣ ಬಿಳಿ ಎಂದು ಭಕ್ತರ ನಂಬಿಕೆಯಾಗಿದೆ. ಮಣಿಕಾಸುರ ಮೈಲಾರನ ವಾಹನವಾಗಿ ಕುದುರೆಯಾಗಿದ್ದಾನೆ, ಎಂಬುದು ಜನರ ನಂಬಿಕೆಯಾಗಿದೆ. ಏಕೆಂದರೆ ಮಣಿಕಾಸುರ ಮಲ್ಲಾಸುರ ಕೊಲ್ಲಲು ಶಿವನು ಭೈರವನ ರೂಪತಾಳಿ ಮಣಿಕಾಸುರನನ್ನು ನಾಶಮಾಡಲು ಮುಂದಾದಾಗ ಮಣಿಕಾಸುರನ ಬೇಡಿಕೊಂಡು

ಕುದುರೆಯ ರೂಪದಲ್ಲಿ ನನ್ನನ್ನು ಸ್ವೀಕರಿಸುವಂತೆ ಕೇಳಿಕೊಳ್ಳುತ್ತಾನೆ. ಶಿವನು ಒಪ್ಪಿ ವಾಹನವಾಗಿಸಿ ಕೊಂಡಿದ್ದಾನೆ ಎಂದು ಇಲ್ಲಿಯ ಜನರ ನಂಬಿಕೆ.

ತನ್ನಲ್ಲಿರುವ ಮೈಲಾರದ ಅನೇಕ ನೆಲೆಗಳಲ್ಲಿ ಹೂವಿನಹಡಗಲಿಯ ಮೈಲಾರನೆ ಮೂಲ ನೆಲೆ ಎಂದು ಜನರ ನಂಬಿಕೆ. ಹೇಗೆಂದರೆ ಕರ್ನಾಟಕದಲ್ಲಿ ನಡೆಯುವ ಅತ್ಯಂತ ಹೆಚ್ಚು ಜನರು ಒಂದೇ ಸ್ಥಳದಲ್ಲಿ ಸೇರುವುದರಿಂದ ಮೈಲಾರನು ಇಲ್ಲಿಯೇ ಜನ್ಮ ತಾಳಿದ್ದಾರೆಂದು ಜನರ ನಂಬಿಕೆಯಾದರೆ ಆದರೆ ಶಾಸನಗಳನ್ನು ಗಮನಿಸಿದಾಗ ಪ್ರಾಚೀನ ಶಾಸನ ಸಿರುಗುಪ್ಪ ತೆಕ್ಕಲಕೋಟೆಯಲ್ಲಿ ಮೈಲಾರ ದೇವರಿಗೆ ದತ್ತಿ ಬಿಟ್ಟ ಉಲ್ಲೇಖ ಪ್ರಾಚೀನವಾಗಿ ದೊರೆಯುತ್ತದೆ.

ಭಾರತ ದೇಶದ ದಕ್ಷಿಣ ಪ್ರದೇಶದಲ್ಲಿ ಪ್ರಸಿದ್ಧ ದೇವರು ಮೈಲಾರ. ದಕ್ಷಿಣ ಭಾರತದಲ್ಲಿ ಕರ್ನಾಟಕದ ಬೀದರ್‌ನ ಭಾಲ್ಕಿಯಲ್ಲಿ ಪ್ರೇಮಪುರ ಮೈಲಾರನು ಇಲ್ಲಿಯೇ ಮೊದಲು ಜನ್ಮತಾಳಿದನೆಂದು ಅಲ್ಲಿನ ಜನರ ನಂಬಿಕೆಯಾಗಿದೆ. ಈ ನಂಬಿಕೆ ಬರಲು ಕಾರಣವೇನೆಂದರೆ ಮಹಾರಾಷ್ಟ್ರದಲ್ಲಿ ಪ್ರಸಿದ್ಧವಾದ ದೇವರು ಖಂಡೋಬಾ ಅಂದರೆ ಮೈಲಾರ ಬೀದರ್ ಮಹಾರಾಷ್ಟ್ರದ ಗಡಿ ಸಮೀಪದ ಜನರು ಖಂಡೋಬಾ ಜಾತ್ರೆಗಳಲ್ಲಿ ಹೋಗುತ್ತಿರುತ್ತಾರೆ. ಅದಕ್ಕಾಗಿ ಬೀದರ್ ಮೈಲಾರನೆ ಮೊದಲು ಇಲ್ಲಿ ಜನ್ಮತಾಳಿ ಕಾಲಾನಂತರದಲ್ಲಿ ಮಹಾರಾಷ್ಟ್ರದಲ್ಲಿ ಖಂಡೋಬನಾಗಿದ್ದಾನೆ ಎಂದು ಅಲ್ಲಿನ ಭಕ್ತರ ನಂಬಿಕೆಯಾಗಿದೆ.

ಹೂವಿನಹಡಗಲಿಯಲ್ಲಿರುವ ಮೈಲಾರನಿಗೆ ತುಂಬಾ ಪ್ರಾಮುಖ್ಯತೆಯನ್ನು ಭಕ್ತರು ಕೊಡುತ್ತಾರೆ. ಹೂವಿನಹಡಗಲಿಯಲ್ಲಿರುವ ಮೈಲಾರ ಅಣ್ಣ ದೇವರುಗುಡ್ಡದಲ್ಲಿ ಮಾಲತೇಶ ತಮ್ಮನೆಂದು ಭಕ್ತರ ನಂಬಿಕೆಯಾಗಿದೆ. ಅದಕ್ಕಾಗಿ ಮೊದಲು ಹೂವಿನಹಡಗಲಿಯ ಮೈಲಾರಕ್ಕೆ ಭಕ್ತರು ಬಂದು ನಂತರದಲ್ಲಿ ದೇವರಗುಡ್ಡ ಮಾಲತೇಶನಿಗೆ ದರ್ಶನವನ್ನು ನೀಡುತ್ತಾರೆ. ಕರ್ನಾಟಕದ, ಮಹಾರಾಷ್ಟ್ರದ, ಆಂಧ್ರಪ್ರದೇಶದ ಮುಂತಾದ ಸ್ಥಳಗಳಲ್ಲಿ ಮೈಲಾರನ ನೆಲೆಗಳಿವೆ. ಮೈಲಾರನಿಗೆ ಈ ಎಲ್ಲ ಪ್ರದೇಶಗಳಿಂದ ಮೈಲಾರನಿಗೆ ಕಾಣಿಕೆಗಳು ಬರುತ್ತವೆ. ಈ ದೇವರಿಗೆ ಕಾಣಿಕೆ ನೀಡುವಂತೆ ಎಲ್ಲ ಪ್ರದೇಶದ ಜನರು ಮೈಲಾರನ ಜಾತ್ರೆಗೆ ಬಂದು ಕಾಣಿಕೆಗಳನ್ನು ನೀಡುತ್ತಾರೆ.

ಹೂವಿನಹಡಗಲಿಯ ಮೈಲಾರದಲ್ಲಿ ನಡೆಯುವ ಕಾರಣಿಕ ನುಡಿಯು ಮೈಲಾರನ ಭಕ್ತರಲ್ಲಿ ಪ್ರಾಮುಖ್ಯತೆ ಬಂದಿದೆ. ಏಕೆಂದರೆ ಕಾರಣಿಕ ನುಡಿಯಿಂದ ಆ ವರ್ಷದ ಭವಿಷ್ಯ ನಿಂತಿರುತ್ತದೆ. ಮಳೆ, ಬೆಳೆ, ರಾಜಕೀಯ, ಪ್ರಾಕೃತಿಕ ಏರುಪೇರುಗಳನ್ನು ಕಾರಣಿಕ ನುಡಿಯಿಂದ ಭಕ್ತರು ಆ ವರ್ಷದ ಭವಿಷ್ಯವನ್ನು ಊಹಿಸುತ್ತಾರೆ. ಇದು ಮೈಲಾರ ಭಕ್ತರ ಪ್ರಮುಖವಾದ ನಂಬಿಕೆಯಾಗಿದೆ.

ಮೈಲಾರ ಮತ್ತು ಗಂಗೆಮಾಳಮ್ಮನ ಲಗ್ನವನ್ನು ಮೈಲಾರನ ಅನೇಕ ನೆಲೆಗಳಲ್ಲಿ ಆಚರಣೆಯಾಗುತ್ತದೆ. ಆ ಸಮಯದಲ್ಲಿ ಹಾಲು ಉಕ್ಕಿಸುವ ಕಾರ್ಯಕ್ರಮದಲ್ಲಿ ಹಾಲು ಯಾವ ದಿಕ್ಕಿಗೆ ಉಕ್ಕುತ್ತದೆ ಆ ಕಡೆ ಮಳೆ-ಬೆಳೆ ಸಮೃದ್ಧಿಯಿಂದ ಆಗುತ್ತದೆ ಎಂಬ ಭಕ್ತರ ನಂಬಿಕೆಯಾಗಿದೆ.

ಮೈಲಾರನಿಗೆ ಪ್ರಿಯವಾದ ಆಹಾರ ಹೋಳಿಗೆ, ಹಣ್ಣು, ತುಪ್ಪ, ಹಾಲು ಆಗಿದೆ. ಅದಕ್ಕಾಗಿ ದೋಣಿ ತುಂಬುವಾಗ ಈ ಎಲ್ಲಾ ಆಹಾರಗಳನ್ನು ಭಕ್ತರು ಇವುಗಳನ್ನು ಇಟ್ಟು ನೈವೇದ್ಯ ಮಾಡಿ ಪೂಜಿಸುತ್ತಾರೆ. ಆದರೆ ಶಿವ ಪ್ರತಿರೂಪವಾಗಿರುವ ಮೈಲಾರನಿಗೆ ಯಾವುದೇ ರೀತಿ ಮಾಂಸಾಹಾರ ನೈವೇದ್ಯ ಆಗುವುದಿಲ್ಲ. ಮೈಲಾರನಿಗೆ ಮಾಂಸಾಹಾರ ನಿಷಿದ್ಧವಾಗಿದೆ. ಅದಕ್ಕಾಗಿ ಭಕ್ತರು ಸಿಹಿಯಾದ ಆಹಾರವನ್ನು ನೈವೇದ್ಯ ಮಾಡಿ ಪೂಜಿಸುತ್ತಾರೆ.

ಮೈಲಾರನ ಭಕ್ತರಾದ ಗೊರವರಿಗೆ ವಿಶೇಷವಾದ ಸ್ಥಾನಮಾನವನ್ನು ಕರ್ನಾಟಕದಲ್ಲಿ ಎಲ್ಲ ಪ್ರದೇಶಗಳಲ್ಲಿ ಕಾಣಬಹುದು. ಮೈಲಾರ ಗೊರವರ ರೂಪತಾಳಿದ್ದನೆಂದು ಭಕ್ತರ ನಂಬಿಕೆಯಾಗಿದೆ. ದೋಣಿಸೇವೆ ಆಚರಣೆಯಲ್ಲಿ ಗೊರವರ ಪೂಜೆಯಾದ ಮೇಲೆ ಇನ್ನಿತರ ಭಕ್ತರು ಪ್ರಸಾದವನ್ನು ಸ್ವೀಕರಿಸುತ್ತಾರೆ. ಗೊರವರ ಬಳಿ ಇರುವ ದೋಣಿ ಪವಿತ್ರವಾದ ಸ್ಥಾನಮಾನವನ್ನು ಹೊಂದಿದೆ. ಗೊರವರಿಗೆ ಅಕ್ಷಯ ಪಾತ್ರೆಯಾಗಿದೆ. ಭಕ್ತರ ನಂಬಿಕೆಯಂತೆ ದೋಣಿಯಲ್ಲಿ ವಿಷವನ್ನು ಹಾಕಿದರು ಅಮೃತವನ್ನು ಹೊಂದುವುದೆಂದು ಮೈಲಾರನ ಆರಾಧಕರ ನಂಬಿಕೆಯಾಗಿದೆ. ಮೈಲಾರ ಎಲ್ಲ ಕ್ಷೇತ್ರಗಳಲ್ಲೂ ಮೈಲಾರನಿಗೆ ಎಲ್ಲ ಸಮುದಾಯಗಳಲ್ಲೂ ಪೂಜಾರಿಗಳು, ಗೊರವರು ಹಾಗೂ ದೇವರನ್ನು ಆರಾಧಿಸುವ ಜನರಿದ್ದಾರೆ. ಮೈಲಾರನಿಗೆ ಸಮುದಾಯ-ಭೇದವಿಲ್ಲ. ಮೈಲಾರನಿಗೆ ಆರಾಧಿಸುವ ಭಕ್ತರೆಲ್ಲ ಒಂದೇ, ಮೈಲಾರನ ಮಕ್ಕಳು ಎಂಬುದು ಜನರ ನಂಬಿಕೆಯಾಗಿದೆ. ಕುರುಬ ರಾಮೋಜಿ ಜನರಿಂದ ಹಿಡಿದು ಬ್ರಾಹ್ಮಣದವರೆಗೂ ಮೈಲಾರನಿಗೆ ಆರಾಧಕರಿದ್ದಾರೆ. ಮುಸ್ಲಿಮರಲ್ಲೂ ಮೈಲಾರನನ್ನು ಪೂಜಿಸುವ ಆರಾಧಿಸುವ ಪರಿಪಾಠವನ್ನು ನಾವು ಕರ್ನಾಟಕದ ನಾನಾ ಭಾಗಗಳಲ್ಲಿ ಕಾಣಬಹುದು.

ಮೈಲಾರನಿಗೆ ಅನೇಕ ಪರಿವಾರ ದೇವತೆಗಳನ್ನು ಕಾಣಬಹುದು. ಪ್ರಮುಖವಾಗಿ ಎಲ್ಲಾ ದೇವಾಲಯಗಳಲ್ಲಿ ಹೆಗ್ಗಪ್ಪನ ಮೂರ್ತಿಗಳನ್ನು ಹಾಗೂ ಹೆಗ್ಗಡೆಯನ್ನು ಪೂಜಿಸುವ ಪರಿಪಾಠವಿದೆ. ಹೆಗ್ಗಡೆಯು ಮೈಲಾರನಿಗೆ ಮಣಿಕಾಸುರ, ಮಲ್ಲಾಸುರನನ್ನು ಕೊಲ್ಲಲು ಸಹಾಯ ಮಾಡಿದನೆಂದು ಜನರ ನಂಬಿಕೆಯಾಗಿದೆ. ಅದಕ್ಕಾಗಿ ಜಾತ್ರೆಗೆ ಬಂದ ಜನರು ನಾವು ಯಾವುದೇ ವಾಹನಗಳಲ್ಲಿ ಜಾತ್ರೆಗೆ ಬಂದು ಮರಳಿ ಮನೆಗೆ ತಲುಪುವವರೆಗೂ ಮೈಲಾರನ ಪ್ರಧಾನಿಯಾದ ಹೆಗ್ಗಪ್ಪನು ನಮ್ಮನ್ನು ಸಂರಕ್ಷಿಸುತ್ತಾನೆ ಮನೆಗೆ ತಲುಪುವಂತೆ ಮಾಡುತ್ತಾನೆಂದು ಜನರ ನಂಬಿಕೆಯಾಗಿದೆ.

ಕಂಚಾವೀರರು ಭಾನುವಾರದಂದು ಮಾಂಸವನ್ನು ಸೇವಿಸುವುದಿಲ್ಲ, ಕಡ್ಡಾಯವಾಗಿ ಸಸ್ಯಾಹಾರವನ್ನು ಸೇವಿಸಬೇಕು. ಇದು ಮೈಲಾರನ ಮತ್ತೊಂದು ನಂಬಿಕೆಯಾಗಿದೆ. ಭಂಡಾರವನ್ನು ಸಿದ್ಧಪಡಿಸುವಾಗ ಅರಿಶಿನ ಕೊಂಬು ತೆಗೆದುಕೊಂಡು ಅದನ್ನು ಬಂಗಾರ, ಬೆಳ್ಳಿ, ಹವಳ, ಕುರಿಯ ಉಣ್ಣೆಯೊಂದಿಗೆ ಸೇರಿಸಿ ಅರಿಶಿನವನ್ನು ತಯಾರಿಸಬೇಕು. ಮೈಲಾರನ ಜಾತ್ರೆಗಾಗಲಿ, ಕಾರಣಿಕಕ್ಕೆ ಆಗಲಿ, ದೇವಾಲಯಕ್ಕೆ ಆಗಲಿ ಬರಿಗಾಲಿನಲ್ಲಿ ಬರಬೇಕು. ಗೊರವರು ಕೊಟ್ಟ ಪ್ರಸಾದವನ್ನು ಸ್ವೀಕರಿಸಿ ಸೇವಿಸಬೇಕು. ಇದು ಮೈಲಾರ ಭಕ್ತರ ನಂಬಿಕೆಗಳಾಗಿದೆ.

**ಮೈಲಾರ ಜಾತ್ರೆಯ ನಂಬಿಕೆಗಳು**

ಕರ್ನಾಟಕದಲ್ಲಿ ಹಲವಾರು ಸ್ಥಳಗಳಲ್ಲಿ ಮೈಲಾರನ ನೆಲೆಗಳಿವೆ. ಈ ಮೈಲಾರ ಜಾತ್ರೆಗಳಲ್ಲಿ ಅನೇಕ ಕಟ್ಟುಪಾಡುಗಳು, ನಿಯಮಗಳು ಹಾಗೂ ನಂಬಿಕೆ ಆಚರಣೆಗಳನ್ನು ಜಾತ್ರೆಯ ಸಮಯದಲ್ಲಿ ಕಾಣಬಹುದು. ಪ್ರಮುಖವಾಗಿ ಸಮುದಾಯದ ಎಲ್ಲೆಯನ್ನು ಮೀರಿದ ದೈವ ಮೈಲಾರ ಎಲ್ಲಾ ಜನಸಮುದಾಯದಲ್ಲಿ ನೆಲೆಯೂರಿದ ದೈವ ಮೈಲಾರ. ಜಾತ್ರೆಯ ಸಮಯದಲ್ಲಿ ಅದರಲ್ಲಿ ಕಾರಣಿಕ ಸಮಯದಲ್ಲಿ ಅನೇಕ ನಿಯಮಗಳನ್ನು ಮೈಲಾರ ಭಕ್ತರು ಪಾಲಿಸುತ್ತಾರೆ.

ಜಾತ್ರೆಗೆ ಪ್ರಸ್ತುತ ದಿನಮಾನದಲ್ಲಿ ಅನೇಕ ವಾರಗಳಿಂತ ಮುಂಚೆ ಮೈಲಾರನ ದರ್ಶನವನ್ನು ಪಡೆಯಲು ಭಕ್ತರು ಬರುತ್ತಾರೆ. ಆದರೆ ಜಾತ್ರೆಗೆ ಬರುವಾಗ ಎತ್ತಿನ ಗಾಡಿಯಲ್ಲಿ ಬರಬೇಕೆಂಬ ನಂಬಿಕೆಯನ್ನು ಮೈಲಾರನ ಭಕ್ತರ ಪ್ರಬಲವಾದ ನಂಬಿಕೆಯಾಗಿದೆ. ಅದಕ್ಕಾಗಿ ಸಾಂಪ್ರದಾಯಿಕವಾಗಿ ಹಿರಿಯ ತಲೆಮಾರಿನ ಪರಂಪರೆಯನ್ನು ಉಳಿಸಿಕೊಂಡು ಬಂದ ಜನರು ಎತ್ತಿನ ಗಾಡಿಯಲ್ಲಿ ಮೈಲಾರನ ಜಾತ್ರೆಗೆ ಬರುತ್ತಾರೆ.

ಕಾರಣಿಕದ ಗೊರವನಿಗೆ ವಿಶೇಷವಾದ ಸ್ಥಾನಮಾನವಿದ್ದು, ಉಪವಾಸವನ್ನು ಕಾರಣಿಕ ವಾಗುವವರೆಗೂ ಇರಬೇಕು. ಹಾಗೂ ಕಾರಣಿಕ ನುಡಿಯುವ ನಿಶಬ್ಧತೆಯಿಂದ ಜನರು ಕಾರಣಿಕ ನುಡಿಯುವ ನುಡಿಯನ್ನು ಆಲಿಸಬೇಕು. ಜಾತ್ರೆಯ ಸಮಯದಲ್ಲಿ ದೋಣಿಯಲ್ಲಿ ಆಹಾರ ನೀಡಬೇಕು. ದೋಣಿಯಲ್ಲಿ ನೀಡಿದ ಆಹಾರ ಮೈಲಾರನಿಗೆ ನೀಡಿದಂತೆ ಎಂಬ ನಂಬಿಕೆ ಮೈಲಾರ ಭಕ್ತರಲ್ಲಿ ಕಾಣಬಹುದು.

ಜಾತ್ರೆಯಲ್ಲಿ ಗೊರವ-ಗೊರವಿಯರಾಗಲು ದೀಕ್ಷೆಯನ್ನು ಪಡೆಯಲು ಒಡೆಯರು, ಹಿರಿಯ ಗೊರವ ಅವರಿಂದ ಹಾಗೂ ಗಣಚಾರಿಗಳಿಂದ ದೀಕ್ಷೆಯನ್ನು ಪಡೆಯಬೇಕು. ಇದು ಪ್ರಮುಖವಾಗಿ ಮೈಲಾರ ಭಕ್ತರ ನಂಬಿಕೆಯಾಗಿದೆ. ದೀಕ್ಷೆಯನ್ನು ಪಡೆದ ಗೊರವ ಸುಳ್ಳನ್ನು ಹೇಳಬಾರದು. ಹಾವನ್ನು ಸಾಯುವಂತಿಲ್ಲ. ಹೊಲದಲ್ಲಿ ಹಸು ಮೇವು ತಿನ್ನುತ್ತಿದ್ದರೆ

ಅದನ್ನು ಓಡಿಸುವಂತಿಲ್ಲ, ಕರು ಹಾಲು ಕುಡಿಯುತ್ತಿದ್ದರೆ ಅದನ್ನು ಕಟ್ಟುವಂತಿಲ್ಲ. ಎಂಬ ನಂಬಿಕೆಯನ್ನು ಹಾಗೂ ಆಚರಣೆಯನ್ನು ಮಾಡಬೇಕು. ಎಂದು ದೀಕ್ಷೆ ನೀಡಿದ ಗೊರವ ದೀಕ್ಷೆ ಪಡೆದ ಗೊರವರಿಗೆ ಹೇಳುತ್ತಾರೆ. ಇದೇ ಪ್ರಕಾರವಾಗಿ ಮೈಲಾರನ ದೀಕ್ಷೆ ಪಡೆದ ಭಕ್ತರು, ನಿಯಮವನ್ನು ಪಾಲಿಸುತ್ತಾರೆ. ದೀಕ್ಷೆಯನ್ನು ಪಡೆದ ಗೊರವ ಐದು ಮನೆಗಳಿಗೆ ಹೋಗಿ ಭಿಕ್ಷೆಯನ್ನು ಬೇಡಬೇಕು. ಗೊರವನು ಎಷ್ಟೇ ಆರ್ಥಿಕವಾಗಿ ಸಮೃದ್ಧವಾಗಿದ್ದರೂ ಭಿಕ್ಷೆ ಬೇಡುವುದು ಕಡ್ಡಾಯವಾಗಿ ಪಾಲಿಸಬೇಕು. ದೋಣಿಗೆ ನೀಡಿದ ಆಹಾರವನ್ನು ಗೊರವ ಸೇವಿಸಬೇಕು. ಇದೇ ಗೊರವನಿಗೆ ಆಹಾರವಾಗಿದೆ. ಈ ಆಹಾರವನ್ನು ಚೆಲ್ಲುವಂತಿಲ್ಲ. ಹಾಗೂ ದೋಣಿಯಲ್ಲಿ ಹಾಗೆ ಬಿಡುವಂತಿಲ್ಲ. ಕಂಚಾವೀರರು ಮೈಲಾರನ ಉತ್ಸವ ಹೊರಡುವ ಸಮಯದಲ್ಲಿ ಕಡ್ಡಾಯವಾಗಿರಬೇಕು. ಖಡ್ಗದಾರಿಯರಾಗಿ ಮೈಲಾರ ಉತ್ಸವದ ಮುಂದೆ ಹೋಗಬೇಕು. ಒಡಪುಗಳನ್ನು ಹೇಳಬೇಕು. ಮೈಲಾರ ಜಾತ್ರೆಗಳಲ್ಲಿ ಇಂತಹ ನಂಬಿಕೆ-ಆಚರಣೆಗಳನ್ನು ಕಾಣಬಹುದು.

### ಮೈಲಾರ ಭಕ್ತರ ನಿಯಮಗಳು

ಮೈಲಾರ ದೇವತೆಯ ಆರಾಧಕರಲ್ಲಿ ಕೆಲವು ನಿಯಮಗಳು ಭಕ್ತ ಸಮುದಾಯದ ಪಾಲಿಸುತ್ತಾರೆ. ಜನರ ಮನಸ್ಸಿನಲ್ಲಿ ಯಾವುದು ತಪ್ಪು? ಯಾವುದು ಸರಿ? ಎಂಬ ಜ್ಞಾನವಿದೆ. ಅದಕ್ಕಾಗಿ ಮೈಲಾರನ ನಂಬಿಕೆಯ ಆಚರಣೆಗಳಲ್ಲಿ ಹಲವಾರು ನಿಯಮಗಳನ್ನು ಪಾಲಿಸಿಕೊಂಡು ಇಂದಿಗೂ ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಮೈಲಾರನ ಭಕ್ತರಾದ ನಾಯಿಗೊರವರು ಎಂಬ ಪಂಗಡವಿದೆ. ನಾಯಿ ಗೊರವರು ನಾಯಿಯನ್ನು ಸಾಕಿರುತ್ತಾರೆ. ಈ ನಾಯಿಯನ್ನು ಬೇರೆ ಯಾರು ಹೊಡೆಯುವಂತಿಲ್ಲ. ಕಾಲಿನಿಂದ ತಳ್ಳುವಂತಿಲ್ಲ. ಇದು ಮೈಲಾರ ಭಕ್ತರಲ್ಲಿ ಇರುವ ಪ್ರಮುಖವಾದ ನಿಯಮವಾಗಿದೆ. ಮೈಲಾರನ ವಾಹನ ಕುದುರೆ, ಕುದುರೆಗೆ ಮೈಲಾರನ ಸ್ಥಳಗಳಲ್ಲಿ ವಿಶೇಷವಾದ ಸ್ಥಾನಮಾನವನ್ನು ಹೊಂದಿ ಪೂಜಿಸಲಾಗುತ್ತದೆ. ಅದಕ್ಕಾಗಿ ಹೂವಿನಹಡಗಲಿ ಮೈಲಾರದಲ್ಲಿ ಕುದುರೆ ಹಬ್ಬವನ್ನು ಮಾಡುತ್ತಾರೆ. ಕುದುರೆಗೆ ಮೊದಲು ಆಹಾರವನ್ನು ನೀಡುತ್ತಾರೆ. ಮೈಲಾರ ಭಕ್ತರು ಕುದುರೆಯನ್ನು ಹತ್ತಬಾರದು ಎಂಬ ನಿಯಮ ಹೊಂದಿದ್ದಾರೆ. ಏಕೆಂದರೆ ಮೈಲಾರ ವಾಹನವಾದ ಕುದುರೆಯನ್ನು ಮೈಲಾರರು ಬಿಟ್ಟರೆ ಬೇರೆ ಯಾರೂ ಹತ್ತಬಾರದು. ಎಂಬ ನಿಯಮವನ್ನು ಪರಿಪಾಲಿಸುತ್ತ ಬಂದಿದ್ದಾರೆ. ಹಿರೇಮೈಲಾರದಲ್ಲಿ ಮೌನಗುಪ್ತಸವಾರಿ ಎಂಬ ಆಚರಣೆ ನಡೆಯುತ್ತದೆ. ಮೌನಗುಪ್ತಸವಾರಿಯಾಗಿ ಮೈಲಾರನು ಮಣಿ-ಮಲ್ಲರನ್ನು ಕೊಲ್ಲಲು ಹೊರಡುವ ಸಂದರ್ಭವಾಗಿದೆ. ಈ ಅಣಕು ಪ್ರದರ್ಶನವನ್ನು ಮಾಡುವಾಗ ದಾರಿಯುದ್ದಕ್ಕೂ ಎಲ್ಲ ಭಕ್ತರು ಮೌನವನ್ನು ವಹಿಸಬೇಕು. ಎಂಬ ನಿಯಮವನ್ನು ಹೊಂದಿದ್ದಾರೆ.

ಕಂಚಾವೀರರಿಗೆ ವಿಶೇಷವಾದ ನಿಯಮಗಳಿವೆ ಕಂಚಾವೀರರು ತಮ್ಮ ಪವಾಡಗಳನ್ನು ಜಾತ್ರೆ, ಹಬ್ಬ-ಹರಿದಿನಗಳಲ್ಲಿ ಮಾಡಬೇಕು. ಬೇರೆ ಯಾವ ಸಮಯದಲ್ಲೂ ಪವಾಡಗಳನ್ನು ಮಾಡಬಾರದೆಂಬ ನಿಯಮವನ್ನು ಹೊಂದಿದ್ದಾರೆ. ಮೈಲಾರನ ಆರಾಧಕರು ಕಾರಹುಣ್ಣಿಮೆಯ ನಂತರ ಮದುವೆ ಕಾರ್ಯಕ್ರಮಗಳನ್ನು ಮಾಡುವಲ್ಲಿ ಆ ಸಮಯದಲ್ಲೂ ಮೈಲಾರ ಮಾಳಮ್ಮನ ಮದುವೆಯ ಆಚರಣೆ ನಡೆಯುವುದರಿಂದ ಈ ನಿಯಮವನ್ನು ಪಾಲಿಸುತ್ತಾ ಬಂದಿದ್ದಾರೆ. ಗೊರವ-ಗೊರವಿಯರಲ್ಲಿ ತಮ್ಮ ಜೊತೆ ಯಾವಾಗಲೂ ದೋಣಿಯನ್ನು ಇಟ್ಟುಕೊಂಡಿರಬೇಕು. ಹಾಗೂ ಆ ದೋಣಿಯಲ್ಲಿ ಊಟಮಾಡಬೇಕು. ದೋಣಿಯಲ್ಲಿ ನೀಡಿದ ಆಹಾರವನ್ನು ಚೆಲ್ಲಬಾರದು ಎಂಬ ನಿಯಮವನ್ನು ಪಾಲಿಸಬೇಕು.

**ಮೈಲಾರ ಭಕ್ತರ ಬೇಡಿಕೆಗಳು**

ಮೈಲಾರನ ಭಕ್ತರು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಉಗ್ರವಾದ ಆಚರಣೆಗಳನ್ನು ಮಾಡುತ್ತಾರೆ. ಕಾಲಿಗೆ ಚಾಟಿಯಿಂದ ಹೊಡೆದುಕೊಳ್ಳುವುದು, ಮುಖಕ್ಕೆ ಶಸ್ತ್ರವನ್ನು ಚುಚ್ಚಿಕೊಳ್ಳುತ್ತಾರೆ ಹಾಗೂ ದೀಡು ನಮಸ್ಕಾರವನ್ನು ಮಾಡುವ ಮೂಲಕ ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಾರೆ. ತಮ್ಮ ಬೇಡಿಕೆಗಳ ಪೂರೈಕೆಗಾಗಿ, ಹೊರೆ ಹೊರುವುದಾಗಿ, ದೇವಾಲಯದ ಸುತ್ತಲೂ ಉರುಳು ಸೇವೆ ಮಾಡುವುದಾಗಿ, ಉಪವಾಸವನ್ನು ಮಾಡುವುದಾಗಿ, ಹರಕೆಯನ್ನು ಹೊತ್ತಿರುತ್ತಾರೆ. ಮೈಲಾರ ಭಕ್ತರಲ್ಲಿ ತಮ್ಮ ಹರಕೆಯನ್ನು ಕಾಣಿಕೆಯ ರೂಪದಲ್ಲಿ ಸಲ್ಲಿಸುತ್ತಾರೆ. ದೇವರ ಸೇವೆಯನ್ನು ಮಾಡುವ ಮೂಲಕ ತಮ್ಮ ಹರಕೆಯನ್ನು ಪೂರೈಸುತ್ತಾರೆ. ಮಕ್ಕಳಾಗದವರಿಗೆ ಮಕ್ಕಳನ್ನು ನೀಡಿದರೆ, ಜನಿಸಿದ ಮಗನಿಗೆ ಹೊರೆ ಹೊರಸುವುದಾಗಿ ಬೇಡಿಕೊಂಡಿರುತ್ತಾರೆ. ಈ ಮಕ್ಕಳಾದಾಗ ಮಕ್ಕಳಿಂದ ಹೊರೆ ಹೊರಿಸಿ ತಮ್ಮ ಹರಕೆಯನ್ನು ತೀರಿಸುತ್ತಾರೆ. ಕಾರಣಿಕದ ಸಮಯದಲ್ಲಿ ಮುಂದಿನ ವರ್ಷ ನನ್ನಮಗ ಅಥವಾ ಮಗಳಿಗೆ ಉದ್ಯೋಗ ದೊರಕಲಿ ಎಂಬ ಹರಕೆಯನ್ನು ಕಟ್ಟಿಕೊಂಡಿರುತ್ತಾರೆ. ಈ ಬೇಡಿಕೆಯು ಈಡೇರಿಸಿದಲ್ಲಿ ನಿನಗೆ ದೋಣಿಸೇವೆ, ಪಾದಯಾತ್ರೆ ಹಾಗೂ ದೇವರ ಸೇವೆ ಮಾಡುವುದಾಗಿ ಹರಕೆಯನ್ನು ಹೊತ್ತಿರುತ್ತಾರೆ. ತಮ್ಮ ಬೇಡಿಕೆ ಈಡೇರಿದರೆ ಅನ್ನಸಂತರ್ಪಣೆ ಮಾಡುವುದಾಗಿ ಕೆಲ ಭಕ್ತರು ಹರಕೆಗಳನ್ನು ಹೊತ್ತು ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಾರೆ.

ಮೈಲಾರ ಭಕ್ತರು ತಮ್ಮ ಬೇಡಿಕೆಗಳನ್ನು ಆಸೆಗಳನ್ನು ಹರಕೆ ಹೊತ್ತುಕೊಳ್ಳುವ ಮೂಲಕ ಪೂರೈಸಿಕೊಳ್ಳುತ್ತಾರೆ. ತಮ್ಮ ಮಕ್ಕಳಿಗೆ ಜವಳದ ಕಾರ್ಯ, ಕಿವಿ ಚುಚ್ಚುವುದು, ಅನಾರೋಗ್ಯ ಗುಣಮುಖವಾಗುವುದು, ತಮ್ಮ ಬೇಡಿಕೆಯನ್ನು ಮೈಲಾರನ ಬಳಿ ಕೇಳಿಕೊಳ್ಳುತ್ತಾರೆ. ಎಲ್ಲಾ ಬೇಡಿಕೆಗಳು ಜನರ ಸುಖಮಯ ಜೀವನಕ್ಕಾಗಿ ಹಾಗೂ ಮೈಲಾರನ ಮೇಲೆ ಇರುವ ಭಕ್ತಿಗಾಗಿ ನಮ್ಮ ಕಷ್ಟಗಳನ್ನು ಮೈಲಾರ ಪೂರೈಸುತ್ತಾನೆ ಎಂಬ ಭಾವನೆ, ನಂಬಿಕೆ ಮೈಲಾರನ ಭಕ್ತ ಸಮುದಾಯದಲ್ಲಿ ಕಾಣಬಹುದಾಗಿದೆ.

**ಸಮುದಾಯಗಳು**

ಜನಪದರ ನಿತ್ಯದ ಬದುಕಿನ ಆರಂಭ ಹಾಗೂ ಅಂತ್ಯವಾಗುವುದೇ ದೈವದ ಸ್ಮರಣೆಯಿಂದ. ಮೈಲಾರನು ಸಮುದಾಯ, ಜನಾಂಗ, ಮೇಲು, ಕೀಳು, ಮಡಿ, ಮೈಲಿಗೆ ಎಂಬ ಭೇದವನ್ನು ಮೀರಿ ಎಲ್ಲಾ ಜನಸಮುದಾಯದವರು ಮೈಲಾರನಿಗೆ ವಿಶೇಷವಾಗಿ ಆರಾಧನೆಯನ್ನು ಮಾಡುತ್ತಾರೆ. ಮೈಲಾರನಿಗೆ ಸಂಬಂಧಿಸಿದಂತೆ ಜನಸಮುದಾಯಗಳ ಪಾತ್ರ ಮಹತ್ವಪೂರ್ಣವಾಗಿದೆ. ಏಕೆಂದರೆ ಶಿಷ್ಟ ಮತ್ತು ಪರಿಶಿಷ್ಟ ಜನಸಮುದಾಯದಲ್ಲಿ ಆರಾಧನೆಯನ್ನು ಪಡಯುವ ದೈವವಾಗಿ ಕಂಡುಬರುತ್ತಾನೆ. ಜನಸಮುದಾಯಕ್ಕೂ ಮೈಲಾರನಿಗೆ ಅವಿನಾಭಾವ ಸಂಬಂಧವಿದೆ. ಮೈಲಾರನ ಜಾತ್ರೆ, ಉತ್ಸವ, ಹಬ್ಬ-ಹರಿದಿನಗಳಲ್ಲಿ ಒಂದೊಂದು ಸಮುದಾಯದವರು ತಮ್ಮ ತಮ್ಮ ಸೇವೆಗಳನ್ನು ಪೂರೈಸುತ್ತಾರೆ. ತಾವು ಮೈಲಾರನಿಗೆ ಸೇವೆಯನ್ನು ಸಲ್ಲಿಸಲು ತಲತಲಾಂತರದಿಂದ ನಡೆದುಕೊಂಡು ಬಂದ ನಂಬಿಕೆ-ಆಚರಣೆಗಳನ್ನು ಜೀವಂತಿಕೆಯಿಂದ ಉಳಿಸಿಕೊಂಡಿದ್ದಾರೆ. ಪ್ರಮುಖವಾಗಿ ಎಲ್ಲಾ ಸಮುದಾಯದಲ್ಲಿ ಮೈಲಾರನ ಭಕ್ತರಿದ್ದಾರೆ. ಇವರು ಜಾತ್ರೆಯ ಸಂದರ್ಭದಲ್ಲಿ ಒಂದಲ್ಲ ಒಂದು ರೀತಿಯ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಪ್ರಮುಖವಾಗಿ ಮೈಲಾರ ದೇವಾಲಯಗಳಲ್ಲಿ ಬ್ರಾಹ್ಮಣ, ಲಿಂಗಾಯತ, ಕುರುಬ, ಗೊಲ್ಲ, ಬೇಡ, ಉಪ್ಪಾರ, ಮಾದಿಗ, ಹೊಲೆಯ, ಮಡಿವಾಳ, ಕೊರಮ, ವಿಶ್ವಕರ್ಮ ಹಾಗೂ ಇನ್ನಿತರ ಜನಸಮುದಾಯದವರು ಈ ದೈವಕ್ಕೆ ಸೇವೆಯನ್ನು ಸಲ್ಲಿಸುತ್ತಾರೆ. ಮುಖ್ಯವಾಗಿ ಮೈಲಾರನಿಗೆ ಎಲ್ಲಾ ಸಮುದಾಯದಲ್ಲಿ ಗೊರವ ಗೊರವಿಯನ್ನು ಕಾಣಬಹುದು. ಕುರುಬ ಸಮುದಾಯದಲ್ಲಿ ಈ ದೈವಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಗೊರವರನ್ನು ಕಂಡುಬರುತ್ತಾರೆ. ಮುಸ್ಲಿಂ ಸಮುದಾಯದಲ್ಲಿ ಗೊರವರಾದ ಬಗೆಗೆ ಅನೇಕ ಆಧಾರಗಳು ಲಭ್ಯವಾಗುತ್ತವೆ. ಇಂತಹ ವಿಶಾಲತೆಯಿಂದ ಕೂಡಿದ ಈ ದೈವಕ್ಕೆ ಸಂಬಂಧಿಸಿದಂತೆ ಸಮುದಾಯಗಳಿಗೂ ಮೈಲಾರನಿಗೂ ಇರುವ ಸಂಬಂಧ, ಸಮುದಾಯಗಳು ಸಲ್ಲಿಸುವ ಸೇವೆಗಳು ಹಾಗೂ ಸಮುದಾಯಗಳು ಹೊಂದಿರುವ ನಂಬಿಕೆ ಆಚರಣೆಗಳನ್ನು ಈ ಉಪಶೀರ್ಷಿಕೆಯಲ್ಲಿ ಚರ್ಚಿಸುವ ಉದ್ದೇಶವನ್ನು ಹೊಂದಲಾಗಿದೆ. ಮೈಲಾರ ದೇವರ ಆರಾಧನೆಯನ್ನು ನಿರ್ದಿಷ್ಟವಾದ ಕ್ರಮವಿಧಾನದಿಂದ ಮಾಡಲಾಗುತ್ತದೆ. ದೈವಗಳ ಆಚರಣೆ, ಉತ್ಸವ, ಜಾತ್ರೆ, ನಿಗದಿಪಡಿಸಿದ ಸಮಯ ಸಂದರ್ಭದಲ್ಲಿ ನೆರವೇರಿಸುವ ಮೂಲಕ ತಮ್ಮ ಭಕ್ತಿಯನ್ನು ತೋರಿಸುತ್ತಾರೆ. ಹಾಗೆಯೇ ಜಾತ್ರೆ ಮತ್ತು ಉತ್ಸವಗಳಂತಹ ಸಂದರ್ಭದಲ್ಲಿ ನಿರ್ದಿಷ್ಟವಾದ ವ್ಯಕ್ತಿ, ಮನೆತನದವರು ಮಾತ್ರ ಕೆಲವೊಂದು ಕಾರ್ಯಗಳನ್ನು ನೆರವೇರಿಸಬೇಕಾಗುತ್ತದೆ. ಅವರು ಇಲ್ಲದಿದ್ದರೆ ಕೆಲಸ ಕಾರ್ಯಗಳೇ ನಡೆಯುವುದಿಲ್ಲ. ದೈವಗಳ ಆಚರಣೆ, ಜಾತ್ರೆಯ ಸಂದರ್ಭ ಹಾಗೂ ದಿನನಿತ್ಯದ ಸಂದರ್ಭಗಳಲ್ಲಿ ಅವುಗಳ ಉಸ್ತುವಾರಿಕೆಗೆ ಪಾರಂಪರಿಕವಾಗಿ ಅಥವಾ ನಿಗದಿತ ಅವಧಿಗೆ ಮೀಸಲಾಗಿ ಕೆಲವು ವ್ಯಕ್ತಿ ಅಥವಾ ಮನೆತನದವರು ಜವಾಬ್ದಾರಿಯನ್ನು ಹೊತ್ತಿರುತ್ತಾರೆ.

ದೇವಾಲಯಕ್ಕೆ ಸಂಬಂಧಿಸಿದ ಎಲ್ಲಾ ಮಾಹಿತಿಗಳು ಅವರುಗಳಿಗೆ ಸಾಮಾನ್ಯವಾಗಿ ತಿಳಿದಿರುತ್ತದೆ. ಜನಸಮುದಾಯದವರು ಸಾಮಾನ್ಯ ದೈವದ ನೆಲೆಯಲ್ಲೇ ವಾಸವಾಗಿರುತ್ತಾರೆ. ದೇವಾಲಯಕ್ಕೆ ಸಂಬಂಧಿಸಿದ ಎಲ್ಲಾ ಸ್ಥಾನಿಕರಾಗಿದ್ದು ಇಡೀ ಕ್ಷೇತ್ರದ ಬಗೆಗೆ ಜವಾಬ್ದಾರಿ ಉಳ್ಳವರಾಗಿರುತ್ತಾರೆ. ದೈವದ ಆಚರಣೆ, ಜಾತ್ರೆ, ಉತ್ಸವಗಳಲ್ಲಿ ಪ್ರಮುಖವಾದ ಸೇವೆಗಳನ್ನು ಮಾಡುತ್ತಾರೆ.[೩೧] ಪ್ರತಿಯೊಂದು ಮೈಲಾರ ಕ್ಷೇತ್ರಗಳಲ್ಲಿ ದೇವಾಲಯಕ್ಕೆ ಸಂಬಂಧಿಸಿದ ಜನಸಮುದಾಯವನ್ನು ಕಾಣಬಹುದು. ಪೂಜಾರಿಗಳು, ಪುರೋಹಿತರು, ಸೇವಕರು ಮೊದಲಾದವರನ್ನು ನೇಮಿಸುವ ರೂಢಿಯಿದೆ. ಇವರುಗಳನ್ನು ಸ್ಥಳೀಯವಾಗಿ ರಾಜರು ಅಥವಾ ಆಯಾ ಪ್ರದೇಶಗಳ ಮುಖಂಡರು, ಗ್ರಾಮದ ಹಿರಿಯರು ನೇಮಿಸುತ್ತಿದ್ದರು. ಆಯಾಗಾರರಾಗಿ ಸೇವೆ ಸಲ್ಲಿಸುವ ಇವರು ದೇವಾಲಯದ ವತಿಯಿಂದ ವರ್ಷಕ್ಕೆ ಇಂತಿಷ್ಟು ಹಣ ಹಾಗೂ ದವಸ ಧಾನ್ಯಗಳನ್ನು ಜೀವನೋಪಾಯಕ್ಕೆ ನೀಡುತ್ತಿದ್ದರು. ಇವರ ದೇವಾಲಯದ ಎಲ್ಲಾ ಕೆಲಸ ಕಾರ್ಯಗಳಲ್ಲಿ ಭಾಗವಹಿಸಿ ಸೇವೆ ಸಲ್ಲಿಸುತ್ತಿದ್ದರು. ಮೈಲಾರ ಸಂಪ್ರದಾಯ ಪ್ರಮುಖವಾಗಿ ಸೇವೆ ಸಲ್ಲಿಸುವ ಸಮುದಾಯ ವರ್ಗವನ್ನು ನಾವು ಮೈಲಾರ ಕ್ಷೇತ್ರದಲ್ಲಿ ಕಾಣಬಹುದು.

ಮೈಲಾರ ಕ್ಷೇತ್ರಗಳಲ್ಲಿ ಪ್ರಾದೇಶಿಕ ಭಿನ್ನತೆಗಳಿಂದ ಸಮುದಾಯ, ವರ್ಗ, ಆಚರಣೆಗಳಿಂದ ಪೂಜಾರಿ ಮತ್ತು ಭಕ್ತರನ್ನು ಕಾಣಬಹುದು. ಪ್ರಮುಖವಾಗಿ ಮೈಲಾರ ದೇವಾಲಯದ ನಿರ್ವಹಣೆಯನ್ನು ಆಡಳಿತ ವರ್ಗ ಎಂಬ ಸಮುದಾಯವಿರುತ್ತದೆ. ಉತ್ತರ ಕರ್ನಾಟಕ ಮೈಲಾರನ ನೆಲೆಗಳಲ್ಲಿ ಧರ್ಮಾಧಿಕಾರಿಗಳೆಂದು ಕರೆಯುತ್ತಾರೆ. ಸಮಾಜದಲ್ಲಿ ಮುಖ್ಯವಾಗಿ ಕಂಡುಬರುವ ಗೌಡ, ಪಾಟೀಲ, ದೀಕ್ಷಿತ, ಒಡೆಯ, ಕುಲಕರ್ಣಿ ಎಂಬ ಅಧಿಕಾರ ವರ್ಗದಿಂದ ದೇವಾಲಯವು ಕಾರ್ಯನಿರ್ವಹಿಸುತ್ತದೆ. ದೇವಾಲಯಕ್ಕೆ ಸಂಬಂಧಿಸಿದ ಭಕ್ತರ ಅನುಕೂಲಕ್ಕೆ ತಕ್ಕಂತೆ ಕೆಲಸಗಳನ್ನು ನಿರ್ವಹಿಸುವ ಸೇವೆ ಇವರದಾಗಿರುತ್ತದೆ. ಹೂವಿನ ಹಡಗಲಿಯ ಮೈಲಾರ, ದೇವರಗುಡ್ಡ ಹಾಗೂ ಮೀನಗುಂದಿಗಳಲ್ಲಿ ಒಡೆಯರು ಎಂಬ ಆಡಳಿತ ವರ್ಗದಿಂದ ದೇವಾಲಯದ ಎಲ್ಲಾ ಕಾರ್ಯಚಟುವಟಿಕೆಗಳು ನಡೆಯುತ್ತವೆ. ಮೈಲಾರನ ಜಾತ್ರೆಯ ಸಂದರ್ಭದಲ್ಲಿ ಪ್ರಮುಖವಾಗಿ ಕಾರ್ಯನಿರ್ವಹಿಸುತ್ತಾರೆ.

ಅರ್ಚಕ ವರ್ಗ ಪ್ರತಿನಿತ್ಯ ದೇವರ ನಡುವಿನ ಕೊಂಡಿಯಾಗಿ ಕಾರ್ಯನಿರ್ವಹಿಸುವನೇ ಅರ್ಚಕ. ಅರ್ಚಕ ವರ್ಗದಲ್ಲಿ ಒಂದೇ ಕುಟುಂಬದವರಿದ್ದು ಕಾಲಾನುಕ್ರಮದಲ್ಲಿ ಅನೇಕ ಮನೆಗಳಾಗಿ ಬೆಳೆದು ಸರದಿಯ ಪ್ರಕಾರ ಪೂಜೆಯನ್ನು ಮಾಡುತ್ತಾರೆ. ವಾರ, ಹುಣ್ಣಿಮೆ, ಅಮವಾಸ್ಯೆ ಹೀಗೆ ದೇವರಿಗೆ ಪೂಜೆಯನ್ನು ಸಲ್ಲಿಸುವ ಸೇವೆ ಅರ್ಚಕರದಾಗಿರುತ್ತದೆ. ಅರ್ಚಕರದಲ್ಲಿ ಬ್ರಾಹ್ಮಣ ಸಮುದಾಯದವರು ದೇವರಗುಡ್ಡ, ಹೂವಿನಹಡಗಲಿ ಮೈಲಾರ, ಮೈಲಾರ ಪಟ್ಟಣ ಹಾಗೂ ಮುಡುಕುತೊರೆಗಳಲ್ಲಿ ಕಂಡುಬರುತ್ತಾರೆ. ಮೈಲಾರನಿಗೆ ಭೇದ

ಭಾವಗಳಿಲ್ಲ. ಇನ್ನು ಕೆಲವು ಸಮುದಾಯಗಳು ಅರ್ಚಕ ಸೇವೆಯನ್ನು ಮೈಲಾರನಿಗೆ ನಿರ್ವಹಿಸುತ್ತಾರೆ. ಮೈಲಾರ ಕ್ಷೇತ್ರಗಳಲ್ಲಿ ಬ್ರಾಹ್ಮಣ ಸಮುದಾಯವಲ್ಲದೆ, ವೀರಶೈವ, ಪಂಚಮಸಾಲಿ, ಹೂಗಾರರು, ಒಡೆಯರು, ಹಂಡೇಗುರುಬಿದ್ರು ಕುರುಬರು, ಉಪ್ಪಾರರು ಹಾಗೂ ಬೇಡ ಸಮುದಾಯದಲ್ಲಿ ಅರ್ಚಕ ಸೇವೆ ಮಾಡುವುದನ್ನು ಕಾಣಬಹುದು.[೨] ಬೀದರ್, ಮಂಗಸೂಳಿ ಪ್ರದೇಶಗಳಲ್ಲಿ ಮಹಾರಾಷ್ಟ್ರದ ಪ್ರಭಾವದಿಂದ ಅರ್ಚಕ ಸಮುದಾಯದಲ್ಲಿ ಭಿನ್ನತೆಯನ್ನು ಕಾಣಬಹುದು. ಇಲ್ಲಿ ಮಹಾರಾಷ್ಟ್ರದ ಗಡಿ ಭಾಗದಲ್ಲಿರುವ ಈ ಪ್ರದೇಶಗಳಲ್ಲಿ ಮರಾಠಿಗರ ಪ್ರಭಾವದಿಂದ ಎಲ್ಲಾ ಆಡಳಿತವನ್ನು ಮರಾಠಿಗರೆ ನಿರ್ವಹಿಸುತ್ತಾರೆ. ಅರ್ಚಕ ಸೇವೆ ಮಾಡುವ ಸಮುದಾಯಗಳಿಗೆ ಮೈಲಾರನ ಕ್ಷೇತ್ರಗಳಲ್ಲಿ ಭೂಮಿಯನ್ನು ಉಂಬಳಿಯಾಗಿ ನೀಡುವುದನ್ನು ಕಾಣಬಹುದು. ಮನೆ, ಹೊಲ, ಹೂವಿನ ತೋಟ, ವರ್ಷಕ್ಕೆ ಇಂತಿಷ್ಟು ದವಸ ಧಾನ್ಯಗಳನ್ನು ಅರ್ಚಕ ಸಮುದಾಯಕ್ಕೆ ಗ್ರಾಮದ ಜನರು ನೀಡುತ್ತಾರೆ. ಭಕ್ತರ ಕಾಣಿಕೆಗಳಿಂದ ಇವರು ಜೀವನವನ್ನು ನಿರ್ವಹಿಸಬೇಕು. ಉತ್ತರ ಕರ್ನಾಟಕದ ಭಾಗಗಳ ಮೈಲಾರನಿಗೆ ಸಂಬಂಧಿಸಿದ ಅರ್ಚಕ ಸಮುದಾಯದಲ್ಲಿ ವಿಭಿನ್ನತೆಯಿಂದ ಕೂಡಿರುವುದನ್ನು ಕಾಣಬಹುದು.

ಉತ್ತರ ಕರ್ನಾಟಕದ ಭಾಗದಲ್ಲಿ ಮೈಲಾರ ಸಂಪ್ರದಾಯದ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಈ ಸಂಪ್ರದಾಯವು ಹರಡಿರುವ ಪ್ರದೇಶಗಳಲ್ಲಿ ಒಂದು ಕಾಲದಲ್ಲಿ ಊರಿನಿಂದ ದೂರವಾದ ಕಾಡುಗಳಲ್ಲಿ ಹುಲ್ಲುಗಾವಲಿನ ಬಯಲನ್ನು ಆಧಾರವಾಗಿ ಇಟ್ಟುಕೊಂಡು ಪಶುಪಾಲನೆ, ಬೇಟೆ ಮೊದಲಾದ ಉದ್ಯೋಗಗಳನ್ನು ಮಾಡುತ್ತಾ ಜೀವನ ಸಾಗಿಸುತ್ತಿದ್ದ ಕುರುಬರು, ಗೊಲ್ಲರು ಹಾಗೂ ಮ್ಯಾಸಬೇಡರು ಕಾಲಾನಂತರದಲ್ಲಿ ಒಂದೆಡೆ ನೆಲೆ ನಿಂತು ಜೀವನವನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಮೈಲಾರನ ಸಂಪ್ರದಾಯದಲ್ಲಿ ಸಮುದಾಯದ ಭೇದ ಭಾವವಿಲ್ಲ. ಎಲ್ಲಾ ಸಮುದಾಯದವರಿಗೂ ಸ್ಥಾನಮಾನ ಕಲ್ಪಿಸಿದ ದೈವ ಮೈಲಾರ. ಕುರುಬ ಸಮುದಾಯಕ್ಕೆ ಹೆಚ್ಚಾಗಿ ಸಂಬಂಧವಿರುವ ಈ ದೈವವು ಸಂಸ್ಕೃತಿಯ ಜೊತೆ ಜೊತೆಗೆ ಮೈಲಾರ ಸಂಸ್ಕೃತಿಯೂ ರೂಪಗೊಂಡಿರುವ ಸಾಧ್ಯತೆ ಇದೆ. ಕುರುಬರ ಸಂಸ್ಕೃತಿಯ ಸಮುದಾಯದವರು ಪಶುಪಾಲಕ ವರ್ಗದವರು ಅವರೇ ಮೈಲಾರನ ಭಕ್ತರ ಸಂಖ್ಯೆಯನ್ನು ಹೆಚ್ಚಾಗಿ ಆರಾಧನೆ ಮಾಡುವರು. ಕರ್ನಾಟಕದಲ್ಲಿ ಕಂಡುಬರುವ ಮೈಲಾರ ಸ್ಥಳಗಳಲ್ಲಿ ಹೆಚ್ಚಾಗಿ ಕುರುಬ ಸಮುದಾಯದ ಗೊರವರು ಕಂಡುಬರುತ್ತಾರೆ. ಇವರು ಜಾತ್ರೆ, ಉತ್ಸವ, ಇನ್ನಿತರ ವಿಶೇಷ ದಿನಗಳಲ್ಲಿ ತಮ್ಮದೇ ಆದ ಕಾರ್ಯವನ್ನು ನಿರ್ವಹಿಸುತ್ತಾರೆ. ಕುರುಬ ಸಮುದಾಯವಲ್ಲದೆ ಗೊಲ್ಲ ಹಾಗೂ ಮ್ಯಾಸಬೇಡ ಸಮುದಾಯದಲ್ಲೂ ಗೊರವರನ್ನು ಕಾಣಬಹುದು. ಪಶುಪಾಲನೆಯಿಂದ ಮುಂದುವರೆದು ಕೊಂಡು ಬಂದ ಮೂರು ಸಮುದಾಯಗಳಲ್ಲಿ ಹೆಚ್ಚಾಗಿ ಮೈಲಾರನ ಆರಾಧನೆಯನ್ನು

ಕಾಣಬಹುದು. ಮಾದಿಗ, ಹೊಲೆಯ, ಕಬ್ಬಿಗ, ಉಪ್ಪಾರ ಸಮುದಾಯಗಳಲ್ಲಿ ಗೊರವರಾಗಿ ದೀಕ್ಷೆ ಪಡೆದಿರುತ್ತಾರೆ. ಸಾಂಸ್ಕೃತಿಕವಾಗಿ ಎಲ್ಲಾ ಜನಮಾಸದಲ್ಲಿ ನೆಲೆಯೂರಿದ ದೈವ ಮೈಲಾರನಾಗಿದ್ದಾನೆ. ಕಾರಣಿಕವನ್ನು ನುಡಿಯುವ ಗೊರವ ಹೆಚ್ಚಾಗಿ ಕುರುಬ ಸಮುದಾಯಕ್ಕೆ ಸೇರಿದವನಾಗಿರುತ್ತಾರೆ.

ಮೈಲಾರನ ಸೇವಕರಾದ ಹೊಲೆಯ-ಮಾದಿಗ ಸಮುದಾಯದವರು ವಿಶೇಷವಾಗಿ ಕಂಡುಬರುತ್ತಾರೆ. ಇವರಿಗೆ ತಮ್ಮದೇ ಆದ ವೇಷಭೂಷಣಗಳಿವೆ. ಭಂಡಾರ ಧರಿಸಿ ಬಿಳಿ ನಿಲುವಂಗಿ ಹಾಕಿಕೊಂಡು ಸೊಂಟಕ್ಕೆ ಗಂಟೆಸರ ಕಟ್ಟಿಕೊಂಡು ಕೈಯಲ್ಲಿ ಬಿಚ್ಚುಗತ್ತಿ ಹಿಡಿದು ಅದನ್ನು ಜಳಪಿಸುತ್ತಾ ಕುಣಿಯುತ್ತಾರೆ. ಕುದುರೆಕಾರರಾಗಿ ಕುಣಿತವನ್ನು ಅಭಿನಯಿಸುವ ಇವರು ಕಾಲಿಗೆ ಚಾಟಿಯಿಂದ, ವಡಿಯಿಂದ ಹೊಡೆದುಕೊಳ್ಳುತ್ತಾರೆ. ಮೈಲಾರ ಜಾತ್ರೆಯಲ್ಲಿ ವಿಶೇಷವಾಗಿ ಕಂಡುಬರುವ ಈ ಸಮುದಾಯದವರು ಒಡಪುಗಳನ್ನು, ಪವಾಡಗಳನ್ನು ಹಾಗೂ ಕಾವ್ಯಗಳನ್ನು ಜಾತ್ರೆಯ ಸಂದರ್ಭದಲ್ಲಿ ಹೇಳುತ್ತಾರೆ. ಮೈಲಾರನ ಸೇವಕರಾಗಿ ಗುರ್ತಿಸಿಕೊಳ್ಳುವ ಇವರು ಅನೇಕ ಪವಾಡಗಳನ್ನು ಮಾಡುತ್ತಾರೆ. ವೀರಗಾರರು, ಕಂಚರು, ಪುರವಂತರು ಜಾತ್ರೆ, ಉತ್ಸವ ಸಂದರ್ಭದಲ್ಲಿ ಮೈಲಾರನಿಗೆ ಭಕ್ತಿಯನ್ನು ತೋರಿಸಿಕೊಳ್ಳುತ್ತಾರೆ. ವೀರಗಾರರು ಕಬ್ಬಿಣದ ಗುಂಡಿನಿಂದ ಮೈಗೆ ಹೊಡೆದುಕೊಳ್ಳುವುದು, ಮೀನಕಂಡದಲ್ಲಿ ಹಗ್ಗವನ್ನು ಎಳೆದುಕೊಳ್ಳುವುದನ್ನು ಮಾಡುತ್ತಾರೆ. ದೇವರಗುಡ್ಡದಲ್ಲಿ ರಥಸಪ್ತಮಿಯಂದು ನಡೆಯುವ ಮಾದಿಗ ಸಮುದಾಯದ ವ್ಯಕ್ತಿಯೊಬ್ಬನು ಮಲ್ಲಸುರನಂತೆ ನಟಿಸುತ್ತಾನೆ. ಕಂಚಾವೀರರು ಆತನ ತಲೆಯನ್ನು ಕತ್ತರಿಸಿ, ಮೈಲಾರನಿಗೆ ಒಪ್ಪಿಸುವುದನ್ನು ಅಲ್ಲಿ ನಾಟಕೀಯವಾಗಿ ಅಭಿನಯಿಸಲಾಗುತ್ತದೆ. ಹೂವಿನಹಡಗಲಿ ಮೈಲಾರದಲ್ಲಿ ಕಾರಣಿಕದ ದಿನದಂದು ಮಲ್ಲಾಸುರ ವಾಸವಾಗಿದ್ದನು ಎಂದು ನಂಬಿಕೊಂಡಿರುವ ಡೆಂಕಣಮರಡಿ ಸುತ್ತಲು ದಲಿತ ಸಮುದಾಯಕ್ಕೆ ಸೇರಿದ ಹೆಣ್ಣುಮಕ್ಕಳು ನೆರೆದಿರುತ್ತಾರೆ. ಹಾಗೂ ಮಲ್ಲಾಸುರನ ಸಾವಿಗೆ ಸಂಬಂಧಿಸಿದ ಹಾಡುಗಳನ್ನೇ ಹಾಡುತ್ತಾರೆ. ಮಲ್ಲಾಸುರನ ಸಾವಿಗೆ ಕಾರಣರಾದ ಕಂಚಾವೀರರು ಮೂಲತಃ ಮಾದಿಗ ಸಮುದಾಯಕ್ಕೆ ಸೇರಿದವರಾಗಿದ್ದಾರೆ ಎಂದು ಪುರುಷೋತ್ತಮ ಬಿಳಿಮಲೆಯವರು ಅಭಿಪ್ರಾಯಪಡುತ್ತಾರೆ. ಏಕೆಂದರೆ ಮೈಲಾರನಿಗೂ-ಮಲ್ಲನಿಗೂ ನಡೆದ ಯುದ್ಧದಲ್ಲಿ ಇವರು ಮೈಲಾರನ ಪರವಾಗಿ ಹೋರಾಡಿರಬೇಕೆಂದು ತೋರುತ್ತದೆ. ಅವರು ಹೇಳುವ ಒಡಪುಗಳು, ನಡೆಸುವ ಶಸ್ತ್ರಪವಾಡಗಳು ನಡೆದ ಯುದ್ಧವೊಂದರ ಪಳಯುಳಿಕೆಯಂತೆ ತೋರುತ್ತದೆ. ಮಲ್ಲನ ಸಾವು ಸಂಭವಿಸಿದ್ದು ಡೆಂಕನಮರಡಿಯಲ್ಲಿ. ಡೆಂಕನಮರಡಿಯು ಕಾಡಾಗಿತ್ತು ಎಂದು ಮಲ್ಲಾರಿ ಮಹಾತ್ಮೆಯಲ್ಲಿ ತಿಳಿಯುಬಹುದು. ಇದು ನಿಜವಾಗಿದ್ದರೆ ಮಲ್ಲನು ಕಾಡಿನಲ್ಲಿ ವಾಸಿಸುತ್ತಿದ್ದ ಸಮುದಾಯವೊಂದನ್ನು ಪ್ರತಿನಿಧಿಸುತ್ತಾನೆ. ಕೊಮಾಲಿಯ ಗುಡಿಗಳು ಈಗಲೂ ಕಾಡಿನಲ್ಲಿ

ವಾಸವಾಗಿದ್ದ ಸಮುದಾಯವನ್ನು ಸೂಚಿಸುತ್ತದೆ. ಅಸ್ಪೃಶ್ಯರಿಂದ ಪ್ರತಿನಿಧೀಕರಣಗೊಳ್ಳುವ ಮಲ್ಲನು ಮೈಲಾರನೊಡನೆ ಸಂಘರ್ಷಕ್ಕಿಳಿದ ಹೊತ್ತಿನಲ್ಲಿ ಅಸ್ಪೃಶ್ಯನಾಗಿದ್ದನೇ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಬಹುಶಃ ಅಸ್ಪೃಶ್ಯನಾಗಿರಲು ಸಾಧ್ಯವಿಲ್ಲ.[೩೩] ಮೂಲನಿವಾಸಿಗಳಾದ ಆ ಸಮುದಾಯವವು ಅನ್ಯ ಸಮುದಾಯಕ್ಕೆ ಅಸ್ಪೃಶ್ಯವಾಗಲು ಸಾಧ್ಯವೇ ವಿನಹ ತನಗೆ ತಾನೇ ಅಸ್ಪೃಶ್ಯವಾಗಲು ಸಾಧ್ಯವಿಲ್ಲ.

ಮೈಲಾರ ಪರಂಪರೆಯಲ್ಲಿ ಕಂಚಾವೀರರ ಮೂಲಕ ಮಾದಿಗ ಸಮುದಾಯದ ಪ್ರವೇಶವಿದೆ. ಈ ಸಮುದಾಯದವರು ಗ್ವಾರಪ್ಪ, ಗ್ವಾರಮ್ಮ ಆಗಬೇಕಾದರೆ ಅವರಿಗೆ ದೀಕ್ಷೆ ಕೊಡುವವರು ಕಂಚಾವೀರರೇ. ಪಶುಪಾಲಕರ ಮೈಲಾರ ಪಂಥದಲ್ಲಿ ಸೇರಿಕೊಂಡಿರುವ ಇವರು ಪರ ಮತ್ತು ವಿರೋಧ ಈ ಎರಡೂ ನೆಲೆಗಳಲ್ಲಿ ಇರುವುದು ಕಾಣಬಹುದು. ಮಲ್ಲಸುರ ನರಬಲಿ ಕೇಳಿದ್ದಕ್ಕೆ ಕಂಚಾವೀರ ರಕ್ತ ಕೊಟ್ಟ ಎಂದು ಆಂಧ್ರಪ್ರದೇಶದಲ್ಲಿ ನಂಬಿಕೆ ಇದೆ. ಶಿರಸ್ಸು ಪವಾಡ, ಕೈಕಾಲು ಪವಾಡ ಮಾಡುವ ಒಡಬು ಹೇಳುವ, ದೇವರ ಪಾದರಕ್ಷೆ ಮತ್ತು ಬಿಲ್ಲುಗಳಿಗೆ ಭಕ್ತರು ಹಾಕುವ ಕಾಣಿಕೆ ಹಣಕ್ಕೆ ಹಕ್ಕುದಾರರಾಗಿರುವ ಮಾದಿಗ ಸಮುದಾಯದ ಕಂಚಾವೀರರು ಕಡುಬಿನ ಕಾಳಗದಲ್ಲಿ ಮಲ್ಲಾಸುರನ ತಲೆ ತರುವರು. ಆಶ್ಚರ್ಯವೆಂದರೆ ಕೆಲವು ಕಡೆ ಮಲ್ಲಾಸರರೂ ಆಗುವರು. ಮೈಲಾರ ಪಂಥದ ಕಂಚಾವೀರರು ಮೈಲಾರ ಸೋಲಿಸಿದ ಮಾದಿಗ ಸಮುದಾಯದವರು ಹಿಂಸೆಗೀಡಾದುದರ ಕುರುಹಾಗಿ ಶಸ್ತ್ರಪವಾಡ ನಡೆಸುತ್ತಾರೆಂದು ತೋರುತ್ತದೆ. ಭೀಕರ ಹಿಂಸೆ ಮಾಡಿಕೊಳ್ಳುವ ಮೂಲಕ ತಮ್ಮ ದೇಹವನ್ನು ದಂಡಿಸಿಕೊಳ್ಳುತ್ತಾರೆ.[೩೪]

ಪಶುಪಾಲಕ ಸಂಸ್ಕೃತಿಯ ಕುರುಬರು, ಹಳ್ಳಿ ಸಂಸ್ಕೃತಿಯನ್ನು ಹೊಂದಿದ ಹೊಲೆಯ ಮಾದಿಗರ ಜತೆ ಸಂಘರ್ಷ ಮಾಡಿದುದರ ಸಂಕೇತವಾಗಿ ಮಣಿ-ಮಲ್ಲರನ್ನು ಮೈಲಾರ ಸಂಹರಿಸುವುದು. ಹೊಲೆಯ ಮಾದಿಗ, ಕೃಷಿಕರನ್ನು ವೈದಿಕ ಪರಂಪರೆಯಲ್ಲಿ ಅಸುರರೆಂದು ಕರೆದಿದೆ. ಮಣಿ ಮಲ್ಲರಂತೆ ಮಹಿಷ, ಚಂಡ, ಮುಂಡ, ಬಾಣ, ಹಿಡಿಂಬ ಮೊದಲಾದ ರಾಕ್ಷಸರುಗಳ ನಾಡು ನಮ್ಮದು. ಮೈಲಾರನೊಂದಿಗೆ ಸಂಘರ್ಷವನ್ನು ಮಾಡಿದ ಈ ಸಮುದಾಯದವರು ಪಶುಪಾಲಕರಾದ ಕುರುಬರೊಂದಿಗೆ ಹೊಂದಾಣಿಕೆಯಿಂದ ಹೋಗಲೇಬೇಕಿತ್ತು. ಅದಕ್ಕಾಗಿ ಕಂಚಾವೀರರು ಮೈಲಾರ ಪಂಥದಲ್ಲಿ ವಿರುದ್ಧ ಬಣದ ಪ್ರತಿನಿಧಿಗಳೆಂದು ಗುರುತಿಸಿಕೊಂಡಿದ್ದಾರೆ.[೩೫] ಹೊಲೆಯ, ಮಾದಿಗ ಸಮುದಾಯದವರು ಮೈಲಾರ ಸಂಪ್ರದಾಯದಲ್ಲಿ ಸಕ್ರಿಯವಾಗಿ ಜಾತ್ರೆ, ಉತ್ಸವ, ಹಬ್ಬ-ಹರಿದಿನ ಹಾಗೂ ವಿಶೇಷವಾದ ದಿನಗಳಲ್ಲಿ ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ.

ಮುಖ್ಯವಾಗಿ ಸಮಾಜದ ಎಲ್ಲಾ ಸಮುದಾಯದವರು ಮೈಲಾರನ ಆರಾಧಕರಾಗಿದ್ದಾರೆ. ಮೈಲಾರ ಸೇವೆಗೆ ಒಂದಲ್ಲ ಒಂದು ರೀತಿಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಮೈಲಾರ ಸಂಪ್ರದಾಯದಲ್ಲಿ ಕೊರಮ, ಕೊರಚ, ವಿಶ್ವಕರ್ಮ, ಮಡಿವಾಳ, ಕುಂಬಾರ, ತಳವಾರ, ಕುಂಚಟಿಗ, ಲಿಂಗಾಯತ ಇನ್ನು ಮುಂತಾದ ಸಮುದಾಯಗಳು ಮೈಲಾರನ ಸೇವೆಯನ್ನು ಮಾಡುತ್ತಾರೆ. ಮೈಲಾರ ಜಾತ್ರೆ, ಉತ್ಸವ ಹಾಗೂ ಇನ್ನಿತರ ವಿಶೇಷ ಸಂದರ್ಭದಲ್ಲಿ ಮೆರವಣಿಗೆಯ ಸಮಯದಲ್ಲಿ ತಾಳ, ಮೇಳ, ವಾದ್ಯಗಳ ಮೂಲಕ ಮೆರವಣಿಗೆಯ ಮೂಲಕ ಬಾಜ ಭಜಂತ್ರಿಯ ಸೇವೆಯನ್ನು ಮಾಡುವವರು ಕೊರಮ ಸಮುದಾಯದವರು. ಮೈಲಾರನ ಜಾತ್ರೆ, ಉತ್ಸವಗಳು ವೈಭವದಿಂದ ಕೂಡಿರಲು ಕೊರಮ ಸಮುದಾಯದವರು ಸೇವೆಯನ್ನು ಮಾಡುತ್ತಾರೆ. ವಿಶ್ವಕರ್ಮ ಸಮುದಾಯದವರು ಮೈಲಾರನಿಗೆ ಸಂಬಂಧಿಸಿದಂತೆ ದೇವಾಲಯದಲ್ಲಿ ಕಂಡುಬರುವ ರಥದ ಸಿದ್ಧತೆ, ಕುದುರೆಗಳ ಶಿಲ್ಪ, ಲೋಹದ ಶಿಲ್ಪಗಳು ಹಾಗೂ ದೇವಾಲಯಕ್ಕೆ ಸಂಬಂಧಿಸಿದ ಇತರ ಮೂರ್ತಿಶಿಲ್ಪಗಳ ಸಿದ್ಧತೆಯನ್ನು ಮಾಡುವರು. ವಿಶ್ವಕರ್ಮ ಸಮುದಾಯದಲ್ಲೂ ಮೈಲಾರ ಭಕ್ತರಿದ್ದಾರೆ. ಮೈಲಾರ ಸಂಪ್ರದಾಯದಲ್ಲಿ ಮಡಿವಾಳರ ಸಮುದಾಯದಲ್ಲಿ ಭಕ್ತರಿದ್ದಾರೆ. ಇವರು ಮೈಲಾರನಿಗೆ ವಿಶೇಷವಾಗಿ ಮೆರವಣಿಗೆ, ಉತ್ಸವ ಸಂದರ್ಭದಲ್ಲಿ ನಡೆ-ಮಡೆಯನ್ನು ದಾರಿಯುದ್ದಕ್ಕೂ ಹಾಸುತ್ತಾರೆ. ಇದಲ್ಲದೆ ದೀವಟಿಗೆಯನ್ನು ಅಥವಾ ಪಂಜನ್ನು ಹಿಡಿಯುವ ಕಾಯಕ ಮಾಡುವವರು ಮಡಿವಾಳ ಸಮುದಾಯಕ್ಕೆ ಸೇರಿದವರು. ದೇವಾಲಯದಲ್ಲಿರುವ ಎಲ್ಲಾ ದೇವರ ವಸ್ತ್ರ (ಬಟ್ಟೆ)ಗಳನ್ನು ಮಡಿ ಮಾಡಿಕೊಳ್ಳುವ ಸೇವೆಯನ್ನು ಈ ಸಮುದಾಯದವರು ಮಾಡುತ್ತಾರೆ. ಆಯಾಗಾರರಾಗಿರುವ ಇವರಿಗೆ ಗ್ರಾಮದಲ್ಲಿ ವರ್ಷಕ್ಕೆ ಇಂತಿಷ್ಟು ದವಸ ಧಾನ್ಯ ಹಾಗೂ ಹಣವನ್ನು ದೇವಾಲಯದ ಆಡಳಿತ ವರ್ಗದಿಂದ ಪಡೆಯುತ್ತಾರೆ. ಇನ್ನು ಕೆಲವು ಮೈಲಾರ ಸ್ಥಳಗಳಲ್ಲಿ ದೀವಟಿಗೆ ಅಥವಾ ಪಂಜಿನ ಸೇವೆಯನ್ನು ಮಾಡಲು ಹಲವು ಸಮುದಾಯ ಜನರು ಸ್ವಯಂ ಪ್ರೇರಿತರಾಗಿ ಸೇವೆಯನ್ನು ಸಲ್ಲಿಸುತ್ತಾರೆ. ಸಮಾಜದಲ್ಲಿ ಕಂಡುಬರುವ ಎಲ್ಲಾ ಜನಸಮುದಾಯದವರು ಮೈಲಾರನಿಗೆ ಸೇವೆ ಸಲ್ಲಿಸುತ್ತಾರೆ.

ಕರ್ನಾಟಕದಲ್ಲಿ ನೆಲೆಗೊಂಡಿರುವ ಮೈಲಾರ ಪರಂಪರೆಯು ಎಲ್ಲಾ ಜನಸಮುದಾಯದಲ್ಲೂ ಆರಾಧನೆಗೆ ಒಳಗಾಗಿದೆ. ಜೈನ ಹಾಗೂ ವೀರಶೈವ ಸಮುದಾಯವನ್ನು ಹೊರತುಪಡಿಸಿ, ಮುಸ್ಲಿಂ ಸಮುದಾಯದಲ್ಲೂ ಗೊರವರಾಗಿರುವ ಬಗೆಗೆ ಆಧಾರಗಳು ದೊರೆಯುತ್ತದೆ. ಮೈಲಾರ ದೈವವೂ ಶಿಷ್ಟ ಮತ್ತು ಪರಿಶಿಷ್ಟ ಸಮುದಾಯದಲ್ಲಿ ನೆಲೆಗೊಳ್ಳಲು ಎಲ್ಲಾ ಜನಸಮುದಾಯದ ಪಾತ್ರ ಮುಖ್ಯವಾಗಿ ಕಂಡುಬರುತ್ತದೆ.

**ಮೈಲಾರದ ಕಾರಣಿಕ ನುಡಿಗಳ ವಿಶ್ಲೇಷಣೆ**

ಕರ್ನಾಟಕ ರಾಜ್ಯದಲ್ಲಿಯೇ ವೈಶಿಷ್ಟ್ಯಪೂರ್ಣವಾಗಿ ಆಚರಿಸುವ ಕಾರಣಿಕ ಮಹೋತ್ಸವ ವಿಶೇಷವಾಗಿ ಮೈಲಾರನ ನಂಬಿಕೆ ಮತ್ತು ಆಚರಣೆಯಲ್ಲಿ ಮಹತ್ವದ ಭಾಗವಾಗಿದೆ. ಪ್ರತಿ ವರ್ಷ ಭಾರತ ಹುಣ್ಣಿಮೆಯ ದಿನದಂದು ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯ ಸುಕ್ಷೇತ್ರ ಮೈಲಾರದಲ್ಲಿ ಕಾರಣಿಕ ನುಡಿಯನ್ನು ಗೊರವಪ್ಪ ಸದ್ದಲೇ ಎಂದು ಮುನ್ಸೂಚನೆಯನ್ನು ನೀಡಿ ನಂತರ ಆ ವರ್ಷದ ಕಾರಣಿಕ ನುಡಿಯನ್ನು ಹೇಳುವ ಸಂಪ್ರದಾಯ ಅನಾದಿ ಕಾಲದಿಂದ ಹಿಡಿದು ಇಂದಿಗೂ ನಡೆದುಕೊಂಡು ಬಂದಿದೆ. ಮೈಲಾರನ ಕಾರಣಿಕ ನುಡಿಯನ್ನು ಕೇಳಲು ಇಡೀ ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳಿಂದ ಹಾಗೂ ಮಹಾರಾಷ್ಟ್ರ, ಆಂಧ್ರಪ್ರದೇಶ, ತೆಲಂಗಾಣ, ಕೇರಳ, ಗೋವಾ, ತಮಿಳುನಾಡು ರಾಜ್ಯಗಳಿಂದ ಸಾವಿರಾರು ಭಕ್ತರು ಮೈಲಾರ ಜಾತ್ರೆಯಲ್ಲಿ ಸೇರುತ್ತಾರೆ. ಲಕ್ಷಾಂತರ ಜನರನ್ನು ಒಳಗೊಂಡ ಜಾತ್ರೆಯು 'ಏಳುಕೋಟಿ ಏಳುಕೋಟಿ ಮೈಲಾರ' ಎಂದು ಜನರು ಉಘೆ ಉಘೆ ಎಂದು ಕೂಗುವ ದೃಶ್ಯಾವಳಿ ಹಾಗೂ ಆ ಶಬ್ದ ಆಕಾಶಕ್ಕೆ ಮುಟ್ಟುವಂತಿರುತ್ತದೆ. ಎಂತಹ ಗದ್ದಲ, ಕೂಗಾಟವಿದ್ದರು ಸಹ ಗೊರವಪ್ಪ ಬಿಲ್ಲು ಏರಿ 'ಸದ್ದಲೇ' ಎಂದು ಕೂಗಿದಾಗ ಇಡೀ ಜಾತ್ರೆಯಲ್ಲಿ ಸೇರಿರುವ ಜನರು ನಿಶ್ಯಬ್ಧರಾಗಿಬಿಡುತ್ತಾರೆ. ಆಗ ಗೊರವಪ್ಪ ಕಾರಣಿಕ ನುಡಿ ಹೇಳುತ್ತಾನೆ. ನಂತರದಲ್ಲಿ ಕಾರಣಿಕ ನುಡಿಯನ್ನು ವಿಭಿನ್ನವಾಗಿ ತಮ್ಮ ತಮ್ಮ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಜನರು ಅರ್ಥೈಸಿಕೊಂಡು ತಮ್ಮ ಊರುಗಳಿಗೆ ತೆರಳುತ್ತಾರೆ. ಕಾರಣಿಕ ನುಡಿ ಆ ವರ್ಷದ ಮಳೆ, ಬೆಳೆ, ಪ್ರಕೃತಿಹಾನಿ, ಸಂಪತ್ತು ಹಾಗೂ ರಾಜಕೀಯ, ಸಾಮಾಜಿಕ ಇತ್ಯಾದಿ ಅಂಶಗಳ ಏರಿಳಿತ ಅಥವಾ ಪಲ್ಲಟಗಳಲ್ಲಿ ಬದಲಾವಣೆಯಾಗುತ್ತದೆ ಎಂಬುದು ಮೈಲಾರನ ಭಕ್ತಸಮೂಹದಲ್ಲಿ ಬೇರೂರಿರುವ ಅಗಾಧವಾದ ನಂಬಿಕೆ ಇಂದಿಗೂ ಮುಂದುವರೆದುಕೊಂಡು ಬಂದಿದೆ.

ಕಾರಣಿಕ ಗೊರಪ್ಪ ಸದ್ದಲೇ ಎಂದಿರಚಿದಾಗ ತಕ್ಷಣವೇ ಎಲ್ಲಾರೂ ಸ್ತಬ್ಧರಾಗುವುದು Ritual Depth Sequence ಹೆಚ್ಚು ಶಬ್ದದಿಂದ ಕೂಡಿದ್ದು ಎಲ್ಲರೂ ಉಘೇ ಉಘೇ ಎಂಬ ಧ್ವನಿಯಾಗಲೀ ವಾದ್ಯದ ಅತಿ ಹೆಚ್ಚಿನ ಶಬ್ದವಾಗಲೀ ಇರುತ್ತದೆ. ಮೈಲಾರನ ಜಾತ್ರೆಯ 'ಕಾರಣಿಕ'ದಲ್ಲಿ ಬಿಲ್ಲಿನ ಮೇಲೇರಿದ ಗೊರವಪ್ಪ 'ಕಾರಣಿಕ' ನುಡಿಯುವ ಕ್ಷಣಕಾಲವನ್ನು ಈ ಹಿನ್ನೆಲೆಯಲ್ಲಿ ವಿಶೇಷವಾಗಿ ಗಮನಿಸಬೇಕು. ಕಾರಣಿಕ ಈ ಇಡೀ ಪ್ರದರ್ಶನದ Perfromance maker ಹಾಗೂ ಆಗ ಉಂಟಾಗುವ ದಿವ್ಯ ನಿಶ್ಯಬ್ಧ ಅದರ Ritual Depth ಸೂಚಿಸುವಂತಹದು.[೩೬] ಅಂದರೆ ಇಲ್ಲಿ ಕೆಲವೇ ಕೆಲವು ಕ್ಷಣಗಳಲ್ಲಿ ನುಡಿಯು ಕಾರಣಿಕದ ಘಟನೆಗಾಗಿ ಮುಂಜಾನೆಯಿಂದ ಕಾಯ್ದುಕೊಂಡು ಕುಳಿತಿರುವ ಜನತೆಯ ಸಹನೆ, ಹಾಗೆಯೇ

ಕಾರಣಿಕ ಮುಗಿದ ತತ್‌ಕ್ಷಣದಲ್ಲಿಯೇ ಜನರು ಚದುರುವ ಪ್ರಕ್ರಿಯೆಯು ಮೈಲಾರನಲ್ಲಿಟ್ಟಿರುವ ದೈವಭಕ್ತಿಯನ್ನು ಇಲ್ಲಿ ಪ್ರದರ್ಶಿಸುವ ಪ್ರಮುಖ ವೇದಿಕೆಯಾಗಿರುತ್ತದೆ.

ಕಾರಣಿಕಕ್ಕೆ ಸಂಬಂಧಿಸಿದಂತೆ ಗೊರವರ ಕೆಲವು ನಂಬಿಕೆಗಳನ್ನು ಹೊಂದಿರುತ್ತಾರೆ. ಅವೆಂದರೆ ಕಾರಣಿಕದ ದಿನ ಆಕಾಶ ಶುಭ್ರವಿದ್ದರೆ ಶುಭ ಸೂಚನೆ, ಕಾರಣಿಕದ ಗೊರವಪ್ಪ ಯಾವ ದಿಕ್ಕಿಗೆ ಮುಖ ಮಾಡಿ ಬಿಲ್ಲು ಏರುತ್ತಾನೋ ಆ ದಿಕ್ಕಿಗೆ ಮಳೆ ಹೆಚ್ಚು, ಕಾರಣಿಕ ದೇವವಾಣಿ, ಕಾರಣಿಕದಲ್ಲಿ ಆ ವರ್ಷದ ಬೆಳೆಯ ಬಗ್ಗೆ ಮುನ್ಸೂಚನೆ ಸಿಗುತ್ತದೆ. ಕಾರಣಿಕದಲ್ಲಿ ರಾಜಕೀಯ ಏರಿಳಿತ ಏನು ಅಂತ ಗೊತ್ತಾಗುತ್ತದೆ.[೩೭] ಅಂದರೆ ಕಾರಣಿಕ ಹೀಗೆನೇ ಆಗಲೇಬೇಕು ಎಂಬುದೇನಿಲ್ಲ. ಅವರವರ ನಂಬಿಕೆ, ಆಚರಣೆ, ಭಾವಕ್ಕೆ ಬಿಟ್ಟಿದ್ದು. ಕೆಲವು ವೇಳೆ ಕಾರಣಿಕ ನುಡಿ ಪುನರಾವರ್ತನೆಯಾಗಿದ್ದಂತಹ ಉದಾಹರಣೆಗಳಿವೆ. ಹಾಗೇನೆ ಕಾರಣಿಕ ನುಡಿ ಕೆಲವು ಸಾರಿ ಪ್ರಕೃತಿ ಸಹಜ ಕ್ರಿಯೆಗೆ ಪುಷ್ಠಿಯನ್ನು ಕೊಟ್ಟಂತೆ ನಿಜವಾಗಿದ್ದದ್ದು ಸಹ ಸಾಕಷ್ಟು ಉದಾಹರಣೆಗಳಿವೆ. ಒಟ್ಟಾರೆಯಾಗಿ ಕಾರಣಿಕ ನುಡಿಯು ನಂಬಿಕೆ ಅವರವರ ಭಾವನೆಯ ಮೇಲೆ ವಿಶ್ಲೇಷಣೆಗೊಳಪಟ್ಟಿರುತ್ತದೆ ಎಂಬುದನ್ನು ಇಲ್ಲಿ ಗುರುತಿಸಬಹುದು. ಕಾರಣಿಕ ನುಡಿಯಂತೆ ಉತ್ತರ ಕರ್ನಾಟಕದ ಬಾಗಲಕೋಟೆ ಜಿಲ್ಲೆಯ ಬಬಲಾದಿ ಮಠದಲ್ಲಿಯೂ ಸಹ ಶಿವರಾತ್ರಿಯ ನಂತರದಲ್ಲಿ 'ಭವಿಷ್ಯವಾಣಿ'ಯನ್ನು ಬಬಲಾದಿ ಮುತ್ಯಾರು ನುಡಿಯುತ್ತಾರೆ. ಹಾಗೇನೇ ಆಯಾ ಕಾಲಘಟ್ಟದಲ್ಲಿ ಪ್ರಾದೇಶಿಕವಾಗಿ ಆರಾಧಿಸುತ್ತಿರುವ ದೈವಿಸಂಭೂತರು, ದೇವರುಗಳ ಕುರಿತಂತೆ ಇರುವ ಪವಾಡ, ನಂಬಿಕೆ, ಸಂಪ್ರದಾಯ, ಆಚರಣೆ, ಹರಕೆ ಇತ್ಯಾದಿ ಧಾರ್ಮಿಕ ಸಂಪ್ರದಾಯವನ್ನು ಜನಸಮುದಾಯದವರು ಅವರವರ ಭಾವನೆಗಳಿಗೆ ತಕ್ಕಂತೆ ಆಚರಿಸುತ್ತಾ ಬಂದಿರುವುದು ವಿಶೇಷವಾಗಿದೆ.

ಇಂದು ವಿಜ್ಞಾನ ಮತ್ತು ತಂತ್ರಜ್ಞಾನವು ಎಷ್ಟೇ ಮುಂದುವರೆದರೂ ಸಹ ಕೆಲವು ಸಾರಿ ಅಹಿತಕರ ಘಟನೆಗಳು ಜೀವನದಲ್ಲಿ ಜರುಗಿದ ತಕ್ಷಣದಲ್ಲಿಯೇ ಮನೆ ದೇವರು, ಮನೆ ದೇವತೆ, ದೈವಿಭಕ್ತಿಯಲ್ಲಿ ಮೊರೆ ಹೋಗಿ ಸಂಕಷ್ಟ ಪರಿಹರಿಸಲು ಆರಾಧನೆ, ಪೂಜೆ, ಹೋಮ ಹವನದ ಧಾರ್ಮಿಕ ಕಾರ್ಯಗಳ ಅಷ್ಟಸಿದ್ಧಿಗಾಗಿ ಮನಸ್ಸು ಹಾತೊರೆಯಲಾರಂಭಿಸುತ್ತದೆ. ಅಷ್ಟರಮಟ್ಟಿಗೆ ಜನರ ಮನಸ್ಸಿನಲ್ಲಿ ದೈವದ ಅಥವಾ ದೇವರ ಕುರಿತು ನಂಬಿಕೆ, ಆಚರಣೆಯು ಅಚ್ಚಳಿಯದೇ ಹಾಗೇನೆ ಉಳಿದಿದೆ. ಕೆಲವು ಸಾರಿ ಆಸ್ಪತ್ರೆಯಲ್ಲಿ ವೈದ್ಯರು ತಮ್ಮ ಪ್ರಯತ್ನ ವಿಫಲವಾದ ಮೇಲೆ ರೋಗಿಯ ಜೀವ ಇನ್ನು ಆ ದೇವರ ಕೈಯಲ್ಲಿದೆ ಎಂಬ ತಮ್ಮ ಭಾವನೆಯನ್ನು ವ್ಯಕ್ತಪಡಿಸುತ್ತಾರೆ. ಹಾಗಾಗಿ ಇಲ್ಲಿ ಕಾಲ, ಘಟನೆ ಆ ಒಂದು ಸಮಯ ಯಾರ ಕೈಯಿಂದ ಉಳಿಸಲು ಸಾಧ್ಯವಿಲ್ಲವೆಂದು ದೇವರ ಮೊರೆಯ ಹೋಗುವುದು ನೆಪವಷ್ಟೇ ಸರಿ.

ಮೈಲಾರನ ಜಾತ್ರೆಯ ಕಾರಣಿಕ, ಪವಾಡ ಇತ್ಯಾದಿ ಕಾರ್ಯಕ್ರಮಗಳನ್ನು ನೋಡಿ ಉಸಿರಾಡಲು ಹೊರಡುವ ಗೊರವಪ್ಪ, ನೂರಾರು ಮೈಲಿ ದೂರದಲ್ಲಿರುವ ಭಕ್ತರ ಮನೆಗೆ ಬಂದಾಗ ಅವರು ಕುತೂಹಲದಿಂದ ಜಾತ್ರೆಯ ವೈಭವ, ಕಾರಣಿಕದ ನುಡಿ, ಪವಾಡಗಳ ಬಗ್ಗೆ ಕೇಳುತ್ತಾರೆ. ಆಗ ಆತ ವಿವರಿಸುವ ವಿವರಗಳೇ ಮೈಲಾರಲಿಂಗನ ಪದಗಳಲ್ಲಿ ಸೇರಿಕೊಂಡು ಪಠ್ಯರೂಪವನ್ನು ಪಡೆದುಕೊಳ್ಳುತ್ತದೆ.

ಕಾರ್ಣಿಕದ ಬಿಲ್ಲ ತಂದಿಟ್ಟರು...ಸ್ವಾಮಿ
ಕಾರ್ಣಿಕದ ಬಿಲ್ಲನು ಏರಿದ ಸ್ವಾಮಿ
ಆಕಾಶದ ಕಡೆ ಮೊಗ ಮಾಡಿದ ಸ್ವಾಮಿ
ಕಾರಣಿಕವ ನುಡಿದನು ಸ್ವಾಮಿ
ಏಳುಕೋಟಿ ಉಘೇ ಏಂದೊರಲಿದ ಸ್ವಾಮಿ

ಎಂದು ಪಠ್ಯಕ್ಕೂ ಪ್ರದರ್ಶನಕ್ಕೂ ಸಂಬಂಧವಿದೆ. ಪ್ರತಿ ಪ್ರದರ್ಶನದ ಹಿನ್ನೆಲೆಯಲ್ಲೂ ಒಂದು ಪಠ್ಯವಿರುತ್ತದೆ. ಪಠ್ಯದ ಪ್ರಮಾಣ ಪ್ರದರ್ಶನದಲ್ಲಿ ಪೂರ್ಣವಾಗಿ ಬಿತ್ತರಗೊಳ್ಳಬೇಕೆಂದೇನೂ ಇಲ್ಲ. ಅದರ ಪ್ರಮುಖ ಆಶಯ ಹಾಗೂ ಸಂದೇಶವಷ್ಟೇ ಪ್ರದರ್ಶಿತಗೊಳ್ಳುವುದೇ ಹೆಚ್ಚು.[೩೮] ಹೀಗೆ ಜನರಲ್ಲಿ ಒಂದು ದೇವರ ಕುರಿತು ಪಠ್ಯದ ರೂಪದಲ್ಲಿ ಕಾರಣಿಕ ದಾಖಲಾಗಿದೆ. ಹೀಗೆ ಜನರ ಮೂಲಕ ಲಾವಣಿ, ಕಥೆ, ಕಾವ್ಯ, ಪುರಾಣಗಳೊಂದಿಗೆ ಮೈಲಾರ ಕುರಿತು ಉಲ್ಲೇಖಗಳಿರುವುದುಂಟು. ಪ್ರಸ್ತುತ ಅಧ್ಯಯನದಲ್ಲಿ ನೀಡಲಾದ ಮೈಲಾರದಲ್ಲಿ ಮೈಲಾರನ ಕಾರಣಿಕ ನುಡಿಗಳ ಪಟ್ಟಿಯಲ್ಲಿರುವ ಆಯ್ದ ಕೆಲವೊಂದು ಕಾರಣಿಕ ನುಡಿಗಳನ್ನು ಆಯಾ ಕಾಲಘಟ್ಟ, ರಾಜಕೀಯ, ಪ್ರಕೃತಿದತ್ತವಾಗಿ, ಚಾರಿತ್ರಿಕ ಘಟನೆ ಹಾಗೂ ಇತ್ಯಾದಿ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕಾರಣಿಕ ನುಡಿಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

"ಮುತ್ತಿನ ಮಳೆ ಸುರಿದೀತಲೇ ಬಹುಪರಾಕ್" ಎಂಬ ಕಾರಣಿಕ ನುಡಿಯಲ್ಲಿ ನಿಸರ್ಗಪ್ರಿಯರು ಹಾಗೂ ರೈತಾಪಿ ಸಮುದಾಯದವರ ದೃಷ್ಟಿಕೋನದಲ್ಲಿ ಆ ವರ್ಷದಲ್ಲಿ ಮಳೆ ಚೆನ್ನಾಗಿ ಸುಗಮವಾಗಿ ಬೆಳೆಗಳಿಗೆ ಮುತ್ತಿನ ಬೆಲೆ ಬರುತ್ತದೆ ಎಂಬ ಅರ್ಥದಿಂದ ಕೂಡಿದೆ. "ಅಂಬಲಿ ಹಳಸೀತಲೇ ಪರಾಕ್" ಎಂದರೆ ಆಹಾರಕ್ಕೆ ಹಾಹಾಕಾರ ಬರುವ ಮುನ್ಸೂಚನೆ. ಅಂಬಲಿ ಎಂದರೆ ಆಹಾರ, ಸಕಲ ಜೀವರಾಶಿಗೂ ಆಹಾರವು ಒಂದಲ್ಲ ಒಂದು ವಿಧದಲ್ಲಿ ಪ್ರಕೃತಿಯು ನೀಡುತ್ತಾ ಬಂದಿದೆ. ಅಂದರೆ ಇಲ್ಲಿ ಅಂಬಲಿ ಹಳಸೀತಲೇ ಎಂದರೆ ಆಹಾರ ಕೆಡುವುದು. ಆ ಕಾಲದಲ್ಲಿ ಪ್ರಕೃತಿವಿಕೋಪದಿಂದ ಬೆಳೆ ಹಾನಿಯಾಗುತ್ತದೆ ಎಂದು ಜನರು ಅರ್ಥೈಸಿಕೊಂಡಿರುತ್ತಾರೆ. "ಮಳೆ ಬೆಳೆ ಸಂಪಲೇ ಪರಾಕ್" ಎಂದರೆ

ಕಾರಣಿಕ ನುಡಿಯು ಸಂಪೂರ್ಣ ಸ್ಪಷ್ಟತೆಯಿಂದ ಕೂಡಿದೆ. ಈ ಕಾಲಘಟ್ಟದಲ್ಲಿ ಮಳೆ ಸಕಾಲದಲ್ಲಿ ನಡೆಯುವುದರಿಂದ ಬೆಳೆ ಚೆನ್ನಾಗಿ ಬಂದು ಸಕಲ ಜೀವರಾಶಿಗಳು ನೆಮ್ಮದಿಯ ಜೀವನವನ್ನು ನಡೆಸುವ ಈ ವರ್ಷದ ಕಾರಣಿಕ ನುಡಿಯ ಅರ್ಥವಾಗಿದೆ. "ಆಕಾಶಕ್ಕೆ ಸಿಡಿಲು ಬಡಿತಲೇ ಪರಾಕ್" ಎಂದರೆ ಇಡೀ ಆಕಾಶವೇ ಕಳಚಿ ಮೈಮೇಲೆ ಬಿದ್ದಂತೆ ಎಂಬ ಭಯದ ಕಾರಣಿಕದ ನುಡಿಯ ಅರ್ಥ. ಇಲ್ಲಿ ಗುಡುಗು ಸಿಡಿಲಿನಿಂದಾದ ಮಳೆ ಅಕಾಲಿಕ ನಾಶ ಪ್ರಕೃತಿ ವಿಕೋಪಕವಾಗಬಹುದು ಎಂಬ ಊಹೆಯಾಗಿದೆ. "ಕಲಕು ಮಲಕು ಆದೀತಲೇ ಪರಾಕ್" ಎಂದರೆ ಇಡೀ ವಾತಾವರಣದಲ್ಲಿ ಹಸಿವು, ದಾರಿದ್ರ್ಯ, ಭಯದ ಮುನ್ಸೂಚನೆಯ ಸಂಕೇತ. ಹಾಗಾಗಿ ಆ ವರ್ಷದಲ್ಲಿ ಬರಗಾಲದ ಛಾಯೆಯು ಇಡೀ ನಾಡಿಗೆ ಆವರಿಸಿದ್ದಿತ್ತು ಎಂಬುದು ಹಿರಿಯರ ಅಭಿಪ್ರಾಯವಾಗಿದೆ.

"ಮರಕ್ಕೆ ಮಬ್ಬುಗವಿತಲೇ ಪರಾಕ್" ಎಂದರೆ ಮರವು ಸತತ ಗಾಳಿಯನ್ನು ಉತ್ಪಾದಿಸುವ ಸರಬರಾಜು ಮಾಡುವ ಕಾರ್ಯದಲ್ಲಿರುತ್ತದೆ. ಇದರಿಂದ ಸಕಲ ಜೀವರಾಶಿಗಳಿಗೆ ಮರ ಆಶ್ರಯ ನೀಡುವುದು. ಆದರೆ ಮರಕ್ಕೆ ಮಬ್ಬು ಆವರಿಸುವ ಪ್ರಕ್ರಿಯೆ ನಡೆದರೆ ಹಾನಿಯುಂಟಾಗುವುದು ಖಚಿತ ಎಂಬುದು ಈ ಕಾರಣಿಕದ ಅರ್ಥವಾಗಿದೆ. "ಕಷ್ಟದೊಂದು ದಿನ ಬಂತಲೇ ಪರಾಕ್," "ಭೂಲೋಕಕ್ಕೆ ಮಬ್ಬುಗವಿತಲೇ ಪರಾಕ್", "ಮುತ್ತು ಒಡೆದು ದುಂಡಾಗುತಲೇ ಪರಾಕ್", "ಮರ್ತ್ಯಲೋಕಕ್ಕೆ ಕಪ್ಪು ಕವೀತಲೇ ಪರಾಕ್", "ಆಕಾಶಕ್ಕೆ ಶಿಡ್ಲು ಬಡಿತಲೇ ಪರಾಕ್" ಹೀಗೆ ಮೈಲಾರನ ಕಾರಣಿಕಗಳಲ್ಲಿ ಹೆಚ್ಚಾಗಿ ನಾಡಿನ ತುಂಬೆಲ್ಲಾ ಆಯಾ ವರ್ಷದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಅಹಿತಕರ ಘಟನೆಗಳು ನಡೆದಿರುವ ಕುರಿತು ಮೈಲಾರನ ಭಕ್ತರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಈ ಮೇಲಿನ ಕಾರಣಿಕ ನುಡಿಗಳಿಂದ ಆ ವರ್ಷಗಳಲ್ಲಿ ಪ್ರಕೃತಿ ವಿಕೋಪ, ರಾಜಕೀಯ ಏರಿಳಿತ, ಸುನಾಮಿ, ಭೂಕಂಪ, ಬರಗಾಲ, ಅಪಘಾತ, ನೀರಿನ ಕೊರತೆ ಇತ್ಯಾದಿ ಅಹಿತಕರ ಘಟನೆಗಳು ಜರುಗಿರುವುದು ಕಾರಣಿಕ ನುಡಿಗಳಿಗೂ ಕಾಕತಾಳೀಯವೆಂಬಂತೆ ಸಹಸಂಬಂಧವನ್ನು ಹೊಂದಿದೆ ಎಂದು ಊಹಿಸಬಹುದು. ಆದರೆ ಸ್ಪಷ್ಟವಾಗಿ ಆಧಾರ ಸಮೇತವಾಗಿ ಗುರುತಿಸುವುದು ತುಂಬಾನೆ ಕಷ್ಟವಾಗುತ್ತದೆ. ಕೆಲವು ಸಾರಿ ಕಾಕತಾಳೀಯವೆಂಬಂಂತೆ ನಡೆದಿರುವ ಉದಾಹರಣೆಗಳು ಸಹ ಕಾರಣಿಕ ನುಡಿಯಲ್ಲಿ ಸತ್ಯವು ಸಹ ಅಡಗಿದೆ.

"ಹುಟ್ಟಿದ ಕೂಸಿನ ಮೇಲೆ ಬಂಗಾರದ ಗಿಣಿ ಕೂಡ್ರತಲೇ ಪರಾಕ್" ಎಂದರೆ ಬಂಗಾರದ ಗಿಣಿ ಸಂಪತ್ತಿನ ಸಂಕೇತ. ಹಾಗಾಗಿ ಮಕ್ಕಳಲ್ಲಿ ಯಾವುದಕ್ಕೂ ಕೊರತೆ ಇರದೇ ಆರೋಗ್ಯವಾಗಿ ಹಣವು ಸಂಪೂರ್ಣ ವ್ಯವಸ್ಥೆಯಿಂದ ಕೂಡಿರುತ್ತದೆ ಎಂದು ಮೈಲಾರನ ಭಕ್ತರ ನಂಬಿಕೆ. ಅದರಂತೆ "ತುಂಬಿದ ಕೊಡದ ಮೇಲೆ ಬಂಗಾರದ ಗಿಣಿ ಕುಂತಿತಲೇ

ಪರಾಕ್", "ಬೆಳ್ಳಿ ತೊಟ್ಟಿಲು ದುಂಡಗಾಯಿತಲೇ ಪರಾಕ್", "ಮುತ್ತಿನ ರಾಶಿ ದುಂಡಗಾತಲೇ ಪರಾಕ್" ಇವೆಲ್ಲಾ ಕಾರಣಿಕ ನುಡಿಗಳು ಒಂದೇ ತರಹದ ಅರ್ಥವಿವರಣೆಯಲ್ಲಿರುವಂತೆ ಗೋಚರಿಸುತ್ತವೆ. ಅಂದರೆ ಇವೆಲ್ಲಾ ಕಾರಣಿಕ ನುಡಿಗಳು ಸಂಪತ್ತು, ಬೆಳೆ, ಮಳೆ, ಆರೋಗ್ಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಇತ್ಯಾದಿ ಕ್ಷೇತ್ರಗಳಲ್ಲಿ ಸುಭೀಕ್ಷೆಯ ಅಥವಾ ಬಂಗಾರದ ಛಾಯೆಯ ಸಮಯವಿದ್ದಂತೆ ಎಂದು ಗುರುತಿಸಬಹುದು. ಆದರೂ ಸಹ ಕೆಲವು ಸಾರಿ ಕಾರಣಿಕ ನುಡಿಯ ಅರ್ಥದಲ್ಲಿ ಏರಿಳಿತವು ಸಹ ಉಂಟಾಗುತ್ತದೆ.

"ತುಂಬಿದ ಕೊಡ ಮೂರು ಭಾಗ ಆದೀತಲೇ ಪರಾಕ್" ಈ ಕಾರಣಿಕ ನುಡಿಯ ಅರ್ಥ ನಾಡಿನ ಸಂಪತ್ತು ಮೂರು ಭಾಗವಾಗುವುದು. ರಾಜಕೀಯ ಸ್ಥಿತಿ ಅಂದರೆ ಸರಕಾರ ಮೂರು ಹೋಳುಗಳಾಗಿ ವಿಂಗಡನೆಗೊಂಡು ರಾಜಕೀಯ ಅಸ್ಥಿರತೆಯು ಈ ವರ್ಷದಲ್ಲಿ ನಡೆದದ್ದು ಇದಕ್ಕೆ ಸಹ ಸಂಬಂಧವಿದೆ ಎಂದು ಗುರುತಿಸಬಹುದು. ರಾಜಕೀಯ ತಜ್ಞರು ಇಂದಿಗೂ ಸಹ ಕಾರಣಿಕ ನುಡಿಯನ್ನೇ ಅನುಸರಿಸಿ ಅವಲಂಬಿಸುತ್ತಿರುವುದು ಇಂದಿಗೂ ಸಹ ಎಲ್ಲರ ಗಮನ ಸೆಳೆಯುತ್ತಿರುತ್ತದೆ. "ಮುತ್ತಿನ ರಾಶಿ ಮೂರು ತುಂಡಾತಲೇ ಪರಾಕ್", "ಮುತ್ತಿನ ಗಂಟು ಮೂರಾದಿತಲೇ ಪರಾಕ್", 'ಅಂಬಲಿ ಹಳಸೀತು ಕಂಬಳಿ ಬೀಸಿತಲೇ ಪರಾಕ್" ಇವೆಲ್ಲಾ ಕಾರಣಿಕ ನುಡಿಗಳು ಹಿಬ್ಬಾಗದ ಸೂಚನೆಯನ್ನು ನೀಡುತ್ತವೆ.

೨೦೧೮ರ ಮೈಲಾರ ಕಾರಣಿಕ ನುಡಿ "ಆಕಾಶಕ್ಕೆ ಸಿಡಿಲು ಬಡಿತಲೇ ಪರಾಕ್" ಬಹಳ ಮಹತ್ವದ್ದಾಗಿದೆ. ಅಂದರೆ ಈ ವರ್ಷದಲ್ಲಿ ಬಾರಿ ಅಕಾಲಿಕ ಮಳೆ ಬಂದು ಕೊಡಗು ಪ್ರದೇಶದಲ್ಲಿ ಬೆಟ್ಟಗುಡ್ಡಗಳು ಕುಸಿದು ಬಾರಿ ಅನಾಹುತ ಜರುಗಿತು. ಆದರೆ ಕೊಡಗು ಗುಡ್ಡವು ಕುಸಿಯಲು ಇದಕ್ಕೆ ಹಲವಾರು ವೈಜ್ಞಾನಿಕ ಕಾರಣಗಳಿವೆ. ಆದರೂ ಸಹ ಮೈಲಾರನ ಭಕ್ತರು ಈ ಕಾರಣಿಕ ನುಡಿಯನ್ನು ಹೋಲಿಕೆ ಮಾಡಿ ಅರ್ಥೈಸುವ ರೀತಿಯು ಅವರ ನಂಬಿಕೆ, ಆಚರಣೆಗೆ ಸಂಬಂಧಿಸಿದ್ದುದಾಗಿದೆ. ಹೀಗೆ ಪ್ರಕೃತಿ ವಿಕೋಪ, ನೆರೆಹಾವಳಿ, ಅಕಾಲಿಕ ಮಳೆ, ಅಪಘಾತ ಇತ್ಯಾದಿ ಕೃತ್ಯಗಳು ಜರುಗಲು ಮುಖ್ಯ ಕಾರಣಗಳೆಂದರೆ ಮಾನವನು ಪ್ರಕೃತಿಯ ಮೇಲೆ ನಿರಂತರ ನಡೆಸುತ್ತಿರುವ ಹೇಯ ಕೃತ್ಯಗಳು, ದಬ್ಬಾಳಿಕೆ, ಪರಿಸರ ಸಂರಕ್ಷಣೆ ಕುರಿತು ಅರಿವು ಇಲ್ಲದಿರುವಿಕೆಯು ಇದಕ್ಕೆ ಮುಖ್ಯ ಕಾರಣಗಳಾಗಿವೆ. ಪರಿಸರವನ್ನು ನಾವು ಸಂರಕ್ಷಿಸಿದರೆ ಪರಿಸರ ನಮ್ಮನ್ನು ಸಂರಕ್ಷಿಸುತ್ತದೆ ಎಂಬ ಅರಿವು, ತಿಳುವಳಿಕೆ ಸಕಲ ಮಾನವರಲ್ಲಿ ಬರಬೇಕಾದ ಅನಿವಾರ್ಯತೆ ಇದೆ.

ಮೈಲಾರ ಕಾರಣಿಕ ನುಡಿಗಳು ಕಾಲಕಾಲಕ್ಕೆ ಬದಲಾವಣೆ ಹೊಂದಿದರೂ ಸಹ ಕೆಲವೊಂದು ಕಾರಣಿಕ ನುಡಿಗಳು ಪುನರಾವರ್ತನೆಗೊಂಡಿವೆ. ಕಾರಣಿಕ ನುಡಿಯ ನಂತರ ಮೈಲಾರನ ಜಾತ್ರೆಯು ಮುಕ್ತಾಯವಾಯಿತೆಂಬ ಸಂದೇಶ ಪ್ರಸಾರ. ಜನರಲ್ಲಿ ಪರಿಸರ

ಸಂರಕ್ಷಣೆಗೆ ಅರಿವು ಮೂಡಿಸಲು, ಜನರು ತಮ್ಮ ಅನ್ನವನ್ನು ತಾವೇ ದುಡಿದು ಸಂಪಾದಿಸಲು, ಜನರಲ್ಲಿ ದೈವಿ ಕಲ್ಪನೆ ಮೂಡಿಸಲು ಹೀಗೆ ಇತ್ಯಾದಿ ಅಂಶಗಳನ್ನು ಜನಸಮುದಾಯದವರಿಗೆ ತಿಳಿಸಲು ಕಾರಣಿಕ ನುಡಿಯು ಅರ್ಥಪೂರ್ಣವಾಗಿ, ದೈವವಾಣಿಯಾಗಿ ಪ್ರತಿವರ್ಷ ಮೈಲಾರನ ಜಾತ್ರೆಯಲ್ಲಿ ಆರಾಧನೆಗೊಳಪಡುತ್ತದೆ. 'ಅರಿವೇ ಗುರು', 'ನುಡಿದಂತೆ ನಡೆ', ಹೀಗೆ ಶರಣರ ವಾಣಿಯಂತೆ ಮೈಲಾರನ ಕಾರಣಿಕ ನುಡಿಗೆ ಭಾವನಾತ್ಮಕ, ಗೌರವಪೂರ್ವಕ, ಭಯಭಕ್ತಿಯಿಂದ ಪೂಜೆ ಪುನಸ್ಕಾರಾಧಿಯಾಗಿ ಜನರು ಇಂದಿಗೂ ನಡೆದುಕೊಳ್ಳುತ್ತಾರೆ. ಮೈಲಾರನಿಗೆ ಹರಕೆ ತೀರಿಸುವುದು, ಕುದುರೆ ಸೇವೆ, ದೊಡ್ಡ ಬಂಡಿ ಸೇವೆ, ದೋಣಿ ಸೇವೆ ಇತ್ಯಾದಿಗಳಿಂದ ಮೈಲಾರನನ್ನು ಆರಾಧಿಸುವುದು ವಿಶೇಷವಾಗಿದೆ. ಹಾಗಾಗಿ ಮೈಲಾರನ ಕಾರಣಿಕ ನುಡಿಯು ನಾಡಿನ ತುಂಬೆಲ್ಲಾ ಪ್ರಸಿದ್ಧಿಯನ್ನು ಹೊಂದಿ ವಿಶೇಷವಾಗಿ ಗೌರವಿಸಲಾಗುತ್ತದೆ. ಹೀಗೆ ಮೈಲಾರನ ಕಾರಣಿಕ ನುಡಿಗಳನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಣೆಗೊಳಪಡಿಸುವ ಅಗತ್ಯತೆ ಇದೆ. ವಿಶ್ಲೇಷಣೆ ವಿಮರ್ಶೆಯು ಅವರವರ ಭಾವನಾತ್ಮಕ ವಲಯಕ್ಕೆ ಸಂಬಂಧಿಸಿರುತ್ತದೆ ಎಂದು ಗುರುತಿಸಬಹುದು.

ಮೈಲಾರನ ಕಾರಣಿಕ ನುಡಿಗಳನ್ನು ವಿಶ್ಲೇಷಿಸುವುದು ತುಂಬಾ ಕಷ್ಟಕರವಾದುದು. ಆದರೂ ಸಹ ಕ್ಷೇತ್ರಕಾರ್ಯಾಧಾರಿತವಾಗಿ ಜಾತ್ರೆ ಮತ್ತು ಕಾರಣಿಕೋತ್ಸವ ಜರುಗುವ ಸಮಯದಲ್ಲಿ ಹಾಜರಾಗಿ ಸ್ಥಳೀಯರು ಹಾಗೂ ಮೈಲಾರನ ಭಕ್ತರ ಸಮೂಹದಿಂದ ಮಾಹಿತಿಯನ್ನು ಸಂಗ್ರಹಿಸಿ ಇಲ್ಲಿ ಕಾರಣಿಕ ನುಡಿಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಪ್ರತಿಯೊಂದು ಧರ್ಮ, ಸಮುದಾಯಗಳಿಗೆ ಅವರದೇ ಆದಂತಹ ಆರಾಧ್ಯ ದೈವ ಅಥವಾ ಮನೆ ದೇವರು ಇರುತ್ತಾನೆ. ಸಂಪ್ರದಾಯಸ್ಥರು ಪರಂಪರಾಗತವಾಗಿ ತಮ್ಮ ದೇವರ ಮೇಲೆ ನಂಬಿಕೆ ಇಟ್ಟುಕೊಂಡು ಆಚರಣೆ, ಉತ್ಸವ, ಧಾರ್ಮಿಕ, ವಿಧಿ-ವಿಧಾನಗಳನ್ನು ಚಾಚು ತಪ್ಪದೇ ಆಚರಿಸಿಕೊಂಡು ಬರುತ್ತಿರುತ್ತಾರೆ. ಇದರಿಂದ ಅವರಿಗೆ ಫಲಾಪೇಕ್ಷೆ, ಕಷ್ಟ ಸಂಕಷ್ಟಗಳು ನಿವಾರಣೆ, ತೊಡಕುಗಳು ಇವು ಅವರವರ ಭಾವನಾತ್ಮಕ ವಲಯಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಆದರೆ ಲಿಖಿತ ರೂಪದ ದಾಖಲೆ ಸಮೇತ ಪತ್ತೆ ಹಚ್ಚಿ ಸ್ಪಷ್ಟಪಡಿಸುವುದು ಕಷ್ಟವಾಗುತ್ತದೆ ಎಂದು ಹೇಳಬಹುದು. ಏನೇಯಾದರೂ ಸಹ ಮೈಲಾರ ಕಾರಣಿಕ ನುಡಿ ಅರ್ಥಗರ್ಭಿತ ದೈವವಾಣಿಯಾಗಿದೆ ಎಂಬ ಮಾತನ್ನು ಅಲ್ಲಗಳೆಯುವಂತಿಲ್ಲ. ಕಾರಣಿಕ ನುಡಿ ಮೈಲಾರನ ನುಡಿ, ದಿವ್ಯವಾಣಿ, ಭವಿಷ್ಯವಾಣಿ ಎಂಬ ನಂಬಿಕೆಯಿಂದ ಆರಾಧಿಸುವ, ಪೂಜಿಸುವ ಸಂಪ್ರದಾಯ ಪ್ರಸ್ತುತದಲ್ಲಿ ವೈಶಿಷ್ಟ್ಯತೆಯಿಂದ ಕೂಡಿ ವಿಶೇಷವಾಗಿ ಕಾರಣಿಕೋತ್ಸವವನ್ನು ಆಚರಿಸಲಾಗುತ್ತದೆ.

**ಕೊನೆ ಟಿಪ್ಪಣಿಗಳು**

೧. ವೆಂಕಟೇಶ ಜಿ, ೨೦೦೩, 'ಮೀನಗೊಂದಿ ಮಲ್ಲಯ್ಯ ಜಾನಪದ ಅಧ್ಯಯನ' (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪು.೨೦೬

೨. ಅದೇ, ಪು.೨೦೭

೩. ಅದೇ, ಪು.೨೦೯

೪. ಅದೇ, ಪು.೨೧೧

೫. ಅಶ್ವಿನಿ ಬಸಪ್ಪ ಕರೀಕಟ್ಟಿ, ೨೦೧೬, 'ಕರ್ನಾಟಕದಲ್ಲಿ ರಂಗನಾಥ ಸಂಪ್ರದಾಯ' (ಸಾಂಸ್ಕೃತಿಕ ಮತ್ತು ಚಾರಿತ್ರಿಕ ಅಧ್ಯಯನ) (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಪು.೧೩೫

೬. ಮಂಜುನಾಥ ಬೇವಿನಕಟ್ಟಿ, ೨೦೦೭, 'ಕನ್ನಡ ಜನಪದ ನಂಬಿಕೆಗಳು' ಪು.೩೧

೭. ಅದೇ, ಪು.೩೫

೮. ನೇಗಿನಹಾಳ ಎಂ.ಬಿ., ೧೯೯೪, 'ಮೈಲಾರಲಿಂಗ– ಖಂಡೋಬಾ ಒಂದು ಸಾಂಸ್ಕೃತಿಕ ಅಧ್ಯಯನ', ಪು.೧೨

೯. ಪರಮಶಿವಯ್ಯ ಜಿ.ಶಂ., ೨೦೧೨, 'ದಕ್ಷಿಣ ಕರ್ನಾಟಕದ ಕಾವ್ಯಗಳ ಪ್ರಕಾರಗಳು', ಪು.೩೨೫–೩೨೬

೧೦. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ–೦೮, ೨೦೦೬, ಬೀದರ್ ಜಿಲ್ಲೆ, ಪು.೧೦೪

೧೧. ಅದೇ, ಪು.೪

೧೨. ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ–೦೭, ೧೯೭೯, ಮಂಡ್ಯ ಜಿಲ್ಲೆ, ಪು.೪

೧೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೮, ಪೂರ್ವೋಕ್ತ, ಪು.೨೩

೧೪. ಎಪಿಗ್ರಾಫಿಯಾ. ಕರ್ನಾಟಿಕ ಸಂಪುಟ ೧೦, ೧೯೯೭, ಹಾಸನ ಜಿಲ್ಲೆ, ಪು.೯೧

೧೫. ಅದೇ, ಪು.೫೬೭

೧೬. ಅದೇ, ಪು.೪೧೧

೧೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೫, ೨೦೦೧. ಆಂಧ್ರಪ್ರದೇಶ ಶಾಸನಗಳು, ಭಾಗ–೨, ಪು.೨೭

೧೮. ನೇಗಿನಹಾಳ ಎಂ.ಬಿ., ಪೂರ್ವೋಕ್ತ, ಪು.೧೪೦

೧೯. ಅದೇ, ಪು.೧೪೧

೨೦. ನಾಗರಾಜ ಹೊಸೂರಕರ್, ೨೦೦೮, ಮೈಲಾರಲಿಂಗನ ಆಚರಣೆ ಒಂದು ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ ಪಿಎಚ್.ಡಿ., ಮಹಾಪ್ರಬಂಧ) ಪು.೫೯

೨೧. ನೇಗಿನಹಾಳ ಎಂ.ಬಿ., ಪೂರ್ವೋಕ್ತ, ಪು.೧೫೬

೨೨. ವೆಂಕಟೇಶ್ ಎಂ.ಎನ್., ೨೦೧೨, 'ನಿಮ್ಮನೆಗೆ ಗುಡ್ಡದಯ್ಯ', ಪು.೩೬

೨೩. ನೇಗಿನಹಾಳ ಎಂಬಿ., ಪೂರ್ವೋಕ್ತ, ಪು.೧೫೭

೨೪. ನಾಗರಾಜ್ ಹೊಸೂರಕರ್, ಪೂರ್ವೋಕ್ತ, ಪು.೭೭

೨೫. ರಮೇಶ ನಾಯಕ (ಲೇ), ೨೦೧೨, ಚರಿತ್ರೆ, ಮಹದೇವ ಸಿ.,(ಸಂ), 'ಮೈಲಾರ', ಪು.೩೩

೨೬. ನೇಗಿನಹಾಳ ಎಂ.ಬಿ., ಪೂರ್ವೋಕ್ತ, ಪು.೧೭೧

೨೭. ಪುರುಷೋತ್ತಮ ಬಿಳಿಮಲೆ, ೧೯೯೬, ಹಾಲುಕೆನೆ, ಪು.೪೮

೨೮. ಸೊಂಥಮೀರ್ ಗುಂಥರ್, ೧೯೮೪, ಮಲ್ಲಾರಿ-ಖಂಡೋಬಾ, ಪು.೧೬೭

೨೯. ವೆಂಕಟೇಶ್ ಎಂ.ಎನ್., ಪೂರ್ವೋಕ್ತ, ಪು.೬೯

೩೦. ಜವರೇಗೌಡ ದೇ. ೧೯೮೬, 'ಜಾನಪದ ವಾಹಿನಿ' ಪು.೧೦೩

೩೧. ವೆಂಕಟೇಶ ಜಿ., ಪೂರ್ವೋಕ್ತ, ಪು.೫೭

೩೨. ಪಡಶೆಟ್ಟಿ ಎಂ.ಎಂ. (ಲೇ), ೧೯೯೪, ಪೂಜಾರಿ-ಭಕ್ತರು, ಸೋಮಶೇಖರ್ ಇಮ್ರಾಪುರ (ಸಂ), ಜಾನಪದ ಸಾಹಿತ್ಯ ದರ್ಶನ-೯, ಪು.೬೨

೩೩. ಪುರುಷೋತ್ತಮ ಬಿಳಿಮಲೆ, ೧೯೯೭, ಕೂಡುಕಟ್ಟು, ಪು.೨೩

೩೪. ಹಿರೇಮಠ ಎಸ್.ಎಸ್., ೨೦೦೫, ಜನಪದ-ಸಮಾಜ ಸಂಸ್ಕೃತಿ, ಪು.೧೨

೩೫. ಅದೇ, ಪು.೧೩

೩೬. ವೆಂಕಟೇಶ ಎಂ.ಎನ್., ಪೂರ್ವೋಕ್ತ, ಪು.೧೫೪

೩೭. ಅದೇ, ಪು.೧೫೮

೩೮. ಅದೇ, ಪು.೧೫೯-೧೬೦

# ಅಧ್ಯಾಯ: ಆರು

## ಸಮಾರೋಪ

ಪ್ರಾಚೀನ ಕಾಲದಿಂದ ಮಾನವ ತನ್ನದೇ ಆದ ಸಮುದಾಯದಲ್ಲಿ ಇದ್ದು ಜೀವನ ಮುಂದುವರೆಸಿಕೊಂಡು ಬದುಕನ್ನು ಕಟ್ಟಿಕೊಂಡಿದ್ದಾನೆ. ಮಾನವನು ತನ್ನ ಮನಸ್ಸಿನ ಶಾಂತಿಗೋಸ್ಕರವಾಗಿ ಪ್ರಕೃತಿಯೊಡನೆ ಜೀವಿಸಿ, ಪ್ರಕೃತಿಯಲ್ಲಿ ಕಂಡುಬರುವ ಅನೇಕ ವಸ್ತುಗಳನ್ನು ಪೂಜಿಸತೊಡಗಿದ. ಹಾಗೆಯೇ ತನ್ನ ಸುತ್ತಮುತ್ತಲಿರುವ ಎಲ್ಲರಿಗೂ ತಿಳಿಸಿದ. ಬುಡಕಟ್ಟು ಪ್ರದೇಶಗಳಲ್ಲಿ ಕಲ್ಲನ್ನು, ಮರವನ್ನು, ನದಿಯನ್ನು, ಬೆಟ್ಟ ಗುಡ್ಡವನ್ನು ನೋಡಿ ಅಗೋಚರ ಶಕ್ತಿ ಇದೆ ಎಂದು ನಂಬಿಕೊಂಡು ಪರಿಸರವನ್ನು ಆರಾಧನೆ ಮಾಡತೊಡಗಿದ. ಮುಂದುವರೆದು ತನ್ನ ಜ್ಞಾನಮಟ್ಟವೂ ಹೆಚ್ಚಿದಂತೆಲ್ಲಾ ಕ್ರಮೇಣವಾಗಿ ದೈವಕ್ಕೆ ಮೂರ್ತಿ ಸ್ವರೂಪ ನೀಡಿ ಆರಾಧನೆ ಮಾಡತೊಡಗಿದ. ಪ್ರಸ್ತುತ ದಿನಗಳಲ್ಲಿ ಆರಾಧನೆ ಮಾಡುವ ದೈವವೂ ಪ್ರಾಚೀನ ಕಾಲದಲ್ಲಿ ಜನರು ಆರಾಧನೆ ಮಾಡುವ ದೈವಗಳೇ ಆಗಿವೆ. ಒಂದಲ್ಲ ಒಂದು ರೀತಿಯಲ್ಲಿ ಆದಿಮಾನವನು ರೂಪಿಸಿದ ದೇವತೆಗಳೇ ಇಂದು ಜನಮನ್ನಣೆ ಗಳಿಸಿದ ದೈವಗಳಾಗಿವೆ. ಬುಡಕಟ್ಟು ಜನರು ತಮ್ಮ ಹಾಗೆ ನಾವು ಆರಾಧನೆ ಮಾಡುವ ದೈವ ನಮ್ಮಂತೆಯೇ ಇರಬೇಕು ಎಂದುಕೊಂಡು ದೈವಗಳನ್ನು ಮಾನವರಂತೆ ಸೃಷ್ಟಿಸಿದರು. ಹೀಗೆ ಸೃಷ್ಟಿ ಮಾಡಿದ ದೈವಗಳಲ್ಲಿ ಭೈರವ, ವೀರಭದ್ರ ಹಾಗೂ ಮೈಲಾರ ಕರ್ನಾಟಕದ ತುಂಬೆಲ್ಲಾ ಹರಡಿ ಎಲ್ಲಾ ಸಮುದಾಯಗಳಲ್ಲಿ ನೆಲೆಯೂರಿದ ದೈವಗಳಾಗಿವೆ.

ಕರ್ನಾಟಕದಲ್ಲಿ ಚಾರಿತ್ರಿಕವಾದ ಮಹತ್ವ ಪಡೆದ ನಾಯಕರುಗಳಾದ ಮಂಟೇಸ್ವಾಮಿ, ಮಲೆಮಾದೇಶ್ವರ, ಜುಂಜಪ್ಪ, ಕುಮಾರರಾಮಗಳಂತೆ ಮೈಲಾರನು ಸಹ, ಚಾರಿತ್ರಿಕವಾಗಿ ಈತನ ಹುಟ್ಟು ಬುಡಕಟ್ಟು ಸಮುದಾಯಗಳಲ್ಲಿ ಆರಾಧಿಸಿ ಇಂದಿನ ಪ್ರಸ್ತುತ ದಿನಮಾನಗಳಲ್ಲಿ ಕುರುಬ ರಾಮೋಶಿ ಜನರಿಂದ ಬ್ರಾಹ್ಮಣದವರಿಗೆ ಆರಾಧನೆಗೆ ಒಳಗಾಗುವ ದೈವ ಮೈಲಾರ. ಮೈಲಾರನಿಗೆ ಸಂಬಂಧಿಸಿದಂತೆ ಕಾವ್ಯ, ಪುರಾಣ, ಮೌಖಿಕ ಆಕರಗಳು ನಾಡಿನ ತುಂಬೆಲ್ಲಾ ಹರಡಿ ವಿದ್ವಾಂಸರಿಗೆ ಚಾರಿತ್ರಿಕ, ಜಾನಪದೀಯ ಹಾಗೂ ಸಾಂಸ್ಕೃತಿಕ ಅಧ್ಯಯನಗಳನ್ನು

ಮಾಡಲು ಪ್ರೇರಕ ಶಕ್ತಿಯಾಗಿ ಕಂಡುಬರುತ್ತದೆ. ಮೈಲಾರನು ಶೈವಧರ್ಮದ ಆರಾಧಕ ಆದರೂ ಎಲ್ಲಾ ಧರ್ಮೀಯರ ಮನದಲ್ಲಿ ನೆಲೆಯೂರಿದ ದೈವ ಪ್ರಮುಖವಾಗಿ ಮೈಲಾರನ ವಿವಿಧ ದೇವತೆ ಸಂಬಂಧದಿಂದಾಗಿ ಹೆಚ್ಚು ಪ್ರಸಿದ್ಧಿಯನ್ನು ಪಡೆಯಲು ಕಾರಣವಾಗಿರಬಹುದು. ಭೈರವ ಹಾಗೂ ವೀರಭದ್ರನ ಲಕ್ಷಣವನ್ನು ಹೊಂದಿರುವ ಮೈಲಾರ ಮೂರ್ತಿ ಸ್ವರೂಪ ಹಾಗೂ ಲಿಂಗದ ಪೂಜೆಯೂ ಉಂಟು. ಭೈರವ ಹಾಗೂ ವೀರಭದ್ರರ ಜೊತೆ ಜೊತೆಯಲ್ಲಿ ಸಾಗಿ ಬಂದ ಮೈಲಾರ ಸ್ಪಷ್ಟವಾದ ಮೂರ್ತಿ ಪೂಜೆಯು ಪ್ರಾಚೀನದಲ್ಲಿ ಕಂಡುಬರುವುದಿಲ್ಲ. ಆದರೆ ಬೆಟ್ಟ ಗುಡ್ಡವನ್ನೆ ಬುಡಕಟ್ಟು ಜನರು ಲಿಂಗವೆಂದು, ಬೆಟ್ಟಗುಡ್ಡವನ್ನೇ ಮೈಲಾರನೆಂದು ಪೂಜಿಸಲು ಆರಂಭಿಸಿದರು. ಕಾಲಾನಂತರದಲ್ಲಿ ಬುಡಕಟ್ಟು ಜನರು ಮೈಲಾರನಿಗೆ ಒಂದು ರೂಪವನ್ನು ನೀಡಿ ಆರಾಧನೆಯನ್ನು ಮಾಡಿದರು. ಹೀಗೆ ರೂಪಾಂತರವಾದ ಮೈಲಾರ ರಾಜಮನೆತನಗಳಲ್ಲಿ ಮೂರ್ತಿ ಸ್ವರೂಪವಾದ ಲಕ್ಷಣಗಳಿಂದ ಆರಾಧನೆಗೆ ಒಳಗಾಗಿ ಇಂದಿನ ಪ್ರಸ್ತುತ ದಿನಗಳಲ್ಲಿ ಎಲ್ಲರ ಆರಾಧನೆಗೆ ಒಳಗಾಗಿದ್ದಾನೆ.

ದಕ್ಷಿಣ ಭಾರತದ ಚಾರಿತ್ರಿಕ ಕಾಲಘಟ್ಟದಲ್ಲಿ ಹಲವಾರು ದೇವತೆಗಳು ನಾಡಿನ ಉದ್ದಗಲಕ್ಕೂ ವ್ಯಾಪಿಸಿ ಜನರ ಆರಾಧ್ಯದೈವವಾಗಿ ನೆಲೆಯೂರಿವೆ. ತಮಿಳುನಾಡಿನಲ್ಲಿ ಮುರುಗನಿದ್ದಂತೆ, ಕೇರಳದಲ್ಲಿ ಅಯ್ಯಪ್ಪನಿದ್ದಂತೆ, ಮಹಾರಾಷ್ಟ್ರದಲ್ಲಿ ಖಂಡೋಬನಿದ್ದಂತೆ, ಕರ್ನಾಟಕದಲ್ಲಿ ಮೈಲಾರನಾಗಿ ಎಲ್ಲಾ ಜನ ಸಮುದಾಯದಲ್ಲಿ ಬೇರೂರಿರುವ ದೈವ ಎಂದರೆ ಮೈಲಾರ. ಚಾರಿತ್ರಿಕ ಹಾಗೂ ಸಾಂಸ್ಕೃತಿಕವಾಗಿ ತನ್ನದೇ ಆದ ಭಕ್ತರ ಗುಂಪನ್ನು ಒಂದೆಡೆಗೆ ತರುವ ಶಕ್ತಿ ಈ ದೈವಕ್ಕಿದೆ. ಶಿಷ್ಟ ಮತ್ತು ಪರಿಶಿಷ್ಟ ನೆಲೆಯಲ್ಲಿ ಆರಾಧನೆಗೊಳ್ಳುವ ದೈವನೆಂದರೆ ಮೈಲಾರ. ಕರ್ನಾಟಕದ ತುಂಬಾ ಮೈಲಾರನಿಗೆ ಸಿಗುವ ಆಕರಗಳು ಚಾರಿತ್ರಿಕ ಮಹತ್ವವನ್ನು ಹೊಂದಿವೆ. ರಾಜ್ಯದ ತುಂಬಾ ಹರಡಿಕೊಂಡಿರುವ ಮೈಲಾರ ಪರಂಪರೆ ಸವಿವರವಾಗಿ ಚಾರಿತ್ರಿಕ ಅಂಶಗಳನ್ನು ಹೊಂದಿ ಅಧ್ಯಯನಗಳು ಅಷ್ಟಾಗಿ ನಡೆದಿರುವುದಿಲ್ಲ. ಉತ್ತರ ಕರ್ನಾಟಕದ ಕೆಲವು ಸ್ಥಳಗಳನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡುವ ಪ್ರಯತ್ನಗಳಾಗಿವೆ. ಜಾನಪದೀಯ ಹಿನ್ನೆಲೆಯನ್ನು ಹೊಂದಿದ ಮೈಲಾರನಿಗೆ ಅನೇಕ ಅಧ್ಯಯನ ನಡೆದಿವೆ. ಪ್ರಮುಖವಾಗಿ ಚಾರಿತ್ರಿಕ ಮಹತ್ವವನ್ನು ಹೊಂದಿದ ದೇವಾಲಯ, ಶಾಸನ, ಮೂರ್ತಿಶಿಲ್ಪ, ಬುಡಕಟ್ಟು, ಮೌಖಿಕ ಸಾಹಿತ್ಯ ಹಾಗೂ ನಂಬಿಕೆ ಆಚರಣೆಗಳನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡಲಾಗಿದೆ. ಈ ಮಹಾಪ್ರಬಂಧದ ಆಯ್ಕೆ ಮಾಡಿಕೊಂಡು ಇದುವರೆಗಿನ ಅಧ್ಯಯನಗಳ ಪೂರ್ವ ಸಮೀಕ್ಷೆಗಳನ್ನು ಅಕಾರಾಧಿಯಾಗಿ ಜೋಡಿಸಿಕೊಳ್ಳಲಾಯಿತು. ಮೈಲಾರನಿಗೆ ಸಂಬಂಧಿಸಿದ ನೆಲೆಗಳನ್ನು ಪಟ್ಟಿ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಂಡು ಆ ನೆಲೆಯಲ್ಲಿರುವ ಚಾರಿತ್ರಿಕ ಮಹತ್ವವನ್ನು ಹೊಂದಿದ ದೇವಾಲಯ, ಮೂರ್ತಿಶಿಲ್ಪ, ಶಾಸನಗಳು, ನಂಬಿಕೆ-ಆಚರಣೆಗಳು, ಮೌಖಿಕ ಸಾಹಿತ್ಯವನ್ನು

ಸಂಗ್ರಹಿಸಲಾಯಿತು. ಸಂಗ್ರಹಿಸಿದ ಮಾಹಿತಿಯನ್ನು ಚಾರಿತ್ರಿಕ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡಲಾಯಿತು. ಕ್ಷೇತ್ರಕಾರ್ಯದಲ್ಲಿ ದೊರೆತ ಚಾರಿತ್ರಿಕ ಅಂಶಗಳು ಹಾಗೂ ಆನುಷಂಗಿಕ ಆಕರಗಳನ್ನು ಬಳಸಿಕೊಂಡು ಪ್ರಸ್ತುತ ಮಹಾಪ್ರಬಂಧವನ್ನು ಪೂರ್ಣಗೊಳಿಸಲಾಗಿದೆ. ಪ್ರಸ್ತುತ ಅಧ್ಯಾಯ ಸಮಾರೋಪವಾಗಿದ್ದು ಇದರಲ್ಲಿ ಪ್ರತಿ ಅಧ್ಯಾಯದಲ್ಲಿರುವ ಪ್ರಮುಖವಾದ ಅಂಶಗಳನ್ನು ಚಾರಿತ್ರಿಕವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಇದುವರೆಗಿನ ಅಧ್ಯಯನ ಸಮೀಕ್ಷೆ, ವ್ಯಾಪ್ತಿ, ಅಧ್ಯಯನದ ವಿಧಾನ ಹಾಗೂ ಅಧ್ಯಯನ ಸ್ವರೂಪವನ್ನು ಚರ್ಚಿಸಲಾಗಿದೆ. ಪೀಠಿಕೆ ರೂಪದಲ್ಲಿ ಮಾನವನು ಪ್ರಕೃತಿಯೊಂದಿಗೆ ಬೆಳೆದುಬಂದ ಬಗೆ ಹಾಗೂ ಮೈಲಾರನಿಗೆ ದೈವಾರಾಧನೆಯ ಕಲ್ಪನೆಯನ್ನು ಚರ್ಚಿಸಲಾಗಿದೆ. ಮೈಲಾರನಿಗೆ ಸ್ಥಳದಿಂದ ಸ್ಥಳಕ್ಕೆ ಕರೆಯುವ ಹೆಸರುಗಳು, ವ್ಯಕ್ತಿನಾಮಗಳು, ಸ್ಥಳನಾಮಗಳಲ್ಲಿ ಮೈಲಾರನ ಉಲ್ಲೇಖಗಳನ್ನು ವಿವರಿಸಲಾಗಿದೆ. ಕರ್ನಾಟಕದಲ್ಲಿ ಕಂಡುಬರುವ ಮೈಲಾರ ನೆಲೆಗಳನ್ನು ಪರಿಚಯ ಮಾಡಿಕೊಡಲಾಗಿದೆ. ಮುಂದುವರೆದು ಅಧ್ಯಯನ ಉದ್ದೇಶದಲ್ಲಿ ಚಾರಿತ್ರಿಕವಾದ ಅಂಶಗಳಾದ ದೇವಾಲಯ, ಶಾಸನ, ಮೂರ್ತಿಶಿಲ್ಪಗಳು, ಮೌಖಿಕ ಆಕರಗಳು ಹಾಗೂ ನಂಬಿಕೆ ಆಚರಣೆಗಳನ್ನು ಚಾರಿತ್ರಿಕವಾದ ಅಧ್ಯಯನ ಮಾಡುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ. ಮೈಲಾರನು ಭೈರವ-ವೀರಭದ್ರ ದೇವತೆಗಳೊಂದಿಗೆ ಇರುವ ಸಂಬಂಧವನ್ನು ಅಧ್ಯಯನ ಉದ್ದೇಶವಾಗಿದೆ. ಅಧ್ಯಯನ ಸಮೀಕ್ಷೆಯಲ್ಲಿ ಇದುವರೆಗೂ ಈ ದೈವದ ಮೇಲೆ ಆದ ಬಹುಪಾಲು ಆಕರಗಳನ್ನು ಸಂಗ್ರಹಿಸಿಕೊಂಡು ಸಮೀಕ್ಷೆಯಲ್ಲಿ ಚರ್ಚಿಸಲಾಗಿದೆ. ಕರ್ನಾಟಕದಲ್ಲಿ ಕಂಡುಬರುವ ಮೈಲಾರನಿಗೆ ಸಂಬಂಧಿಸಿದ ಪ್ರಮುಖ ದೇವಾಲಯಗಳನ್ನು ವ್ಯಾಪ್ತಿಯಾಗಿ ಇಟ್ಟುಕೊಳ್ಳಲಾಗಿದೆ. ಹಾಗೆಯೇ ಮೈಲಾರ ಕಾಲವ್ಯಾಪ್ತಿಯನ್ನು ೯ನೇ ಶತಮಾನದಿಂದ ವಿಜಯನಗರೋತ್ತರ ಕಾಲದವರೆಗೆ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಅಧ್ಯಯನ ವಿಧಾನದಲ್ಲಿ ಈಗಾಗಲೇ ನಡೆದಿರುವ ಅಧ್ಯಯನಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಪ್ರಾಥಮಿಕ ಆಕರಗಳನ್ನು ಇಟ್ಟುಕೊಂಡು ಪ್ರಸ್ತುತ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಅಧ್ಯಯನದ ಸ್ವರೂಪದಲ್ಲಿ ಆರು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಕರ್ನಾಟಕದಲ್ಲಿ ಮೈಲಾರ ಪರಂಪರೆ, ದೇವಾಲಯಗಳು, ಮೂರ್ತಿಶಿಲ್ಪಗಳು ಹಾಗೂ ನಂಬಿಕೆ-ಆಚರಣೆಗಳು ಪ್ರಮುಖವಾದ ಅಧ್ಯಾಯಗಳಾಗಿವೆ.

ಎರಡನೆಯ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಮೈಲಾರ ಪರಂಪರೆಯಾಗಿದೆ. ಪ್ರಮುಖವಾಗಿ ಮೈಲಾರನಿಗೆ ಕಂಡುಬರುವ ಭೌಗೋಳಿಕ ಹಿನ್ನೆಲೆಯನ್ನು ಚರ್ಚಿಸಲಾಗಿದೆ. ಮೈಲಾರನು ನೆಲೆಗೊಂಡಿರುವ ಸ್ಥಳಗಳನ್ನು ಪ್ರಾಗೈತಿಹಾಸ ಕಾಲದ ನೆಲೆಗಳನ್ನು ಪಟ್ಟಿ ಮಾಡಿಕೊಂಡು

ಚರ್ಚಿಸಲಾಗಿದೆ. ಮೈಲಾರನು ಸಾಮಾನ್ಯವಾಗಿ ಎತ್ತರವಾದ ಬೆಟ್ಟ ಗುಡ್ಡಗಳಲ್ಲಿ ನೆಲೆಗೊಂಡಿರುವ ಮೈಲಾರನ ನೆಲೆಗಳನ್ನು ಗುರ್ತಿಸಲಾಗಿದೆ. ಹಾಗೆಯೇ ಮೈಲಾರನಿಗೆ ಸಂಬಂಧಿಸಿದ ಮೌಖಿಕ ಸಾಹಿತ್ಯ ಹಾಗೂ ಕಾವ್ಯ ಪುರಾಣಗಳ ಹಿನ್ನೆಲೆಯನ್ನು ಕ್ರಿ.ಶ. ೧೦ನೇ ಶತಮಾನದಿಂದ ಕಂಡುಬರುವ ಕಾವ್ಯ, ವಚನ, ಸುಳಾದಿ, ಕೀರ್ತನೆ, ಮೌಖಿಕ ಸಾಹಿತ್ಯದ ಮೂಲಕ ಪ್ರಸ್ತುತ ಪಡಿಸಲಾಗಿದೆ. ಮುಂದುವರೆದು ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದ ಮೈಲಾರನ ಆರಂಭದಿಂದ ಪ್ರಸ್ತುತ ದಿನಮಾನದವರೆಗೆ ನಡೆಯುವ ಆಚರಣೆಗಳನ್ನು ಚಾರಿತ್ರಿಕ ದೃಷ್ಟಿಕೋನದಿಂದ ಅಧ್ಯಯನ ಮಾಡಿ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಚಾರಿತ್ರಿಕ ಅಂಶಗಳಿಂದ ಮೈಲಾರನ ಮೂಲ ಸ್ಥಳ, ಪ್ರದೇಶದಿಂದ ಪ್ರದೇಶಕ್ಕೆ ಹರಡಿಕೊಂಡ ಬಗೆ, ಮೂರ್ತಿಶಿಲ್ಪದ ಸ್ವರೂಪ, ಮೂರ್ತಿಶಿಲ್ಪದಲ್ಲಿ ರೂಪಾಂತರ ಶಾಸನಗಳ ಕುರಿತು ಚರ್ಚೆ, ದೇವಾಲಯಗಳ ಚಾರಿತ್ರಿಕ ಹಿನ್ನೆಲೆ ಹಾಗೂ ನಂಬಿಕೆ–ಆಚರಣೆಗಳು ಮೈಲಾರನ ಚಾರಿತ್ರಿಕ ಅಂಶಗಳನ್ನು ಪ್ರಸ್ತುತ ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತ ಪಡಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಕಂಡುಬರುವ ಮೈಲಾರ ಹಾಗೂ ಮೈಲಾರನಿಗೆ ಸಂಬಂಧಿಸಿದ ಇತರೆ ದೇವಾಲಯಗಳನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡಲಾಗಿದೆ. ಕರ್ನಾಟಕದಲ್ಲಿರುವ ಪ್ರಮುಖವಾದ ೩೭ ದೇವಾಲಯಗಳನ್ನು ಅಧ್ಯಯನ ವ್ಯಾಪ್ತಿಗೆ ಅಳವಡಿಸಿಕೊಂಡು ದೇವಾಲಯಗಳನ್ನು ಅಧ್ಯಯನ ಮಾಡಲಾಗಿದೆ. ದೇವಾಲಯದ ಸ್ಥಳದ ಪರಿಚಯ, ಪ್ರಾದೇಶಿಕವಾಗಿ ದೈವವನ್ನು ಕರೆಯುವ ಬಗೆ, ದೇವಾಲಯವು ಶಾಸನೋಕ್ತವಾಗಿದೆಯೋ? ಇಲ್ಲವೋ? ದೇವಾಲಯದ ಲಕ್ಷಣಗಳು, ದೇವಾಲಯದಲ್ಲಿ ಮೈಲಾರನಿಗೆ ಸಂಬಂಧಿಸಿದ ವಿಶೇಷತೆ ಹಾಗೂ ದೇವಾಲಯದಲ್ಲಿ ಕಂಡುಬರುವ ಪರಿವಾರ ದೇವತೆಗಳನ್ನು ಮಹಾಪ್ರಬಂಧದಲ್ಲಿ ವಿವರಿಸಲಾಗಿದೆ. ದೇವಾಲಯದಲ್ಲಿ ಕಂಡುಬರುವ ನಂಬಿಕೆ ಆಚರಣೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ದೇವಾಲಯವನ್ನು ಚರ್ಚಿಸುವ ಚಾರಿತ್ರಿಕ ಅಂಶಗಳಿಂದ ಕೂಡಿದ ಶಾಸನ ಹಾಗೂ ವಾಸ್ತುಶಿಲ್ಪದ ಕಾಲಾವಧಿಯನ್ನು ದೇವಾಲಯಗಳ ರಚನೆಯ ದೃಷ್ಟಿಯಿಂದ ಅಧ್ಯಯನ ಮಾಡಲಾಗಿದೆ. ಮೈಲಾರ ಹಾಗೂ ಮೈಲಾರ ಪರಿವಾರಕ್ಕೆ ಸಂಬಂಧಿಸಿದ ಗಂಗೆಮಾಳಮ್ಮ, ಹೆಗ್ಗಪ್ಪ ದೇವಾಲಯಗಳನ್ನು ಪ್ರಸ್ತುತ ಮಹಾಪ್ರಬಂಧಕ್ಕೆ ಅಳವಡಿಸಿಕೊಳ್ಳಲಾಗಿದೆ. ದೇವಾಲಯ ಅಧ್ಯಾಯವನ್ನು ಚಾರಿತ್ರಿಕ ದೃಷ್ಟಿಕೋನದಿಂದ ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯವು ಮೂರ್ತಿಶಿಲ್ಪಗಳನ್ನು ಕುರಿತು ಮೀಸಲಿರಿಸಿದೆ. ಮೂರ್ತಿಶಿಲ್ಪಗಳನ್ನು ಕುರಿತು ಮೂರ್ತಿಶಿಲ್ಪಗಳ ಉಗಮವನ್ನು ಪೀಠಿಕೆ ರೂಪದಲ್ಲಿ ತಿಳಿಸಲಾಗಿದೆ. ಕರ್ನಾಟಕ ಪ್ರಮುಖ ಪ್ರದೇಶಗಳಲ್ಲಿ ಕಂಡುಬರುವ ಮೂರ್ತಿಶಿಲ್ಪಗಳನ್ನು

ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮೈಲಾರನಿಗೆ ಸಂಬಂಧಿಸಿದ ೧೨ ಮೂರ್ತಿಶಿಲ್ಪಗಳನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಛಾಯಾಚಿತ್ರ ಹಾಗೂ ಈಗಾಗಲೇ ನಡೆದಿರುವ ಅಧ್ಯಯನಗಳ ಹಿನ್ನಲೆಯಲ್ಲಿ ಮೂರ್ತಿಶಿಲ್ಪಗಳನ್ನು ವಿವರಿಸಲಾಗಿದೆ. ಮೈಲಾರನ ಮೂರ್ತಿಶಿಲ್ಪದ ಸ್ವರೂಪ, ಬಳಸಿದ ಶಿಲೆ, ಲೋಹ ಇನ್ನಿತರ ಅಂಶಗಳನ್ನು ಈ ಮಹಾಪ್ರಬಂಧದಲ್ಲಿ ತಿಳಿಸಲಾಗಿದೆ. ಮೈಲಾರ ಶಿಲ್ಪಗಳಲ್ಲಿ ರೂಪಾಂತರವಾದ ಬಗೆ ವಿವಿಧ ಪ್ರಕಾರದಲ್ಲಿ ಕಂಡುಬರುವ ಮೈಲಾರ ಶಿಲ್ಪಗಳನ್ನು ಹಾಗೂ ಮೈಲಾರನು ಹಿಡಿದ ಆಯುಧಗಳನ್ನು ಚರ್ಚಿಸಲಾಗಿದೆ. ಮೈಲಾರನಂತೆ ಮೈಲಾರನ ಪರಿವಾರಕ್ಕೂ ಮೂರ್ತಿಶಿಲ್ಪಗಳಿವೆ. ಪರಿವಾರ ಶಿಲ್ಪಗಳಾದ ಗಂಗೆಮಾಳಮ್ಮ, ತುಪ್ಪದ ಮಾಳಮ್ಮ, ಗಣೇಶ, ಹೆಗ್ಗಯ್ಯ, ವೀರಭದ್ರ, ಎಲ್ಲಮ್ಮ, ಶಿವಲಿಂಗ, ನಂದಿ, ಭೈರವ, ವಿಷ್ಣು, ನರಬಲಿ ಶಿಲ್ಪಗಳು, ಕುದುರೆಶಿಲ್ಪ, ನಾಗಶಿಲ್ಪ, ಶಿಬಾರ ಹಾಗೂ ಸಪ್ತಮಾತೃಕೆ ಶಿಲ್ಪಗಳು ಮೈಲಾರನಿಗೆ ಇರುವ ಸಂಬಂಧವನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಅಧ್ಯಾಯವು ಸಂಪೂರ್ಣ ಕ್ಷೇತ್ರಕಾರ್ಯವನ್ನು ಒಳಗೊಂಡಿದ್ದು, ಕ್ಷೇತ್ರಕಾರ್ಯದ ಛಾಯಾಚಿತ್ರಗಳನ್ನು ಅಧ್ಯಯನ ಮಾಡಿ ವಿವರಿಸಲಾಗಿದೆ.

ಐದನೆಯ ಅಧ್ಯಾಯ ನಂಬಿಕೆ ಆಚರಣೆಗಳು, ಪ್ರಸ್ತುತ ಅಧ್ಯಾಯವು ಸಂಪೂರ್ಣ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಛಾಯಾಚಿತ್ರಗಳು ಹಾಗೂ ನೇರವಾಗಿ ಕಂಡ ಆಚರಣೆಗಳನ್ನು ಸಂಪ್ರದಾಯವಾಗಿ ಕಟ್ಟಿಕೊಡುವ ಉದ್ದೇಶವನ್ನು ಈಡೇರಿಸಲಾಗಿದೆ. ಪ್ರಾಚೀನ ಕಾಲದಿಂದ ಹಂತಹಂತವಾಗಿ ಬೆಳೆದ ಮಾನವ ಬದಲಾವಣೆಗೊಳ್ಳುತ್ತಾ ತನ್ನದೇ ಆದ ನಂಬಿಕೆ ಆಚರಣೆಗಳನ್ನು ಮುಂದುವರೆಸಿಕೊಂಡು ಬಂದ ನಂಬಿಕೆ ಆಚರಣೆಗಳ ಮಹತ್ವವನ್ನು ಅರಿತುಕೊಂಡು ವರ್ಷದುದ್ದಕ್ಕೂ ನಡೆಯುವ ಆಚರಣೆಗಳಲ್ಲಿ ಭಾಗಿಯಾಗಿ ಛಾಯಾಚಿತ್ರಗಳನ್ನು ತೆಗೆದು, ಆಚರಣೆಗಳನ್ನು ಕಣ್ಣಾರೆ ಕಂಡು, ಮೈಲಾರನಿಗೆ ಸಂಬಂಧಿಸಿದಂತೆ ನಂಬಿಕೆ–ಆಚರಣೆಗಳನ್ನು ವಿವರಿಸಲಾಗಿದೆ. ಪ್ರಮುಖವಾಗಿ ಕರ್ನಾಟಕದಲ್ಲಿ ಕಂಡುಬರುವ ಮೈಲಾರ ಸಂಪ್ರದಾಯ ನಂಬಿಕೆ–ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯಿಂದ ಕೂಡಿವೆ. ಹಾಗೂ ಇಂತಹ ಆಚರಣೆಗಳ ಒಂದೇ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ನಂಬಿಕೆ–ಆಚರಣೆಗಳನ್ನು ಗಮನಿಸಿದ ಮೇಲೆ ಮೈಲಾರನಿಗೆ ಇರುವ ಚಾರಿತ್ರಿಕವಾದ ಮಹತ್ವ ಅಂಶಗಳನ್ನು ಚರ್ಚಿಸಲಾಗಿದೆ. ಈ ದೈವಕ್ಕೆ ಸೇವೆಯನ್ನು ಮಾಡುವ ವ್ಯಕ್ತಿಗಳೊಂದಿಗೆ ಚರ್ಚಿಸಿ ಮಹಾಪ್ರಬಂಧದಲ್ಲಿ ಮೈಲಾರನಿಗೆ ನಡೆಸುವ ವಿಧಿ–ವಿಧಾನಗಳನ್ನು ವಿವರಿಸಲಾಗಿದೆ.

**ಅಧ್ಯಯನದ ಫಲಿತಗಳು**

* ಕರ್ನಾಟಕದಲ್ಲಿ ಮೈಲಾರ ಪರಂಪರೆ: ಚಾರಿತ್ರಿಕ ಅಧ್ಯಯನ ಎಂಬ ವಿಷಯವನ್ನು ಶಿಷ್ಟ ಮತ್ತು ಪರಿಶಿಷ್ಟ ನೆಲೆಯಲ್ಲಿ ಚಾರಿತ್ರಿಕವಾದ ಅಂಶಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

* ಕರ್ನಾಟಕದಲ್ಲಿ ಕಂಡುಬರುವ ೧೫ ಜಿಲ್ಲೆಗಳಲ್ಲಿ ೨೭ ಮೈಲಾರನ ಕ್ಷೇತ್ರಗಳನ್ನು ಕ್ಷೇತ್ರಕಾರ್ಯ ಮಾಡಿ, ಚಾರಿತ್ರಿಕವಾಗಿ ಮಹತ್ವವನ್ನು ಪಡೆದ ಪ್ರಾಚ್ಯಾವಶೇಷಗಳನ್ನು ದಾಖಲಿಸುವ ಪ್ರಯತ್ನ ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

* ಭೌಗೋಳಿಕವಾಗಿ ಮಹತ್ವವನ್ನು ಪಡೆದಿರುವ ಈ ಪರಂಪರೆಯು, ಪ್ರಾಗೈತಿಹಾಸ ಕಾಲದಿಂದ ಮಹತ್ವ ಪಡೆದಿರುವ ಸ್ಥಳಗಳಲ್ಲಿ ನೆಲೆಗೊಂಡಿರುವುದನ್ನು ಸ್ಪಷ್ಟಪಡಿಸಲಾಗಿದೆ.

* ಇದುವರೆಗಿನ ಅಧ್ಯಯನಗಳು ಉತ್ತರ ಕರ್ನಾಟಕದ ಕೆಲವು ಮೈಲಾರನ ಕ್ಷೇತ್ರಗಳನ್ನು ಜಾನಪದೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿತ್ತು. ಚಾರಿತ್ರಿಕವಾದ ಅಧ್ಯಯನಗಳು ಅಲ್ಲಲ್ಲಿ ನಡೆದಿರುವುದು ಕಂಡುಬರುತ್ತದೆ. ಹಾಗಾಗಿ ವಿಶಾಲವಾದ ಕರ್ನಾಟಕದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಚಾರಿತ್ರಿಕವಾದ ಅಂಶಗಳನ್ನು ವಿಶ್ಲೇಷಿಸುವ ಮತ್ತು ವಿವರಿಸುವ ಪ್ರಯತ್ನ ಮಾಡಲಾಗಿದೆ.

* ಮೈಲಾರ ಪರಂಪರೆಯು ಶ್ರೀಶೈಲದಿಂದ ಆರಂಭವಾದ ಎರಡು ಶಾಖೆಗಳು. ಕರ್ನಾಟಕದ ಯಾದಗಿರಿ, ಗುಲ್ಬರ್ಗಾ, ಬೀದರ್‌ನಿಂದ ಮಹಾರಾಷ್ಟ್ರ ಪುಣೆಯವರೆಗೆ ಹರಡಿಕೊಂಡಿದೆ. ಹಾಗೂ ತುಂಗಭದ್ರ ನದಿಯ ವಿರುದ್ಧ ದಿಕ್ಕಿನಲ್ಲಿ ಕಂಪ್ಲಿ, ತೆಕ್ಕಲಕೋಟೆ, ಬಳ್ಳಾರಿ, ದೇವರಗುಡ್ಡ ಮತ್ತು ದೇವಿಹೊಸೂರುಗಳಲ್ಲಿ ನೆಲೆಸಿತು ಎಂದು ಸ್ಪಷ್ಟಪಡಿಸಲಾಗಿದೆ.

* ಈ ಪರಂಪರೆಯು ಪ್ರಾಚೀನವಾಗಿ ಇದ್ದು ರಾಷ್ಟ್ರಕೂಟರ ಕಾಲದಲ್ಲಿ ಆರಂಭವಾಗಿ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದೇವಾಲಯಗಳು ನಿರ್ಮಾಣವಾಗಿವೆ. ಹಾಗೂ ನೊಳಂಬರ ಕಾಲದಲ್ಲಿ ಮೈಲಾರನಿಗೆ ಮೂರ್ತಿಶಿಲ್ಪದ ಸ್ವರೂಪವನ್ನು ನೀಡಲಾಗಿದೆ. ವಿಜಯನಗರ ಕಾಲಾವಧಿಯಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದು ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು, ನಂಬಿಕೆ ಆಚರಣೆಗಳನ್ನು ವಿಶೇಷವಾಗಿ ಕಂಡುಬರುತ್ತವೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

* ವಿಶಾಲವಾದ ಕರ್ನಾಟಕದಲ್ಲಿ ಉತ್ತರ ಕರ್ನಾಟಕದ ಭಾಗಗಳಲ್ಲಿ ಮೈಲಾರನಿಗೆ ಸಂಬಂಧಿಸಿದಂತೆ ಪ್ರಾಚೀನವಾಗಿ ಕಲ್ಯಾಣ ಚಾಲುಕ್ಯರಿಂದ ಹಿಡಿದು ವಿಜಯಗರೋತ್ತರ ಕಾಲದಲ್ಲಿ ದೇವಾಲಯಗಳು ನಿರ್ಮಾಣವಾಗಿವೆ. ಆದರೆ ದಕ್ಷಿಣ ಕರ್ನಾಟಕದ ಮೈಲಾರ ನೆಲೆಗಳು ವಿಜಯನಗರ ಹಾಗೂ ವಿಜಯನಗರೋತ್ತರವಾಗಿ ನಿರ್ಮಾಣವಾಗಿವೆ ಎಂಬುದನ್ನು ಅಧ್ಯಯನದಿಂದ ಸ್ಪಷ್ಟಪಡಿಸಲಾಗಿದೆ.

